ಶ್ರೀಯೈ ನಮಃ

ಶ್ರೀಮತೇ ರಾಮಾನುಜಾಯ ನಮಃ

ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ



# ಆಚಾರ್ಯಕೃತ್ಯಾಧಿಕಾರಸ್ತ್ರಿಂಶಃ



**ಅಧಿಜಿಗಮಿಷುರಾದ್ಯಂ ಧಾಮ ದಿವ್ಯಂ ತ್ರಿಧಾಮ್ನಃ**
**ಶ್ರುತವಿವಿಧಪರೀಕ್ಷಾಶೋಧಿತೇ ಕ್ವಾಪಿ ಪಾತ್ರೇ**

---

ಅವತಾರಿಕೆಯು ಚರಮಶ್ಲೋಕಾಧಿಕಾರದಿಂದ ಮೂರನೆಯ ತುಂಬಾ ಮುಖ್ಯವಾದ ಮಂತ್ರಭಾಗವು ಮುಗಿಯಿತು. “ **ಗುರುಂ ಪ್ರಕಾಶಯೇದ್ಧೀಮಾನ್ ಮಂತ್ರಂ ಯತ್ನೇನಗೋಪಯೇತ್** ” ಎಂದು ಹೇಳಲ್ಪಟ್ಟಿರುವುದರಿಂದ, ಗುರು ಪರಂಪರಾಸಾರದಲ್ಲಿ ಸರ್ವೋತ್ಕೃಷ್ಟನಾಗಿ ಜ್ಞಾನನಿಷ್ಠೆ ಆಚಾರನಿಷ್ಠೆಗಳಿಂದ ಶೋಭಿಸುವ ಗುರುವನ್ನು ಆಶ್ರಯಿಸಿಯೇ ಈ ರಹಸ್ಯಾರ್ಥಗಳನ್ನು ಪಡೆಯತಕ್ಕದೆಂಬುದು ಏರ್ಪಟ್ಟಿತು. ಅಂತಹ ವರಿಷತಕ್ಕ ಆಚಾರ್ಯಸ್ಥಾನಕ್ಕೆ ಯೋಗ್ಯರಾದವರು ಹೇಗಿರಬೇಕೆಂಬುದು ಈ **ಆಚಾರ್ಯಕೃತ್ಯಾಧಿಕಾರದಲ್ಲಿ** ಚರ್ಚಿಸಲ್ಪಡು-ತ್ತದೆ. ಈ ರಹಸ್ಯಾರ್ಥಗಳ ಉಪದೇಶಕ್ಕೆ ಅರ್ಹನಾದ ಶಿಷ್ಯನು ಹೇಗಿರಬೇಕೆಂಬುದು ಮುಂದಿನ ಅಧಿಕಾರವಾದ **ಶಿಷ್ಯಕೃತ್ಯಾಧಿಕಾರದಲ್ಲಿ** ಚರ್ಚಿಸಲ್ಪಡುತ್ತದೆ. ಇವೂ ಮತ್ತು **ನಿಗಮನಾಧಿಕಾರವೂ** ಸೇರಿ ಈ ರಹಸ್ಯತ್ರಯದ ಚತುರ್ಥಭಾಗವಾಗಿರುತ್ತದೆ. ಆದರೆ ಅಂತಹ ಶ್ರೇಷ್ಠರಾದ ಜ್ಞಾನಾಚಾರನಿಷ್ಠೆಗಳಿಂದ ಶೋಭಿಸುವವರು ಸಿಕ್ಕುವುದು ದುರ್ಲಭವು. ಅಂತಹ ಆಚಾರ್ಯರು ಶ್ರೀರಂಗಾದಿ ದಿವ್ಯದೇಶಗಳಲ್ಲಿ ದೊರೆಯಬಹುದಾದುದರಿಂದ ಪ್ರಯತ್ನಪಟ್ಟು ಅಲ್ಲಿಗೆ ತೆರಳಿ ಅವರನ್ನು ಆಶ್ರಯಿಸಿ ಗ್ರಂಥಾರಂಭಗಳನ್ನು ಮಾಡಿ, ಅಲ್ಲಿಯೇ ಇದ್ದು ವ್ಯಾಸಂಗವೂ ಸಾಧ್ಯವಿಲ್ಲವಾದರೆ ಅವರಲ್ಲಿ ಗ್ರಂಥಶಾಂತಿಯನ್ನು ನೆರವೇರಿಸಿ ಬರಬಹುದು. ಅಂತಹ ಆ ಮಹಾಗುರುಗಳ ಪ್ರಭಾವದಿಂದ ಗ್ರಂಥಾವಲೋಕನವು ಸುಕರವಾಗಿ ಸ್ವಾಮಿ ದೇಶಿಕರವರು ಹೇಳಿದುದನ್ನು ಕನ್ನಡಕ್ಕೆ ಪರಿವರ್ತನೆಯನ್ನು ಮಾಡಿದುದೂ ಅಲ್ಲದೆ ಅವುಗಳ

**ಅನಘಗುಣದಶಾಯಾ ಮಾಹಿತಸ್ನೈ ಹಮಾರ್ಯಃ**
**ಪ್ರದಿಶತಿ ನಿರಪಾಯಂ ಸಂಪ್ರದಾಯಪ್ರದೀಪಮ್ ॥**

---

ಉಪಪಾದನೆಯನ್ನೂ ಮಾಡಿರುತ್ತೇನೆ. ಆದುದರಿಂದ ಅಂಥವರ ವ್ಯಾಸಂಗಕ್ಕೆ ತುಂಬಾ ಉಪಯುಕ್ತವಾಗುವ ಹಾಗೆ ಗುರುಗಳ ಕೃಪಾಪ್ರಭಾವ ಮತ್ತು ಶ್ರೀನಿವಾಸನ ಕೃಪಾಪ್ರಭಾವಗಳಿಂದಲೂ ಇದು ಬರೆಯಲ್ಪಟ್ಟಿರುತ್ತದೆಯಾದುದರಿಂದ ಪ್ರಪನ್ನರಿ-ಗೆಲ್ಲಾ ಉಪಾದೇಯವಾಗಬಹುದೆಂದು ನಂಬಿರುತ್ತೇನೆ.

ಅವರಲ್ಲಿ ಆಚಾರ್ಯರ ಮುಖ್ಯಕರ್ತವ್ಯವು ಸತ್ಸಂಪ್ರದಾಯ ಪ್ರವರ್ತನೆಯು ಅದು ಈ ಶ್ಲೋಕದಲ್ಲಿ ಹೇಳಲ್ಪಡುತ್ತದೆ. ಅದು ಎಂತಾದ್ದೆಂದರೆ, ಹಿಂದಿನ ಅಧಿಕಾರ ದಲ್ಲಿ **ಆಚಾರ್ಯರ್‌ಗಳ್ ಸಚ್ಛಿಷ್ಯರುಗಳುಕ್ಕು ಉಪದೇಶಿಪ್ಪರ್‌ಗಳ್** ಎಂದು ಹೇಳಿದುದೇ ಆಚಾರ್ಯರ ಮುಖ್ಯವಾದ ಇತಿಕರ್ತವ್ಯತೆಯೆಂದು ತಿಳಿಸುತ್ತಾರೆ.

ಅರ್ಥವು:—**ತ್ರಿಧಾಮ್ನಃ**—ತನಗೆ ಪ್ರಿಯರಾದ ಶಿಷ್ಯರುಗಳಿಗೆ ಅನುಗ್ರಹಾರ್ಥವಾಗಿ ರೂಪವನ್ನು ತಾಳಿ ಮೂರು ಮುಖ್ಯಸ್ಥಳಗಳಾದ ಕ್ಷೀರಾಬ್ಧಿ, ಆದಿತ್ಯ ಮಂಡಲ, ಪ್ರಪನ್ನನ ಹೃದಯ ಇವುಗಳನ್ನು ಹೊಂದಿರುವ ಪರಮಪುರುಷನ ಎಂದು ಸಾರದೀಪಿಕೆಯವರು ಅರ್ಥಮಾಡಿಕೊಳ್ಳುತ್ತಾರೆ. ಇದಕ್ಕೆ ಪ್ರಮಾಣವಾಗಿ "**ಕ್ಷೀರಾಬ್ಧಿ ರ್ಮಂಡಲಂಭಾನೋ ಹೃದಯಾನಿಮನೀಷಿಣಾಮ್। ತ್ರೀಣಿಧಾಮಾನಿ ಮೇ ಸಂತಿತ್ರಿಧಾಮಾಹಮಿತಿ ಸ್ಮೃತಃ**" ಎಂಬ ಭಗವದ್ವಾಕ್ಯವನ್ನು ಉದಾಹರಿಸಿರುತ್ತಾರೆ. ಆದರೆ ಮುಂದೆ ಆದ್ಯಂಧಾಮವು ದಿವ್ಯ ವೈಕುಂಠವೆಂದು ಹೇಳಲ್ಪಟ್ಟಿರುವುದರಿಂದ, ನಾರಾಯಣಾದಿಸಿ ಸಾರಸಂಗ್ರಹಾಚಾರ್ಯರುಗಳು "**ಅಂಭಸ್ಯ-ಪಾರೇ ಭುವನಸ್ಯ ಮಧ್ಯೇ ನಾಕಸ್ಯ ಪೃಷ್ಠೇ ಮಹತೋ ಮಹೀಯರ್ಾ** ಎಂಬ ತೈತ್ತರೀಯನಾರಾಯಣೀಯವನ್ನು ಉದಾಹರಿಸಿ, **ಅಪಾರೇ ಅಂಭಸಿ** ಎಂದರೆ ಕ್ಷೀರಸಮುದ್ರದಲ್ಲಿ **ಭುವನಸ್ಯ ಮಧ್ಯೇ**-ಎಂಬುದರಿಂದ ಅಂತರಿಕ್ಷವು ಭಾನುಮಂಡಲ ಸೂರ್ಯಮಂಡಲದಲ್ಲಿ, **ನಾಕಸ್ಯ ಪೃಷ್ಠೇ** ದುಃಖಗಂಧವಿಲ್ಲದಿರುವ ವೈಕುಂಠಲೋಕದ ಮೇಲುಭಾಗ, ಹೀಗೆ ಮೂರು ಸ್ಥಳಗಳಲ್ಲಿ ರೂಪವನ್ನು ತಾಳಿರುವವನು. ಆದುದರಿಂದ ತ್ರಿಧಾಮನು, ಅಂತಹ ಪುರುಷನಿಗೆ ಇದೇ ಸರಿಯಾದ ಅರ್ಥವಾಗಿ ತೋರುತ್ತದೆ. **ಆದ್ಯಂ**—ಎಲ್ಲಾದಕ್ಕೂ ಆದಿಯಾದ, **ದಿವ್ಯಂ**—ಹೇಯಗಂಧವಿಲ್ಲದೆ ತೇಜೋಮಯವಾದ, **ಧಾಮ**—ಉತ್ಕೃಷ್ಟವಾಗಿ ಪ್ರಕಾಶಿಸುತ್ತಿರುವ ಸ್ಥಳವನ್ನು, **ಅಧಿಜಿಗಮಿಷುಃ**—ಹೊಂದಬೇಕೆಂದಿರುವ, **ಆರ್ಯಃ**—ಮಹಾಕುಲದಲ್ಲಿ ಹುಟ್ಟಿ ಪಾಪಗಳಿಂದ ದೂರವಾಗಿರುವ ಪೂಜ್ಯರಾದ ಆಚಾರ್ಯರು, ಶ್ರುತ ವಿವಿಧ ಪರೀಕ್ಷಾ ಶೋಧಿತೇ, **ಶ್ರುತ**—ಶಾಸ್ತ್ರಗಳಲ್ಲಿ ಹೇಳಲ್ಪಟ್ಟ, **ವಿವಿಧ ಪರೀಕ್ಷಾ**—ನಾನಾವಿಧಗಳಾದ ಪರೀಕ್ಷೆಗಳಿಂದ, **ಶೋಧಿತೇ**—ಸತ್ಪಾತ್ರವೆಂದು ಅರಿಸಲ್ಪಟ್ಟ, **ಕ್ವಾಪಿ**

**ಪಾತ್ರೇ**ಎಲ್ಲಿಯಾದರೂ ಇದ್ದು, ಬಂದು ಪ್ರದಕ್ಷಿಣ ನಮಸ್ಕಾರಾದಿಗಳಿಂದ ಪ್ರಾರ್ಥಿಸುವ ಸತ್ಪಾತ್ರದಲ್ಲಿ, ದೀಪದ ಪರವಾಗಿ ಅನ್ವಯಿಸುವಾಗ ಒಳ್ಳೇ ಪಾತ್ರೆಯಲ್ಲಿ, **ಅನಘಗುಣದಶಾಯಾಂ**-ಸತ್ವೋನ್ಮೇಷ ಉಂಟಾಗಿರುವ ಅವಸ್ಥೆಯಲ್ಲಿ, **ಅಹಿತ ಸ್ನೇಹಂ ಯಥಾತಥಾ—ದೇಶಿಕೋ ನೋ ದಯಾಳುಃ** ಎಂದು ಹೇಳಿರುವಂತೆ ಶಿಷ್ಯನಲ್ಲಿ ವಿಶೇಷ ಪ್ರೀತಿಯನ್ನು ಇಟ್ಟಿರೋಣವು ಹೇಗೋ ಹಾಗೆ, ಸಂಪ್ರದಾಯವನ್ನು ಒಂದು ಬೆಳಗುತ್ತಿರುವ ದೀಪಕ್ಕೆ ರೂಪಕಮಾಡಿ ಹೇಳಿರುವುದರಿಂದ ಶ್ಲೇಷೆಯಿಟ್ಟು ಹೇಳಿರುತ್ತಾರೆ. ಸ್ನೇಹವೆಂದರೆ ದೀಪವು ಬೆಳಗಬೇಕಾದರೆ ಎಣ್ಣೆಯು ಆವಶ್ಯಕವು. ಪ್ರೀತಿಯೆಂಬ ಎಣ್ಣೆಯಿಂದ ಕೂಡಿರೋಣ ಹೇಗೋ ಹಾಗೆ ಎಂಬರ್ಥವು. **ನಿರಪಾಯಂ**-ಅಪಾಯವಿಲ್ಲದೆ, ಸಾಧಾರಣ ದೀಪವು ಗಾಳಿಯಿಂದ ಆರಿಹೋಗುವ ಅಪಾಯ ಉಂಟು. ಇದು ಹಾಗಲ್ಲದೆ ನಿರಪಾಯವಾಗಿರುವ **ಸಂಪ್ರದಾಯ**ವೆಂಬ ಪ್ರದೀಪವು. ಇಂತಹ ಉತ್ಕೃಷ್ಟ ದೀಪವನ್ನು, ಶಿಷ್ಯನ ಅಜ್ಞಾನಾಂಧಕಾರವನ್ನು ಹೋಗಲಾಡಿಸುವ ಉತ್ಕೃಷ್ಟ ದೀಪವನ್ನು, **ಪ್ರದಿಶತಿ** – ಚೆನ್ನಾಗಿ ಪ್ರದರ್ಶಿಸುತ್ತಾರೆ. ಆಚಾರ್ಯರಾದವರು ತಾವು ತಮ್ಮ ಪರಮಾಚಾರ್ಯರಿಂದ ಅಧಿಕರಿಸಿದ ಉಪದೇಶವನ್ನೆಲ್ಲಾ ತಾವೂ ಚೆನ್ನಾಗಿ ಪರೀಕ್ಷಿಸಲ್ಪಟ್ಟ ಸತ್ವವೃದ್ಧಿಯುಳ್ಳ ಸತ್ಪಾತ್ರನಾದ ಸಚ್ಛಿಷ್ಯನಿಗೆ ವಿಶೇಷ ಪ್ರೀತಿಯಿಂದ ದೇಹಾವಸಾನದೊಳಗಾಗಿ ಉಪದೇಶಿಸಿ, ಆ ಬ್ರಹ್ಮವಿದ್ಯೆಯನ್ನು ಆತನಲ್ಲಿಡಬೇಕೆಂಬ ಸತ್ಸಂಪ್ರದಾಯವೆಂಬ ದೀಪವು ಆರದಹಾಗೆ ಬೆಳಗುತ್ತಾ ಶಾಶ್ವತವಾಗಿ **ರಾಮಾನುಜಾಚಾರ್ಯ ದಿವ್ಯಜ್ಞಾ ವರ್ಧತಾಮಭಿವರ್ಧತಾಂ** ಎಂದು ಹೇಳಿರುವ ಹಾಗೆ, ಶಾಶ್ವತವಾಗಿರಬೇಕೆಂಬ ಆಶಯವನ್ನು ಈ ಶ್ಲೋಕದಲ್ಲಿ ಪ್ರದರ್ಶಿಸಿರುತ್ತಾರೆ. ಈ ಸಂಪ್ರದಾಯಪ್ರದೀಪವು ಆಚಾರ್ಯರಿಂದ ಶಿಷ್ಯರಿಗೂ ಅವರಿಂದ ಅವರ ಶಿಷ್ಯರಿಗೂ ಹೀಗೆ ಶಾಶ್ವತವಾಗಿ ನಡೆದುಕೊಂಡು ಬರಬೇಕೆಂಬ ಭಾವವು. ಹೀಗೆಯೇ ಅನೇಕ ಕಡೆಗಳಲ್ಲಿ ನಡೆದುಬರುತ್ತಾ ಇದೆ. ಆದರೆ ಈಗಿನ ದುರ್ದೆಶೆಯನ್ನು ನೋಡಿದರೆ ಈ ಅಮೋಘ ಸಂಪ್ರದಾಯ ಸ್ಥಿತಿಯು ಏನಾಗುತ್ತದೋ ಎಂಬ ಕಾತುರವು ಬಾಧಿಸುತ್ತಿರುತ್ತದೆ.

**ಉಪಪಾದನೆಯು-ಅಧಿಜಿಗಮಿಷುಃ ಆರ್ಯೈಃ** ಎಂಬ ಪದಗಳಿಂದ ಆಚಾರ್ಯರನ್ನು ಹೇಳಿದುದರಿಂದ ಆಚಾರ್ಯರ ಮುಖ್ಯಕರ್ತವ್ಯವು ಬೋಧಿತವು. ಆದುದರಿಂದಲೇ ಈ ಅಧಿಕಾರಕ್ಕೆ ಆಚಾರ್ಯಕೃತ್ಯಾಧಿಕಾರವೆಂಬ ಹೆಸರು. **ಪಾತ್ರಸ್ಥಮಾತ್ಮಜ್ಞಾನಂಚ ಕೃತ್ವಾಪಿಂಡಂ ಸಮುತ್ಸೃಜೇತ್ । ವಿದ್ಯಯೈವ ಸಮಂ ಕಾಮಂ ಮರ್ತವ್ಯಂ ಬ್ರಹ್ಮವಾದಿನಾ** ಎಂಬಲ್ಲಿ ಹೇಳಿರುವ ಹಾಗೆ ಬ್ರಹ್ಮವಿತ್ತಾದ ಆಚಾರ್ಯರು ತಮ್ಮ ಬ್ರಹ್ಮಜ್ಞಾನವನ್ನು ಸತ್ಪಾತ್ರದಲ್ಲಿಟ್ಟು ಅನಂತರ ದೇಹತ್ಯಾಗ ಮಾಡಬೇಕೆಂದು ವಿಧಿಸಿರುತ್ತದೆ. ಆದುದರಿಂದ ಮೋಕ್ಷವನ್ನು ಕುರಿತು ಹೋಗುವ ಆಚಾರ್ಯರು ಈ ಸತ್ಸಂಪ್ರದಾಯದೀಪವು ಬೆಳಗುವ ಹಾಗೆ ಸಚ್ಛಿಷ್ಯನಿಗೆ

ಉಪದೇಶಿಸತಕ್ಕದ್ದೆಂದು ವಿಧಿಸಲ್ಪಟ್ಟಿತು. ಮುಖ್ಯವಾಗಿ ಈ ರಹಸ್ಯತ್ರಯಾರ್ಥಗಳನ್ನೆಲ್ಲಾ ಸತ್ಪಾತ್ರನಾದ ಶಿಷ್ಯನಿಗೆ ಉಪದೇಶಿಸತಕ್ಕುದೆಂದು ಹೇಳಲ್ಪಟ್ಟಿತ್ತು. ಆಗಲಿ, ಹೀಗೆ ಹೇಳುತ್ತಿರುವ ದೇಶಿಕವರ್ಯರೇ ಸಚ್ಛಿಷ್ಯಾದಿ ವಿವೇಕವಿಲ್ಲದೆ ಸರ್ವರಿಗೂ ವೇದ್ಯವಾಗುವ ಹಾಗೆ ಸಾಧಾರಣ ತಮಿಳಿನಲ್ಲಿ ಬರೆಯಬಹುದೋ ? ಅದನ್ನನುಸರಿಸಿ ದಾಸನು ಕನ್ನಡದಲ್ಲಿ ಬರೆಯಬಹುದೋ ? ಎಂದಾಕ್ಷೇಪ ತಂದರೆ, ಇಂತಹ ಗ್ರಂಥಗಳು ಶ್ರುತಿ ಉಪನಿಷತ್ತುಗಳ ಹಾಗೆ ಅಚ್ಚುಹಾಕಲ್ಪಟ್ಟಿದ್ದರೂ, ಸಾಧಾರಣವಾಗಿ ಅದರಲ್ಲಿ ಅಭಿರುಚಿ ಇಲ್ಲದವರು ಕಣ್ಣೆತ್ತಿ ಕೂಡ ನೋಡುವುದಿಲ್ಲವು. ಗ್ರಂಥಾದಿಯಲ್ಲೇ ಈ ಗ್ರಂಥಗಳನ್ನು ಅಧಿಕರಿಸುವ ಪ್ರಕಾರವನ್ನು ವಿಶದವಾಗಿ ತಿಳಿಸಿರುವೆವು. ಈ ಶ್ಲೋಕದಲ್ಲಿ ಉಪಪಾದಿತವಾಗಿರುವ ಸದಾಚಾರ್ಯರನ್ನು ಹೋಗಿ ಆಶ್ರಯಿಸಿ, ಅಲ್ಲಿಯೇ ಕಾಲಕ್ಷೇಪವನ್ನು ಮುಗಿಸಿ ಗ್ರಂಥ ಶಾಂತಿಯನ್ನು ಮಾಡಲು ಸಾಧ್ಯವಿಲ್ಲದವರಿಗೆ ಸಹಾಯಕರವಾಗಿರಲೆಂದು ಬರೆದಿರುವುದರಿಂದ **ಸತ್ಸಂಪ್ರದಾಯದೀಪವು** ಚೆನ್ನಾಗಿ ಬೆಳಗಲಿ ಎಂಬ ಆಶಯಿಂದ ಬರೆದುದಾದುದರಿಂದ ಏನೊಂದೂ ಪ್ರತ್ಯವಾಯವಿಲ್ಲವು. ಅಸತ್ತಾದ ಅಪಾತ್ರನಾದವನು ಈ ಪುಸ್ತಕಗಳನ್ನು ಕಣ್ಣೆತ್ತಿ ಕೂಡ ನೋಡನು. ಆದುದರಿಂದ ಸತ್ಸಂಪ್ರದಾಯ ಪ್ರವರ್ತನೆಗೆ ಏನೊಂದೂ ಹಾನಿಯಿಲ್ಲವು.

ಇಲ್ಲಿ **ಆದ್ಯಂ ಧಾಮ ದಿವ್ಯಂ** ಎಂಬುದರಿಂದ ಸ್ವಯಂಪ್ರಕಾಶವಾದ ನಿತ್ಯವಿಭೂತಿಯಲ್ಲಿರುವ ದಿವ್ಯ ವೈಕುಂಠವು ಹೇಳಲ್ಪಟ್ಟಿತು. **ಆದ್ಯಂ ಧಾಮವು** ವಿಷ್ಣುಲೋಕವೆಂದು ಏಕೆ ಅರ್ಥಮಾಡಕೂಡದು ? ಎಂದರೆ ಬ್ರಹ್ಮಾಂಡದೊಳಗೆ ಇರುವದಾಗಿ ಸೃಷ್ಟ್ಯಾದಿಗಳಿಗೆ ಒಳಗಾಗಿರುವುದರಿಂದ **ಆದ್ಯಂ** ಎಂದು ಹೇಳಿಸಿಕೊಳ್ಳುವದಿಲ್ಲವು. ಆದ್ಯಂ ಎಂದರೆ ಅನಾದಿಸಿದ್ಧವಾದುದೆಂಬರ್ಥವು. ಇಲ್ಲಿ **ದಿವ್ಯಂ** ಎಂಬುದರಿಂದ ಸ್ವಯಂ ಪ್ರಕಾಶವಾದ ಶುದ್ಧಸತ್ವರೂಪವಾದುದೆಂದು ಹೇಳಲ್ಪಟ್ಟಿತು.

ಉಪದೇಶಕ್ಕೆ ಅರ್ಹನೇ ಇಲ್ಲವೇ ಎಂಬುದನ್ನು ಚನ್ನಾಗಿ ಪರೀಕ್ಷಿಸಿ ಆಚಾರ್ಯರು ಉಪದೇಶಿಸಬೇಕೆಂಬುದು **ಶ್ರುತ ವಿವಿಧ ಪರೀಕ್ಷಾ ಶೋಭಿತೇ** ಎಂಬುದರಿಂದ ಹೇಳಲ್ಪಟ್ಟಿತು. ಇದಕ್ಕೆ ಪ್ರಮಾಣವು—“ **ನಾ ಪುತ್ರಾಯ ನಾ ಶಿಷ್ಯಾಯ ನಾ ಸಂವತ್ಸರಾತ್ರೋಷಿತಾಯ ನಾ ಪರಿಜ್ಞಾತ ಕುಲಶೀಲಾಯ ದಾತವ್ಯಾ । ಸಂವತ್ಸರಂ ತದರ್ಧಂವಾ ಮಾಸತ್ರಯ ಮಥಾಪಿವಾ । ಪರೀಕ್ಷ್ಯ ವಿವಿಧೋಪಾಯೈಃ ಕೃಪಯಾ ನಿಸ್ಪೃಹೋವದೇತ್ ॥** ಎಂದಿರುತ್ತದೆ. ಕ್ವಾಪಿ ಎಂಬ ಪ್ರಯೋಗದಿಂದ ಅಂತಹ ಶಿಷ್ಯನು ದೊರಕುವುದು ದುರ್ಲಭವೆಂದು ತೋರಿಬರುತ್ತದೆ. ಸಂವತ್ಸರವೋ, ಆರು ತಿಂಗಳೋ, ಮೂರು ತಿಂಗಳೋ, **ಸಂವತ್ಸರಂ ತದರ್ಧಂವಾ ಮಾಸತ್ರಯ ಮಥಾಪಿವಾ । ಪರೀಕ್ಷ್ಯ** ಎಂಬಲ್ಲಿ ಹೇಳಿರುವ ಹಾಗೆ ಪರೀಕ್ಷಿಸಿ ಸತ್ಪಾತ್ರನೆಂದು ತೋರಿದರೆ ಉಪದೇಶಿಸತಕ್ಕದ್ದೆಂದು ಹೇಳಿರುವುದ

ರಿಂದ, ಈಗಿನ ಸಂಪ್ರದಾಯರೀತ್ಯಾ ಸಾರ್ವಜನಿಕ ಉಪನ್ಯಾಸ (Public Lecture) ಗಳಲ್ಲಿ ಸರ್ವರಿಗೂ ಉಪದೇಶಿಸುವುದು ನಿರಾಕರಿಸಲ್ಪಟ್ಟಿತು. ವಿವಿಧ ಪರೀಕ್ಷೆಗಳು ಹೇಗೆಂದರೆ, ಸಮಿತ್ತು, ದರ್ಭೆ, ಪುಷ್ಪವೇ ಮೊದಲಾದವುಗಳನ್ನು ತರಹೇಳುವುದು. ಸ್ವಾಮಿಯ ಆರಾಧನೆಗೆ ಬೇಕಾದ ಪರಿಕರಗಳನ್ನು ತರಹೇಳುವುದು, ನಿತ್ಯನೈಮಿತ್ತಿಕಗಳನ್ನು ಚೆನ್ನಾಗಿ ಅನುಷ್ಠಿಸುತ್ತಾನೆಯೇ ಎಂದು ಸಾತ್ವಿಕಾಹಾರಾದಿ ನಿಯಮಗಳು ಉಂಟೇ ಎಂದು ಪರೀಕ್ಷಿಸೋಣವು. ದೀಪದ ಪರವಾಗಿ ಶ್ಲೇಷೆಯಿಂದ ತೋರುವ ಅರ್ಥವು, ಶ್ರುತ-ಕೇಳಿ ತಿಳಿದ ವಿವಿಧ ಹುಣಸೇಹಣ್ಣು, ಬೂದಿ, ನೀರುಗಳೇ ಮೊದಲಾದ ನಾನಾವಿಧವಾಗಿ, ಪರೀಕ್ಷ್ಯಾಶೋಧಿತೇ-ಹೀಗೆ ಪರೀಕ್ಷಿಸಿ ಶೋಧಿಸಲ್ಪಟ್ಟ ಕ್ವಾಪಿಪಾತ್ರವೆಂದರ್ಥವು. ದೀಪ ವಿಷಯವಾದ ಶ್ಲೇಷಾರ್ಥದಿಂದ ದೀಪವು ಚೆನ್ನಾಗಿ ಉರಿಯಬೇಕಾದರೆ ದೀಪವು ಶುದ್ಧವಾಗಿರಬೇಕೆಂಬ ಭಾವವು ತೋರಿಬರುತ್ತದೆ. ಅನಘಗುಣದಶಾಯಾಂ ಎಂಬಲ್ಲೂ ಶ್ಲೇಷಾರ್ಥದಿಂದ ದೀಪವು ಉರಿಯಲು ಶುದ್ಧವಾದ ಗುಣವೆಂದರೆ ಬತ್ತಿಯನ್ನು ಹೊಂದಿರುವ ದೆಶೆಯು ಆವಶ್ಯಕವೆಂದೂ ಹಾಗೆಯೇ ಎಣ್ಣೆಯೂ ಕೂಡ ದೀಪಕ್ಕೆ ಆವಶ್ಯಕವು; ಅದನ್ನು ಆಹಿತಸ್ನೇಹಂ ಎಂಬ ಪ್ರಯೋಗದಿಂದ ಸೂಚಿಸಿರುತ್ತಾರೆ: ಸ್ನೇಹ ಶಬ್ದಕ್ಕೆ ಎಣ್ಣೆ ಎಂಬರ್ಥವೂ ಉಂಟೆಂದು ಹಿಂದೆಯೇ ಹೇಳಲ್ಪಟ್ಟಿತ್ತು. ಆದುದರಿಂದ **ತಸ್ಮೈ ಸ ವಿದ್ವಾನ್ ಉಪಸನ್ನಾಯ ಸಮ್ಯಕ್ಪ್ರಶಾಂತಚಿತ್ತಾಯ ಯೇನಾಕ್ಷರಂ ಪುರುಷಂ ವೇದಸತ್ಯಂ ಪ್ರೋವಾಚ ತಾಂ ತತ್ವತೋ ಬ್ರಹ್ಮವಿದ್ಯಾಂ** ಎಂಬುದು ಅನುಸಂಧೇಯವು.

ಅನಘಗುಣದಶಾಯಾಂ ಎಂಬುದರಿಂದ ಉಪದೇಶದಿಂದ ಶಿಷ್ಯನು ಶಾಂತೋ-ದಾಂತನಾಗಿ ಸತ್ವಾಧಿಕ್ಯವುಳ್ಳವನಾಗಿರಬೇಕೆಂಬುದು ಏರ್ಪಟ್ಟಿತು. ಗೀತೆಯಲ್ಲಿ **ಇದಂತೇ ನಾತಪಸ್ಕಾಯ ನಾಭಕ್ತಾಯ ಕದಾಚನ। ನಚಾಶುಶ್ರೂಷವೇ ವಾಚ್ಯಂ ನಚಮಾಂ ಯೋಭ್ಯಸೂಯತಿ** ಎಂದು ಸತ್ಪಾತ್ರನಲ್ಲದ ಶಿಷ್ಯನಿಗೆ ಉಪದೇಶ ಕೂಡದೆಂದು ನಿರೋಧಿಸಿ, ಭಗವದ್ಭಕ್ತರೇ ಉಪದೇಶಕ್ಕೆ ಅರ್ಹರೆಂದು **ಮದ್ಭಕ್ತೇಷ್ವಭಿಧಾಸ್ಯತಿ** ಎಂಬಲ್ಲಿ ಶ್ರೀ ಕೃಷ್ಣಭಗವಾನರವರೇ ಹೇಳಿರುತ್ತಾರೆ. ಇದರ ತಾತ್ಪರ್ಯವೇನೆಂಬುದನ್ನು ಶ್ರೀ ದೇಶಿಕರವರೇ ಮುಂದೆ ಉಪಪಾದಿಸುತ್ತಾರೆ. ರಜೋಗುಣ, ತಮೋಗುಣಗಳಿಗೆ ವಶವಾಗದಿರುವ ಸತ್ವಗುಣಾಧಿಕ್ಯವುಳ್ಳವರೇ ಉಪದೇಶಾರ್ಹರೆಂದು ಇಲ್ಲಿ ಹೇಳಲ್ಪಟ್ಟಿತು.

ಆಹಿತಸ್ನೇಹಂ ಎಂಬುದರಿಂದ ಆಚಾರ್ಯರು ತಮ್ಮ ಶಿಷ್ಯನಲ್ಲಿ ವಿಶೇಷ ಪ್ರೀತಿಯನ್ನು ಪ್ರದರ್ಶಿಸುವುದರ ಮೂಲಕ **ದೇಶಿಕೋಮೇ ದಯಾಳುಃ** ಎಂದು ಹೇಳಿರುವಹಾಗೆ ಪ್ರವರ್ತಿಸತಕ್ಕದ್ದು. ಕೇವಲ ವಾತ್ಸಲ್ಯ ಕಾರುಣ್ಯಾತಿಶಯದಿಂದ ಉಪದೇಶಿಸತಕ್ಕದ್ದು. ಆತನಲ್ಲಿ ತನ್ನ ಸ್ವಂತ ಮಗನಿಗಿಂತ ಹೆಚ್ಚಾಗಿ ಪ್ರೀತಿಯನ್ನಿಡ

ತಕ್ಕದ್ದು. ಸ್ವಂತ ಮಗನೇನಾದರೂ ಇದ್ದರೆ, ಅದು ಸೋಪಾಧಿಕ ಸಂಬಂಧದಿಂದ ಬಂದುದು. ಈ ಪ್ರೀತಿಯಾದರೋ ಶಾಶ್ವತವಾಗಿ ನಿತ್ಯವಾಗಿ ಮುಂದಕ್ಕೆಲ್ಲಾ ಇರುವುದರಿಂದ ನಿರುಪಾಧಿಕವಾದುದು. ಆದುದರಿಂದ ಈ ಗುರು ಶಿಷ್ಯ ಸಂಬಂಧವು ತುಂಬಾ ಉತ್ಕೃಷ್ಟವಾದುದು. ಮತ್ತು ಇನ್ನು ಯಾವುದನ್ನೂ ಶಿಷ್ಯನಿಂದ ಪ್ರತ್ಯುಪಕಾರರೂಪದಲ್ಲಿ ಅಪೇಕ್ಷಿಸತಕ್ಕದ್ದಲ್ಲವು. ಏಕೆಂದರೆ ಶಾಸ್ತ್ರವು **ನಿಸ್ಪೃಹೋಪದೇತ್** ಎಂದು ವಿಧಿಸುತ್ತದೆ. ಹಾಗಾದರೆ ಆಚಾರ್ಯರು ಇಂತಹ ಉಪದೇಶಕ್ಕೆ ಯಾವ ಪ್ರಯೋಜನವನ್ನು ಬಯಸಬೇಕು ? ಎಂದರೆ ಶಿಷ್ಯನ ಆತ್ಮೋಜ್ಜೀವನವೇ ತನಗೆ ಮುಖ್ಯ ಪ್ರಯೋಜನವಾಗಿ ಭಾವಿಸತಕ್ಕದ್ದೆಂದು ಇದರಿಂದ ಸೂಚಿಸಲ್ಪಟ್ಟಿತು. ಇದರಿಂದ ಆಚಾರ್ಯರು ಶಿಷ್ಯರುಗಳಿಗೆ ಧನಾಶೆಯನ್ನು ಇಟ್ಟು ಉಪದೇಶಿಸತಕ್ಕದ್ದಲ್ಲವು. ಆದರೆ ಶಿಷ್ಯರು ತಮ್ಮ ಕೃತಜ್ಞತಾಭಾವದಿಂದ ಧನವನ್ನೂ ದೇಹಯಾತ್ರೆಗೆ ಬೇಕಾದ ಪರಿಕರಗಳನ್ನೂ ಸಮರ್ಪಿಸಬಹುದು. ಆಚಾರ್ಯರಿಗೆ ಶಿಷ್ಯೋಪದೇಶಕ್ಕೆ ಮುಖ್ಯವಾದುದು ಯಾವುದು ? ಎಂದರೆ ಮೂರು ರಹಸ್ಯಾರ್ಥಗಳನ್ನೆಲ್ಲಾ ಚೆನ್ನಾಗಿ ಉಪಪಾದಿಸಿ ಅನಂತರ ಆಚಾರ್ಯಕೃತ್ಯವನ್ನು ಹೇಳಿರುವುದರಿಂದ, ಸಪರಿಕರಗಳಿಂದ ಕೂಡಿದ ಈ ರಹಸ್ಯತ್ರಯಗಳ ಉಪದೇಶವೇ ಎಂಬುದು ಸೂಚಿತವು. ಆಚಾರ್ಯಪೀಠವನ್ನಲಂಕರಿಸಿದ ಸಾಧಾರಣ ಲೌಕಿಕ ಮಹನೀಯರೆ ಸ್ವಾರ್ಥತೆಯನ್ನು ತ್ಯಾಗ ಮಾಡಿ ಪರಪ್ರಯೋಜನದ ಪ್ರವೃತ್ತಿಯುಳ್ಳವರೇ ಆಗಿರುವಾಗ ವೈರಾಗ್ಯಶಿಖಾಮಣಿಗಳಾದ ಆಚಾರ್ಯರು ತಮ್ಮ ಶಿಷ್ಯರ ಶ್ರೇಯಸ್ಸಿಗಾಗಿಯೇ ಪ್ರವೃತ್ತಿಯುಳ್ಳವರೆಂಬುದು ಕೈಮುತಿಕನ್ಯಾಯಸಿದ್ಧವು.

ಸಂಪ್ರದಾಯಪ್ರದೀಪವೆಂಬುದರಿಂದ ಭಗವಂತನೇ ಆದಿಯಲ್ಲಿ ಚತುರ್ಮುಖನಿಗೂ, ಆ ಚತುರ್ಮುಖನು ತನ್ನ ಪುತ್ರರಿಗೂ, ಹೀಗೆ ಪಾರಂಪರ್ಯವಾಗಿ ಅವಿಚ್ಛಿನ್ನವಾಗಿ ಸಾಂಪ್ರದಾಯಿಕವಾಗಿ ಬಂದುದು ತತ್ವಹಿತಪುರುಷಾರ್ಥಗಳನ್ನು ಕುರಿತ ಸಮೀಚೀನಜ್ಞಾನರೂಪಪ್ರದೀಪವು. ಪ್ರದೀಪಪ್ರಯೋಗವೇಕೆಂದರೆ, ಈ ವಿಲಕ್ಷಣರೂಪದೀಪವು ಅಜ್ಞಾನಾಂಧಕಾರವನ್ನು ಹೋಗಲಾಡಿಸಿ ಪರಮ ಶ್ರೇಯಸ್ಸಾಧನವಾದ ತತ್ವಹಿತಪುರುಷಾರ್ಥಗಳ ಯಥಾರ್ಥಜ್ಞಾನವಾದುದರಿಂದ ಅಂತಹ ಸಂಪ್ರದಾಯಪ್ರದೀಪವೇ ಈಗ ರಹಸ್ಯತ್ರಯವೆಂಬ ಗ್ರಂಥರೂಪದಲ್ಲಿ ಪ್ರದರ್ಶಿಸಲ್ಪಟ್ಟಿರುವದೆಂಬ ಭಾವವನ್ನು ಮುಖ್ಯವಾಗಿ ಇದರಿಂದ ಗ್ರಹಿಸತಕ್ಕದ್ದು. ಇದು ನಿರುಪಾಯವಾದುದು ಹೇಗೆ ? ಎಂದರೆ ಲೌಕಿಕ ದೀಪದ ಹಾಗೆ ಆರಿಹೋಗದೆ ಶಾಶ್ವತವಾಗಿ ಬೆಳಗುವಂತಾದ್ದು ; ಏತರಿಂದ ಎಂದರೆ ಐಹಿಕ ಮತ್ತು ಸ್ವರ್ಗಾದಿ ಭೋಗಗಳಲ್ಲಿ ಇಚ್ಛೆಯು ಇದಕ್ಕೆ ಅಪಾಯವು ! ಅಂತಹ ಅಪಾಯವು ಯಾವುದೂ ಇಲ್ಲದಿರೋಣವು ಹೇಗೋ ಹಾಗೆ ಈ ಜ್ಞಾನೋಪದೇಶವು ಮಾಡುತ್ತದೆಂಬ ಭಾವವು ಇಲ್ಲಿ ಉಪದಿಶತಿ ಎಂಬ ಪ್ರಯೋಗವು ಉಪದಿಶೇತ್ ಆಚಾರ್ಯರು ಉಪದೇಶಿಸತಕ್ಕದ್ದೆಂಬ ಅರ್ಥದಲ್ಲಿ ಎಂದು ಭಾವಿಸತಕ್ಕದ್ದು.

ಈ ರಹಸ್ಯತ್ರಯಗಳು ಅತ್ಯಮೋಘವಾದುವು. ತುಂಬಾ ಗೋಪ್ಯವಾದವು ತಮ್ಮ ಗುರುಗಳಿಂದ ಸಂಪಾದಿಸಿದುದನ್ನು ತನಗೆ ದೇಹ ವಿಯೋಗವಾಗುವುದರೊಳಗೆ ಸತ್ಪಾತ್ರನನ್ನು ಹುಡುಕಿ ಆತನಿಗೆ ಉಪದೇಶಿಸತಕ್ಕದ್ದೆಂಬ ಸಂಪ್ರದಾಯವನ್ನು ಕಾಪಾಡತಕ್ಕದ್ದೆಂಬುದು ಮುಖ್ಯವಾದ ಆಚಾರ್ಯಕೃತ್ಯವೆಂಬ ಭಾವವು.

ಈ ಮೂರು ರಹಸ್ಯಗಳು ಸಾಂಪ್ರದಾಯಿಕವಾಗಿ ನಾಥಮುನಿ, ಶ್ರೀ ಯಾಮುನ ಮುನಿ, ಯತಿವರ್ಯರೇ ಮೊದಲಾದವರುಗಳ ಮೂಲಕ ಬಂದವು; ಆದುದರಿಂದ ಆಚಾರ್ಯರು ಸಚ್ಛಿಷ್ಯರಿಗೆ ಉಪದೇಶಿಸತಕ್ಕದ್ದೇ ಮುಖ್ಯವಾದ ಇತಿಕರ್ತವ್ಯತೆಯೆಂದು ಹೇಳಲ್ಪಟ್ಟಿತು. ಪರಮಾಚಾರ್ಯರ ಮೂಲಕ ಪರಂಪರಯಾ ಗುರುಶಿಷ್ಯ ಕ್ರಮದಲ್ಲಿ ಉಪದಿಷ್ಟವಾದುದೇ ಸಂಪ್ರದಾಯವಾದರೆ ಆದಿಯಲ್ಲಿ ಭಗವಂತನಿಂದ ಚತುರ್ಮುಖ ನಿಗೂ, ಚತುರ್ಮುಖನು ತನ್ನ ಶಿಷ್ಯರಿಗೂ, ಹೀಗೆ ಕ್ರಮವಾಗಿ ಬಂದಿರುಹಾಗೆ ಎಂದರೆ ಈ ಮೂರು ರಹಸ್ಯಗಳೂ ಶ್ರುತಿಗಳಲ್ಲೇ ಉಪಪಾದಿತವಾಗಿ ಬಂದಿರುವುದರಿಂದ ಯಾವ ಆಕ್ಷೇಪಣೆಗಳಿಗೂ ಅವಕಾಶವಿಲ್ಲವು. ಆದರೆ ನಮ್ಮ, ಮೇಲೆ ಹೇಳಿದ ಆಚಾರ್ಯವರ್ಯರುಗಳು ಅವುಗಳನ್ನೇ ಉಪಪಾದಿಸಿ ಅವುಗಳ ಮಹಾತ್ಮ್ಯಗಳನ್ನು ವಿವರಿಸಿ ಉಪದೇಶಿಸಿದರೆಂದು ತಿಳಿಯತಕ್ಕದ್ದು. **ಓಮಿತ್ಯೇಕಾಕ್ಷರಂ** ಇತ್ಯಾದಿ ಯಲ್ಲೂ "**ಮುಮುಕ್ಷುರ್ವೈ ಶರಣ ಮಹಂಪ್ರಪದ್ಯೇ**" ಇತ್ಯಾದಿಗಳಲ್ಲೂ ಈ ವಿಷಯವು ವ್ಯಕ್ತವು.

ಈ ಹಿಂದಿನ ಶ್ಲೋಕದಲ್ಲಿ ಸಂಗ್ರಹವಾಗಿ ಹೇಳಿದ ಅರ್ಥವನ್ನೇ ಉಪಪಾದಿ ಸುತ್ತಾರೆ. ಗುರುಪರಂಪರಾಸಾರದಲ್ಲಿ ಉಪದೇಶಿಸಿದ ರೀತ್ಯಾ ಶ್ರೀಮನ್ನಾರಾಯಣನೇ ಲೋಕಗುರುವೆಂದು ಹೇಳಿ ಆತನಿಂದ ಚತುರ್ಮುಖನೂ ಹೀಗೆ ಕ್ರಮವಾಗಿ ಸದಾಚಾರ್ಯ ಪರಂಪರೆಯಿಂದ ಉಂಟಾದ ಸತ್ಸಂಪ್ರದಾಯ ಮೂಲಕ ಪ್ರಾಪ್ತವಾದ ಜ್ಞಾನಗಳಲ್ಲಿ ರಹಸ್ಯತ್ರಯಜ್ಞಾನವೇ ಸಾರತಮವೆಂದು ಸಾರನಿಷ್ಕರ್ಷಾಧಿಕಾರದಲ್ಲಿ ಹೇಳಿದರು. ಇವುಗಳ ಉಪದೇಶವನ್ನು ಸದಾಚಾರ್ಯಕಟಾಕ್ಷದಿಂದ ಹೊಂದಿದವನು, ಪರಮ ಸಾತ್ವಿಕನಾಗಿ ದೇವಪ್ರಕೃತಿಯಾದ ಶಿಷ್ಯನನ್ನು ಪರೀಕ್ಷಿಸಿ ತನ್ನ ದೇಹಾವಸಾನ ಪ್ರಾಪ್ತವಾಗುವುದರೊಳಗೆ ಮೂರನೆಯವನಾದ ಅಸುರಪ್ರಕೃತಿಯಾದ ಅಯೋಗ್ಯನು ಗ್ರಹಿಸದಹಾಗೆ ಉಪದೇಶಿಸತಕ್ಕದ್ದೆಂದೂ, ಅದರಲ್ಲಿ ತತ್ತ್ವತ್ರಯಾಧಿಕಾರದಲ್ಲಿ ನಿರೂಪಿ ಸಿರುವ ತತ್ತ್ವತ್ರಯಜ್ಞಾನವನ್ನೂ ಸಾಂಗಪ್ರಪದನಾಧಿಕಾರದಲ್ಲಿ ಹೇಳಲ್ಪಟ್ಟಹಿತವನ್ನೂ ಉತ್ತರಕೃತ್ಯಾಧಿಕಾರಲ್ಲಿ ಹೇಳಿದ ಕೃತಕೃತ್ಯನಾದ ಶಿಷ್ಯನಿಗೆ ಉತ್ತರಕೃತ್ಯಾಂಶವನ್ನೂ ದೇಹಾವಸಾನಾನಂತರ ಉಂಟಾಗುವ ಪುರುಷಾರ್ಥವಾದ ಪರಿಪೂರ್ಣ ಬ್ರಹ್ಮಾನುಭವ ನಿತ್ಯಕೈಂಕರ್ಯಗಳ ಪ್ರಾಪ್ತಿವಿಷಯವಾದ ಜ್ಞಾನವನ್ನೂ, ಆಚಾರ್ಯರು ಉಪದೇಶಿಸ ತಕ್ಕದ್ದೆಂಬುದು ಸ್ಥಾಪಿತವು. ಈಗ ಆಚಾರ್ಯಕೃತ್ಯವನ್ನೇ ಸಪ್ರಮಾಣವಾಗಿ ಎರಡು

(೧) ಗೀ. ೧೧.೪೩ (೨) ಭಾರತ ಸಭಾಪರ್ವ ೪೧.೨೧

**ಅಸ್ಮಿನ್ ಶ್ಲೋಕೇ ಸಂಗೃಹೀತಮಾಚಾರ್ಯಕೃತ್ಯಂ ವಿಸ್ತರೇಣಾಹ**

**ಇಪ್ಪಡಿ (೧) "ಗುರುರ್ಗರೀಯಾನ್" ಎನ್ರುಮ್ (೨) "ತಮಿಮಂ ಸರ್ವ ಸಂಪನ್ನಮಾಚಾರ್ಯಂ ಪಿತರಂ ಗುರುಂ" ಎನ್ರುಮ್ ತೊಲುಗಿರಪಡಿಯೇ, ಪರಮಾಚಾರ್ಯನಾನ ಸರ್ವೇಶ್ವರನ್ ಮುದಲಾಗ ಸದಾಚಾರ್ಯ ಸಂಪ್ರದಾಯ ಸಮಾಗತಙ್ಗಳಾಯ್ ಸಿಂಹಾಸನ್ಯ ಮೇಲೇ ವಿಜಾತೀಯಂಗಳ್ ರಸಂ ತೆರಿಯಾದ ರಹಸ್ಯತ್ರಯಾರ್ಥಂಗಳೈ ಸಂಗ್ರಹೇಣ ಶೇರತು. ತಾಂಗಳುಮ್ ಅನುಸಂಧಿತ್ತು, (೩) ಯೋಗೋಪಾಯತ್ಯ ಯೋಗ್ಯಾನಾಂ ಯೋಗ್ಯಾನಾಂ ಸಂಪ್ರಯಚ್ಛಂ। ಇವುಮರ್ಥಂ ಸಮಾನ್ಯೋಮೋ ನೃಸ್ತಿ.**

---

ಮಹಾವಾಕ್ಯಗಳ ಮೂಲಕ ವಿಸ್ತರಿಸಿಯೂ ಅದನ್ನೇ ಸಂಗ್ರಹಿಸಿಯೂ ಹೇಳುತ್ತಾರೆ. **ಇಷ್ಟಂಹಿ ವಿದುಷಾಂಲೋಕೇ ಸಮಾಸವ್ಯಾಸಧಾರಣಮ್** ಎಂಬಲ್ಲಿ (ಭಾರ ಆದಿ. ೧) ಹೇಳಿರುವ ಹಾಗೆ ವಿಸ್ತರ ಸಂಗ್ರಹವೆರಡೂ ಪ್ರಾಜ್ಞರಿಗೆ ಇಷ್ಟವಾದುದರಿಂದ.

ಇಪ್ಪಡಿ-ಈ ರೀತಿಯಲ್ಲೇ **ವರ್ತಿಪ್ಪಾರ್ ಆಚಾರ್ಯರ್‌ಗಳ್** ಎಂಬ ಬಹುಮುಂದೆ ಕರ್ತೃಕ್ರಿಯಾಪದಗಳು ಇರುತ್ತವೆ. (೧) **ಗುರುರ್ಗರೀಯಾನ್**-ಅರ್ಜುನನು ಶ್ರೀಕೃಷ್ಣನ ಪರತ್ವವನ್ನು ಕಂಡು ಬೆರಗಾಗಿ ಸಾಧಾರಣ ಸ್ನೇಹಿತನು ಮತ್ತು ಬಂಧುವು ಎಂದು ಭಾವಿಸಿ, ಎಷ್ಟು ಅಪಚಾರಗಳನ್ನು ಎಸಗಿದೆನೋ ಎಂಬ ಭೀತಿಯಿಂದ ಆತನಲ್ಲಿ ಶರಣಾಗತಿಯನ್ನನುಷ್ಠಿಸಿ ಅಪರಾಧವನ್ನು ಕ್ಷಮಿಸು ಎಂದು ಹೇಳಿನ್ನ, ಪ್ರಾಪ್ಯರೂಪವಾದ ಪರವಾಸುದೇವರೂಪವನ್ನು ತೋರು ಎಂದು ಪ್ರಾರ್ಥಿಸುವ ಪ್ರಕರಣವು. ಪೂರಾ ಶ್ಲೋಕಕ್ಕೂ ವಿಶೇಷಾರ್ಥಗಳಿಗೂ ದಾಸನು ಬರೆದಿರುವ ಗೀತಾ ೧೪೯೧-೯ನೆಯ ಪುಟಗಳನ್ನು ನೋಡಿ; **ಗುರುರ್ಗರೀಯಾನ್**-ಲೋಕಗಳಿಗೆ ಪರಮ ಶ್ರೇಷ್ಠನಾದ ಗುರುವಾಗಿದ್ದೀ ಎಂದು ಅರ್ಜುನನು ಹೇಳುತ್ತಾನೆ. (೨) ಇದು ಯುಧಿಷ್ಠಿರ ಸಭೆಯಲ್ಲಿ ಭೀಷ್ಮರು ಶ್ರೀಕೃಷ್ಣ ಮಹಾತ್ಮೆಯನ್ನು ಶಿಶುಪಾಲನ ತಿಳುವಳಿಕೆಗಾಗಿ ಹೇಳುವ ಪ್ರಕರಣವು. ಇದು ಗುರುಪರಂಪರಾಸಾರದಲ್ಲೂ ಉದಾಹೃತವು. **ಸರ್ವಸಂಪನ್ನಂ**-ಕಲ್ಯಾಣಗುಣಗಣ ವಿಭೂತಿ ಐಶ್ವರ್ಯ ಲಕ್ಷ್ಮೀ ಇವರುಗಳಿಂದ ಪರಿಪೂರ್ಣನಾದ, **ಆಚಾರ್ಯಂ**-ತಾನು ಕೊಟ್ಟ ಶಾಸ್ತ್ರಕ್ಕನುಗುಣವಾಗಿಯೇ **ಆಚರತೀತಿ ಆಚಾರ್ಯಃ**-ಸ್ವಯಂ ಆಚರಿಸಿ ಧರ್ಮವನ್ನು ಸ್ಥಾಪಿಸಿದವನಾದ ಸರ್ವೇಶ್ವರನು ಹೇಗೆ ಪಿತಾ ಎಂದರೆ ಆತನಿಂದಲೇ

---

(೩) ಸಾತ್ವತ ೨೪-೩೭

ಉಂಟಾಗಿ, ಹಿತವಾದ ಮಾರ್ಗದಲ್ಲಿ ಪ್ರವರ್ತಿಸುವ ಹಾಗೆ ಮಾಡಿ ಸಿದ್ಧೋಪಾಯನಾಗಿ ವರ್ತಿಸುವುದರಿಂದಲೂ, ಆತನಿಂದಲೇ ನಮಗೆ ಸತ್ತಾಸ್ಥಿತಿನಿಯಮನಾದಿಗಳಾದುದರಿಂದಲೂ, ಸರ್ವೇಶ್ವರನು ಪರಮಾಚಾರ್ಯನು ಎಂಬುದಕ್ಕೆ ಆರು ಕಾರಣಗಳನ್ನು ಗುರುಪರಂಪರಾಸಾರದ ೫೩-೬೦ನೇ ಪುಟವನ್ನು ಪರಾಂಬರಿಸಿ. ಆತನೂ ರಾಮಕೃಷ್ಣಾದ್ಯವತಾರಗಳಲ್ಲಿ ನಮ್ಮ ಹಾಗೆ ಶಾಸ್ತ್ರಪ್ರಮಾಣಗಳಿಗೆ ಒಳಪಟ್ಟವನು. ಧರ್ಮಸಂಸ್ಥಾಪನಕ್ಕಾಗಿ ಅವತರಿಸಿದವನು ಧರ್ಮವನ್ನು ಅತಿಕ್ರಮಿಸುವನೇ? ರಾಮನು ಶಬರಿಯ ಉಚ್ಛಿಷ್ಟವನ್ನು ಸ್ವೀಕರಿಸಿದನು, ಶ್ರೀಕೃಷ್ಣನು ವಿದುರನು ಮುಟ್ಟಿದ ಅನ್ನವನ್ನು ಸ್ವೀಕರಿಸಿದನು, ಅನೇಕ ಗೋಪಸ್ತ್ರೀಯರೊಂದಿಗೆ ರಮಿಸಿದನು, ಇತ್ಯಾದಿ ಅಧರ್ಮಗಳನ್ನು ಎಸಗಿದನೆಂದು ಹೇಳುವರು. ಇದು ಅಜ್ಞಾನವಿಜೃಂಭಣೆಯು. ದುರ್ಯೋಧನಸಭೆಯಲ್ಲಿ ತಾನು ಎಳ್ಳಷ್ಟಾಗಲಿ ಧರ್ಮವನ್ನು ಅತಿಕ್ರಮಿಸುವುದಿಲ್ಲವೆಂದು ಶ್ರೀಕೃಷ್ಣನು ಪ್ರತಿಜ್ಞೆಯನ್ನು ಮಾಡಿ ಹೇಳಿರುತ್ತಾರೆ. ಆದುದರಿಂದ ಆತನು ಪರಮಾಚಾರ್ಯನು.

**ಗುರುರ್ಗರೀಯಾನ್** ಎಂಬ ಪ್ರಯೋಗವು "**ಪಿತಾಸಿ ಲೋಕಸ್ಯ ಚರಾಚರಸ್ಯ ತ್ವಮಸ್ಯಪೂಜ್ಯಶ್ಚಗುರುರ್ಗರೀಯಾನ್**" ಎಂಬ ಗೀತಾ ೧೧ನೆಯ ಅಧ್ಯಾಯದಲ್ಲಿ ಅರ್ಜುನನ ಶರಣಾಗತಿವಾಕ್ಯವನ್ನು ಸೂಚಿಸುತ್ತದೆ. **ಗರೀಯಾನ್** ಎಂದರೆ ಶ್ರೇಷ್ಠನಾದ ಗುರುವು ಶ್ರೀಕೃಷ್ಣನು ಎಂಬ ತಾತ್ಪರ್ಯವು. **ಪಿತರಂ ಗುರುಂ**– ಲೋಕಪಿತಾವಾಗಿಯೂ, ಲೋಕದ ಜನರ ಅಂಧಕಾರ ಹೋಗುವ ಹಾಗೆ ಉಪದೇಶಕನಾದ ಶ್ರೀಕೃಷ್ಣನನ್ನು ಅಗ್ರಪೂಜೆಗೆ ಅರ್ಹನನ್ನಾಗಿ ಭಾವಿಸೋಣವೆಂದು ಶಿಶುಪಾಲನನ್ನು ಸಮಾಧಾನ ಮಾಡುವ ಪ್ರಕರಣವು. **ಎನ್ರುಮ್ ಶೊಲ್ಲುಗಿರಪಡಿಯೇ** ಎಂದು ಹೇಳಿರುವಹಾಗೆ, **ಪರಮಾಚಾರ್ಯನಾದ ಸರ್ವೇಶ್ವರನ್**–ಆತನಿಗಿಂತಲೂ ಇನ್ನು ಯಾರು ಉತ್ಕೃಷ್ಟರಿಲ್ಲದುದರಿಂದ ಸರ್ವೋತ್ಕೃಷ್ಟಾಚಾರ್ಯನಾದ ಸರ್ವೇಶ್ವರನು, **ಮೊದಲಾಗ**–ಮೊದಲುಮಾಡಿಕೊಂಡು, **ಸದಾಚಾರ, ಸಂಪ್ರದಾಯ ಸಮಾಗತಂಗಳಾಯ್**–ಆತನಿಂದ ಚತುರ್ಮುಖ, ಆತನಿಂದ ಆತನ ಮಕ್ಕಳು, ಹೀಗೆ ಉಪದೇಶಮೂಲಕ ಉಂಟಾದ ಸಂಪ್ರದಾಯ ಮೂಲಕ ಪರಂಪರಯಾ ಬಂದ, **ಸಿಂಹೀಸ್ತನಂಪೋಲೇ**–ಆಕಳು, ಎಮ್ಮೆ, ಆಡು ಮುಂತಾದುವುಗಳ ಹಾಲು ಎಲ್ಲರಿಗೂ ವೇದ್ಯವಾದುದು, ಆದರೆ ಹೆಣ್ಣು ಸಿಂಹದ ಸ್ತನದಲ್ಲಿರುವ ಹಾಲು ಯಾರೂ ಅರಿಯರು. ಹಾಗ, **ವಿಜಾತೀಯರ್ಕ್ಕು**–ಸಜಾತೀಯವಾದ ಸಿಂಹದ ಮರಿಗೆ, ಸಿಂಹದ ಹಾಲಿನ ರುಚಿಯು ತಿಳಿಯುವುದು. ವಿಜಾತೀಯ–ಬೇರೆ ಜಾತಿಗೆ ಸೇರಿದ ಪಶು ಮೊದಲಾದುವುಗಳು ಅರಿಯಲಾರವು. ಹಾಗೆಯೇ ನಮ್ಮ ಸಿದ್ಧಾಂತಗಳನ್ನು ನಮ್ಮ ಆಚಾರ್ಯರುಗಳ ಮೂಲಕ ತಿಳಿಯಬಹುದು. ನಮ್ಮ ಸಿದ್ಧಾಂತದ ಗಂಧ ತಿಳಿಯದ, ವಿಜಾತೀಯರಾದ ಅದ್ವೈತಿಗಳೇ ಮೊದಲಾದವರಿಗೆ,

**ಸ್ವಸ್ತಿ ವೋಽಸ್ತು ವ್ರಜಾಮ್ಯಹಮ್" "ಇದಂತೇ ನಾತಪಸ್ಕಾಯ ನಾಭಕ್ತಾಯ ಕದಾಚನ। ನ ಚಾ ಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ॥ ಇಮಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿದಾಸ್ಯತಿ। ಭಕ್ತಿಂ ಮಯಿಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ"**

---

**ರಸಂ ತೆರಿಯಾದ** – ಸ್ವಾರಸ್ಯವೇ ತಿಳಿಯದ, **ರಹಸ್ಯತ್ರಯಾರ್ಥಂಗಳೈ** – ಈ ಮೂರು ರಹಸ್ಯಗಳಲ್ಲೂ ತೋರುವ ಅಭಿಪ್ರಾಯಗಳನ್ನೆಲ್ಲಾ, **ಸಂಗ್ರಹೇಣ ಶೇರ್ತು** – ಬೇಡದ ವಿಸ್ತಾರವಿಲ್ಲದೆಯೂ, ಬೇಕಾದ ಸಂಕೋಚವಿಲ್ಲದ ಹಾಗೂ, ಉಪದೇಶಭಾಗವನ್ನು ಸಂಗ್ರಹಿಸಿ, **ತಾಂಗಳುಮ್**–ಆಚಾರ್ಯರುಗಳಾದ ತಾವೂ, **ಅನುಸಂಧಾನ** ಮಾಡಿ, ಶಿಷ್ಯರಿಗೂ ಆನಂದ ಉಂಟಾಗುವ ಹಾಗೆ ಉಪದೇಶಿಸಿ, ತಾವೂ ಆನಂದಪಟ್ಟು, **ಇಮಮರ್ಥಂ**–ಈ ರಹಸ್ಯಾರ್ಥವನ್ನು, **ಯಃ**–ಯಾವ ಆಚಾರ್ಯನು, **ಅಯೋಗ್ಯಾನಾಂ**–ಉಪದೇಶಕ್ಕೆ ಅನರ್ಹರಾಗಿರುವವರಿಗೆ, **ಗೋಪಾಯತಿ**–ಮರೆಸಿ ರಹಸ್ಯವನ್ನು ರಕ್ಷಿಸುವನೋ, **ಯೋಗ್ಯಾನಾಂ**–ಉಪದೇಶಕ್ಕೆ ಅರ್ಹರಾದವರಿಗೆ, **ಸಂಪ್ರಯಚ್ಛತಿ**–ಚೆನ್ನಾಗಿ ಉಪದೇಶವನ್ನು ಕೊಡುವನೋ, **ಸಃ**-ಇಂತಹ ಆಚಾರ್ಯನು, **ಮೇ**–ನನಗೆ, **ಮಾನ್ಯಃ**–ಪ್ರೀತಿಸಲು ಯೋಗ್ಯನು. **ವಃ**–ನಿಮಗೆ, **ಸ್ವಸ್ತಿರಸ್ತು**–ಮಂಗಳ ಉಂಟಾಗಲಿ, **ಅಹಂ**–ನಾನು, **ವ್ರಜಾಮಿ**–ಹೋಗಿಬರುವೆನು. ಇದು ಸಾತ್ವತಸಂಹಿತೆಯಲ್ಲಿ ಭಗವದ್ವಚನವು. **"ಇದಂತೇನಾತಪಸ್ಕಾಯ"** ಎಂಬುದು ಗೀತಾವಚನವು. ಶ್ರೀಕೃಷ್ಣನು ಗೀತೋಪದೇಶಾಂತ್ಯದಲ್ಲಿ ಅರ್ಜುನನಿಗೆ ಹೇಳುವ ವಾಕ್ಯವು. ದಾಸನು ಬರೆದಿರುವ ಗೀತಾ ೨೫೯ನೆಯ ಪುಟವನ್ನು ನೋಡಿ. ಬ್ರಹ್ಮವಿದ್ಯೆಯು ಪರಮಗುಹ್ಯವಾದುದು. ಆದುದರಿಂದ ಯಾರು ಯಾರಿಗೆ ಹೇಳತಕ್ಕದ್ದಲ್ಲವೆಂಬುದನ್ನೂ ತಿಳಿಸಿ, ಮುಂದಿನ ಶ್ಲೋಕದಿಂದ ಯಾರಿಗೆ ಅಗತ್ಯವಾಗಿ ಉಪದೇಶಿಸತಕ್ಕದ್ದೆಂಬುದನ್ನೂ ತಿಳಿಸುತ್ತಾರೆ. ಮೊದಲು ಅನಧಿಕಾರಿಯನ್ನು ಕುರಿತು ಹೇಳುತ್ತಾರೆ.

**ತೇ**–ನಿನಗಾಗಿ ಹೇಳಿದ, **ಇದಂ**–ಈ ಉಪದೇಶವನ್ನು, **ಅತಪಸ್ಕಾಯ**–ಯಜ್ಞದಾನ ತಪಸ್ಸೇ ಮೊದಲಾದ ನಿತ್ಯನೈಮಿತ್ತಿಕಾನುಷ್ಠಾನವಿಲ್ಲದವನಿಗೂ **ನ ವಾಚ್ಯಂ**–ಹೇಳತಕ್ಕದ್ದಲ್ಲವು. **ನ ಚ ಅಭಕ್ತಾಯ**–ನನ್ನಲ್ಲಿ ಭಕ್ತಿ ಇಲ್ಲದವನಿಗೂ ಹೇಳತಕ್ಕದ್ದಲ್ಲವು; **ನ ಚಾ ಶುಶ್ರೂಷವೇ** – **ಶುಶ್ರೂಷಾ** ಎಂದರೆ **ಶ್ರೋತುಮಿಚ್ಛಾ**–ಆಚಾರ್ಯರು ಹೇಳಿದುದನ್ನು ಕೇಳಲು ಇಷ್ಟವು, ಅದಕ್ಕಾಗಿ ಅವರಿಗೆ ಮಾಡುವ ಸರ್ವವಿಧೋಪಚಾರವೆಲ್ಲಾ **ಶುಶ್ರೂಷಾ** ಶಬ್ದದಿಂದ ಬೋಧಿತವು. ಗುರುವಿಗೆ ಉಪಚಾರಮಾಡಿ ಆತನಿಂದ ಕೇಳಿ ತಿಳಿಯಬೇಕೆಂಬ ಶ್ರದ್ಧಾವಿಲ್ಲದವನಿಗೂ ಹೇಳತಕ್ಕದ್ದಲ್ಲವು, **ಮಾಂ**–ಆತನಿಗೆ ಯಾವಾಗಲೂ ಹಿತವನ್ನು ಮಾಡಬೇಕೆಂದು

**" ನಾ ವೇದನಿಷ್ಠಸ್ಯ ಜನಸ್ಯ ರಾಜನ್
ಪ್ರದೇಯಮೇತತ್ಪರಮಂ ತ್ವಯಾ ಭವೇತ್
ವಿವಿತ್ಸಮಾನಸ್ಯ ವಿಬೋಧಕಾರಕಂ
ಪ್ರಬೋಧಹೇತೋಃ ಪ್ರಣತಸ್ಯ ಶಾಸನಮ್ "**

---

ಕಾದಿರುವ ಸಿದ್ಧೋಪಾಯನಾಗಿ ಕಾದಿರುವ ನನ್ನನ್ನು, **ಯಃ** – ಯಾವನು, **ಅಭ್ಯಸೂಯತಿ**–ದ್ವೇಷಿಸುತ್ತಾನೋ ಅವನಿಗೂ ಸಹ ಹೇಳತಕ್ಕದ್ದಲ್ಲವು, ಇದರಿಂದ ಬಂದ ಶಿಷ್ಯನನ್ನು ಚೆನ್ನಾಗಿ ಪರೀಕ್ಷಿಸಿ, ಸದಾಚಾರವಿಲ್ಲದೆ, ಭಕ್ತಿವಿಶ್ವಾಸಗಳಿಲ್ಲದೆ ಭಗವಂತನನ್ನು ದ್ವೇಷಿಸುವವನಿಗೆ ಹೇಳತಕ್ಕದ್ದಲ್ಲವೆಂದು ತಿಳಿಸಿದರು. ಹಾಗಾದರೆ ಎಂತಹ ಶಿಷ್ಯನಿಗೆ ಉಪದೇಶಿಸತಕ್ಕದ್ದೆಂಬುದನ್ನು ಮುಂದಿನ ಶ್ಲೋಕದಿಂದ ತಿಳಿಸು ತ್ತಾರೆ. **ಇದಂ ಪರಮಂ ಗುಹ್ಯಂ**–ಇಂತಹ ತುಂಬಾ ಶ್ರೇಷ್ಠವಾಗಿ ಬಹಳ ರಹಸ್ಯವಾದ ಈ ಉಪಾಯಾನುಷ್ಠಾನವನ್ನು, ಅಧಿಕಾರಿಯು ಶಕ್ತನಾಗಿದ್ದರೆ ಕರ್ಮ ಯೋಗ ಶರಣಾಗತಿಭಕ್ತಿಯೋಗವನ್ನೂ, ಅಶಕ್ತನಾಗಿದ್ದರೆ ಅಂಗಿಶರಣಾಗತಿಯನ್ನೂ ಉಪದೇಶಿಸುವ ರಹಸ್ಯ ಎಂಬ ಭಾವವು. **ಮದ್ಭಕ್ತೇಷು**–ನನ್ನಲ್ಲಿ ಭಕ್ತಿ ಯಿರುವ ಮುಮುಕ್ಷುವಿಗೆ, **ಅಭಿದಾಸ್ಯತಿ**–ಹೇಳುತ್ತಾನೋ, **ಸಃ**–ಅಂತಹ ಆಚಾರ್ಯನು, **ಮಾಮೇವೈಷ್ಯತಿ**–ನನ್ನನ್ನೇ ಬಂದು ಸೇರುವನು. **ಅಸಂಶಯಃ**– ಈ ವಿಷಯದಲ್ಲಿ ಸಂಶಯ ಬೇಕಿಲ್ಲವು. ಇದು ಸತ್ಯವಾದುದು ಎಂಬ ಭಾವವು. ಆಚಾರ್ಯನಿಂದ ಪಡೆದ ಜ್ಞಾನವನ್ನು ತಾನೇ ಇಟ್ಟುಕೊಳ್ಳಬಾರದು. ಹಾಗೆ ಇಟ್ಟು ಕೊಂಡರೆ ಸರ್ವೇಶ್ವರನಿಗೆ ಇಷ್ಟವಿಲ್ಲವು. ಏಕೆಂದರೆ ಆಚಾರ್ಯನಿಗೆ ದ್ರೋಹಮಾಡಿ ದವನಾಗುವನು, ಮತ್ತು ವಿದ್ಯಾಚೋರನೆನಿಸುವನು. ಅದನ್ನು ಸತ್ಪಾತ್ರದಲ್ಲಿ ವಿನಿಯೋಗಿಸಿದರೆ ಸ್ವಾಮಿಗೆ ಅಂತವನಲ್ಲಿ ತುಂಬಾ ಪ್ರೀತಿಯೆಂದು, **ಮಾಮೇ ವೈಷ್ಯತ್ಯಸಂಶಯಃ** ಎಂದು ಹೇಳಲ್ಪಟ್ಟಿತು. ಹಾಗೆಮಾಡಿದರೇನೇ ಆಚಾರ್ಯ ಋಣವು ತೀರಿ ಕೃತಾರ್ಥನಾಗುವನು.

**ಹೇ ರಾಜನ್** – ಓ ಕರಾಳರಾಜನೇ, **ನಾ ವೇದನಿಷ್ಠಸ್ಯ** – ಭಾರತದಲ್ಲಿ ವಸಿಷ್ಠಕರಾಳಸಂವಾದದಲ್ಲಿ ಬರುವ ಶ್ಲೋಕವು, ವೇದನಿಷ್ಠಾರಹಿತರಾದ, **ಜನಸ್ಯ**– ಜನರಿಗೆ, **ಏತತ್** – ಈ, **ಪರಮಂ ಶಾಸನಮ್** – ಶ್ರೇಷ್ಠವಾದ ಶಾಸ್ತ್ರವು, **ಪ್ರದೇಯಂ**–ಕೊಡತಕ್ಕದ್ದು, **ನ ಭವೇತ್**–ಆಗತಕ್ಕದ್ದಲ್ಲವು ; ಒಂದು ವೇಳೆ ಆತನು, **ಪ್ರಬೋಧಹೇತೋಃ**–ನುಮ್ಮನೆ ಶ್ರದ್ಧಾನಂಬಿಕೆಗಳಿಲ್ಲದೇ ಬರೀ ಜ್ಞಾನ ಕ್ಕಾಗಿ, **ವಿವಿತ್ಸಮಾನಸ್ಯ**–ತಿಳಿಯಬೇಕೆಂಬ ಇಚ್ಛೆಯುಳ್ಳವನಾಗಿ, **ಪ್ರಣತಸ್ಯ**– ಬಂದು ನಮಸ್ಕರಿಸಿದವನಿಗೂ ಈ **ವಿಬೋಧಕಾರಕಂ**–ಈ ಜ್ಞಾನವನ್ನುಂಟು

**"ನದೇಯಂಮೇತಚ್ಚ ತಥಾಽನೃತಾತ್ಮನೇ ಶಠಾಯ ಕ್ಲೀಬಾಯ ನಜಿಹ್ಮಬುದ್ಧಯೇ। ನ ಪಂಡಿತಜ್ಞಾಯ ಪರೋಪತಾಪಿನೇ ದೇಯಂ ತ್ವಯೇದಂ ವಿನಿಬೋಧ ಯಾದೃಶೇ। ಶ್ರದ್ಧಾನ್ವಿತಾಯಾಽಥ ಗುಣಾನ್ವಿತಾಯ ಪರಾಪವಾದಾದ್ವಿರತಾಯ ನಿತ್ಯಂ॥ ವಿಶುದ್ಧಯೋಗಾಯ ಬುಧಾಯಚೈವ ಕ್ರಿಯಾವತೇಽಥ ಕ್ಷಮಿಣೇ ಹಿತಾಯ॥ ವಿವಿಕ್ತಶೀಲಾಯ ವಿಧಿಪ್ರಿಯಾಯ ವಿವಾದಭೀತಾಯ ಬಹುಶ್ರುತಾಯ।**

---

ಮಾಡುವ ಈ ಶ್ರೇಷ್ಠವಾದ ಬ್ರಹ್ಮವಿದ್ಯೆಯು, **ನ ಪ್ರದೇಯಂ**-ಕೊಡತಕ್ಕದ್ದಲ್ಲವು ಎಂದು "**ಪೂರ್ವೇಣಾನ್ವಯಃ**" ಎಂದು **ಸಾರಾಸ್ವಾದಿನಿ**ಯವರು ಅರ್ಥ ಮಾಡಿರುತ್ತಾರೆ.

ಇನ್ನು ಯಾರಿಗೆ ಉಪದೇಶಿಸಕೂಡದು ಎಂದರೆ ಮುಂದೆ ಹೇಳುತ್ತಾರೆ:—

**ತಥಾ**-ಹಾಗೆಯೇ, **ಅನೃತಾತ್ಮನೇ**-ಋಜುವಾದ ಮಾರ್ಗವನ್ನು ತ್ಯಜಿಸಿರುವವನಿಗೂ, ಎಂದರೆ ನಾಸ್ತಿಕನಿಗೆ ಅಥವಾ ಅಸತ್ಯಶೀಲನಿಗೆ, ಡಂಭಾಚಾರನಿಗೆ, **ಶಠಾಯ**-ವಂಚಕನಿಗೂ, "**ಗೂಢವಿಪ್ರಿಯಕೃಚ್ಛಠಃ**" ಗೂಢವಾಗಿ ಅಹಿತವನ್ನು ಮಾಡುವವನು ಶಠನೆಂದು ಹೇಳಲ್ಪಟ್ಟಿರುತ್ತದೆ. **ಕ್ಲೀಬಾಯ**-ನಪುಂಸಕನಿಗೂ (ಏಕೆಂದರೆ ಆತನಿಗೆ ಯೋಗ್ಯತೆ ಇಲ್ಲದ ಪಾತ್ರನಾದುದರಿಂದ). **ಜಿಹ್ಮಬುದ್ಧಯೇ**-ವಕ್ರವಾದ ಬುದ್ಧಿಯುಳ್ಳವನಿಗೂ, **ನ ದೇಯಂ**- (ಉಪದೇಶ) ಮಾಡತಕ್ಕದ್ದಲ್ಲವು, ಮತ್ತು **ನ ಪಂಡಿತಜ್ಞಾಯ**-ತಾನೇ ತುಂಬಾ ತಿಳಿದವನೆಂದು ಭಾವಿಸುವವನಿಗೂ, ಹೇಳತಕ್ಕದ್ದಲ್ಲವು ; ಮತ್ತು **ಪರೋಪತಾಪಿನೇ**-ಇತರರಿಗೆ ತಾಪವನ್ನುಂಟು ಮಾಡುವವನಿಗೂ ಕೊಡತಕ್ಕದ್ದಲ್ಲವು. ಯಾರಿಗೆ ಕೊಡತಕ್ಕದ್ದೆಂದರೆ ಹೇಳುತ್ತಾರೆ; **ಯಾದೃಶೇ** - ಎಂತವನಿಗಾದರೆ, **ತ್ವಯಾ**-ನಿನ್ನಿಂದ, **ಇದಂ**-ಈ ಗೂಢವಾದ ಉಪದೇಶವು, **ದೇಯಂ**-ಕೊಡಲ್ಪಡತಕ್ಕದ್ದೆಂಬುದನ್ನು, **ವಿನಿಬೋಧ**-ಚೆನ್ನಾಗಿ ತಿಳಿದುಕೋ; **ಶ್ರದ್ಧಾನ್ವಿತಾಯ**-ಶ್ರದ್ಧೆಯಿಂದ ಕೂಡಿದವನಿಗೆ ಎಂದರೆ ಭಕ್ತ್ಯತಿಶಯ ಉಳ್ಳವನಾಗಿ ಬ್ರಹ್ಮಜ್ಞಾನದಲ್ಲಿ ಆಶೆ ಮತ್ತು ತ್ವರಾಯುಳ್ಳವನಿಗೆ, **ಅಥ**-ಅನಂತರ, ಮತ್ತು **ಗುಣಾನ್ವಿತಾಯ**-ಒಳ್ಳೇ ಸಾತ್ವಿಕಗುಣಗಳಿಂದ ಕೂಡಿದವನಿಗೆ, ಶಮ ದಮಾದಿಗುಣಗಳಿಂದ ಕೂಡಿದವನಿಗೆ, **ಪರಾಪವಾದಾದ್ವಿರತಾಯ**-ಇತರರನ್ನು ನಿಂದಿಸುವುದರಲ್ಲಿ ಇಷ್ಟವಿಲ್ಲದವನಿಗೆ, **ವಿಶುದ್ಧಯೋಗಾಯ** - ಪರಿಶುದ್ಧವಾದ ಮನಸ್ಸಿನ ಸಂಕಲ್ಪವನ್ನು ಹೊಂದಿದವನಿಗೆ ಅಥವಾ ಪರಿಶುದ್ಧವಾದ ಭಕ್ತಿಯನ್ನು ಹೊಂದಿದವನಿಗೆ, ನಿರ್ದೋಷವಾದ ಯುಕ್ತಿಯುಳ್ಳವನಿಗೆ ಎಂದು ಸಾರಸಂಗ್ರಹ ವ್ಯಾಖ್ಯಾತೃಗಳ ಅಭಿಪ್ರಾಯವು. **ಬುಧಾಯಚೈವ**-ತಿಳುವಳಿಕೆಯುಳ್ಳವ

**ವಿಜಾನತೇಚೈವ ತಥಾ ಹಿತಂಕ್ಷಮಾದಮಾಯ ನಿತ್ಯಾತ್ಮಸಮಾಯ ದೇಹಿನಾಮ್॥ ಏತೈರ್ಗುಣೈರ್ಹೀನತಮೇ ನ ದೇಯಮೇ ತತ್ಪರಂ ಬ್ರಹ್ಮವಿಶುದ್ಧಮಾಹುಃ। ನ ಶ್ರೇಯಸಾಯೋಕ್ಷ್ಯತಿತಾದೃಶೇ ಕೃತಂ ಧರ್ಮಪ್ರವಕ್ತಾರಮಪಾತ್ರದಾನಾತ್॥ ಪೃಥ್ವೀಮಿಮಾಂ ಯದ್ಯಪಿ ರತ್ನಪೂರ್ಣಾಂ ದದ್ಯಾತ್ ನ್ನದೇಯಂತ್ವಿದಮವ್ರತಾಯ॥ ಜಿತೇಂದ್ರಿಯಾಯೈ ತದಸಂಶಯಂ ತೇ**

---

ನಿಗೆ ಎಂದರೆ ಉಪದೇಶಿಸಿದುದನ್ನು ಗ್ರಹಿಸುವ ಶಕ್ತಿಯುಳ್ಳವನಿಗೇನೇ, **ಕ್ರಿಯಾವತೇ** ಅನುಷ್ಠಾನಪರನಿಗೆ, **ಅಥ**–ಅನಂತರ, **ಕ್ಷಮಿಣೇ**–ಕ್ಷಮಾಗುಣಯುಕ್ತನಾದವನಿಗೆ, **ಹಿತಾಯ**–ಎಲ್ಲಾ ಪ್ರಾಣಿಗಳ ವಿಷಯದಲ್ಲೂ ಹಿತಾಚರಣೆಯುಳ್ಳವನಿಗೆ, **ವಿವಿಕ್ತಶೀಲಾಯ** – **“ಅರತಿರ್ಜನಸಂಸದಿ”** (ಗೀ ೧೩–೧೦) ಎಂಬಲ್ಲಿ ಹೇಳಿರುವ ಜನಸಮ್ಮರ್ದವಿರುವ ಪ್ರದೇಶದಲ್ಲಿರಲು ಇಷ್ಟವಿಲ್ಲದೆ ಏಕಾಂತವಾಗಿರುವ ಸ್ವಭಾವ ಉಳ್ಳವನಿಗೆ, **ವಿಧಿಪ್ರಿಯಾಯ**–ಶಾಸ್ತ್ರವಿಧಿಗಳಲ್ಲಿ ಪ್ರೀತಿಯುಳ್ಳ ಎಂದರೆ ತದನುಸಾರವಾಗಿ ಆಚರಿಸಬೇಕೆಂಬ ಶ್ರದ್ಧೆಯುಳ್ಳ ಅಥವಾ ಆಚಾರ್ಯನ ಆಜ್ಞಾನುಸಾರ ನಡೆಯುವದಲ್ಲಿ ಪ್ರೀತಿಯುಳ್ಳ, **ವಿವಾದಭೀತಾಯ**–ಕುತರ್ಕಗಳಿಗೆ ಭಯಪಡುವವನಿಗೂ, **ಬಹುಶ್ರುತಾಯ**–ಅನೇಕ ಶಾಸ್ತ್ರಗಳಲ್ಲಿ ಉಪದಿಷ್ಟನಾದ ಅಥವಾ ತಿಳಿದವನಾದವನಿಗೆ, **ತಥಾ**–ಹಾಗೆಯೇ, **ಹಿತಂ**–ತನಗೆ ಹಿತವನ್ನು ಮಾಡಿದುದನ್ನು, **ವಿಜಾನತೇಚೈವ**-ಕೃತಜ್ಞತಾಭಾವದಿಂದ ಅರಿತವನಿಗೆ, ಅಥವಾ **ಹಿತಕ್ಷಮಾ-ದಮಾಯ**-ಕ್ಷಮೆಯೂ ದಯೆಯೂ ಎರಡು ಯಾರಿಗೆ ಹಿತವೋ ಅಂತವನಿಗೆ, **ಹಿತಂ**-ಪಾಠವಾಗಿ ಹಿಂದಕ್ಕೆ ಅನ್ವಯವಾದರೆ, **ಕ್ಷಮಾದಮಾಯ**-ಕ್ಷಮೆಯಿಂದ ದಮವನ್ನುಳ್ಳವನಿಗೆ, ದಮವೆಂದರೆ ಬ್ರಹ್ಮಚರ್ಯರೂಪವಾದ ಇಂದ್ರಿಯಗಳನ್ನು ತಡೆಯುವ ಶಕ್ತಿಯುಳ್ಳವನಿಗೆ, **ದೇಹಿನಾಂ**-ಪ್ರಾಣಿಗಳ, **ನಿತ್ಯಾತ್ಮಸಮಾಯ**— **ವಿದ್ಯಾವಿನಯಸಂಪನ್ನೇ”** ಎಂಬಲ್ಲಿ (ಗೀ.೫–೧೮) ಉಪಪಾದಿಸಲ್ಪಟ್ಟಹಾಗೆ ನಿತ್ಯರಾದ ಆತ್ಮರೆಲ್ಲಾ ಸಮರು ಎಂದು ತಿಳಿದಿರುವನಿಗೆ, **ದೇಯಂ**-ಕೊಡತಕ್ಕದ್ದೆಂದು ಹಿಂದೆ ಈ ಸಂವಾದದ ಎರಡನೆಯ ಶ್ಲೋಕದಲ್ಲಿರುತ್ತದೆ. **ಏತೈರ್ಗುಣೈಃ**-ಈ ಮೇಲೆ ಹೇಳಿದ ಗುಣಗಳಿಂದ, **ಹೀನತಮೇ**-ಬಿಡಲ್ಪಟ್ಟವನಲ್ಲಿ, **ವಿಶುದ್ಧಂ**-ಪರಿಶುದ್ಧವಾದ, **ಏತತ್**-ಈ, **ಪರಂ**-ಶ್ರೇಷ್ಠವಾದ, **ಬ್ರಹ್ಮ**-ಪರಬ್ರಹ್ಮಬೋಧಕರಹಸ್ಯಜ್ಞಾನವು, **ನ ದೇಯಂ**-ಕೊಡಲ್ಪಡತಕ್ಕದ್ದಲ್ಲವೆಂದು, ಎಂದರೆ ಉಪದೇಶಿಸತಕ್ಕದ್ದಲ್ಲವೆಂದು, **ಪ್ರಾಹುಃ**-ಪ್ರಾಜ್ಞರಾದ ಶಾಸ್ತ್ರಜ್ಞರು ಹೇಳಿರುತ್ತಾರೆ. **ತಾದೃಶೇ**-ಅಂತಹ ಹೀನಗುಣನಲ್ಲಿ, **ಕೃತಂ**–ಉಪದೇಶವು ಮಾಡಲ್ಪಟ್ಟದುದಾಗಿ, **ಧರ್ಮವಕ್ತಾರಂ**–ಉಪಾಯಾನುಷ್ಠಾನರೂಪ ಧರ್ಮೋಪದೇಶ ಮಾಡುವವನನ್ನು, **ಶ್ರೇಯಸಾ-**

**ಭವೇತ್ಪ್ರದೇಯಂ ಪರಮಂ ನರೇಂದ್ರ। ಕರಾಳ ಮಾತೇ ಭಯಮಸ್ತು ಕಿಂಚಿದೇತತ್ಪರಂ ಬ್ರಹ್ಮಶ್ರುತಂ ತ್ವಯಾದ್ಯ। ಯಥಾವದುಕ್ತಂ ಪರಮಂ ಪವಿತ್ರಂ ವಿಶೋಕಮತ್ಯಂತಮನಾದಿಮಧ್ಯಮ್ (೬) ವಿದ್ಯೈಯೈವ ಸಮಂ ಕಾಮಂ ಮರ್ತವ್ಯಮ್ ಬ್ರಹ್ಮವಾದಿನಾ। ಆಪದ್ಯಪಿ ಚ ಘೋರಾಯಂ ನತ್ವೇನಾ ಮಿರಿಣೇವಪೇತ್ (೭) ಮುರ್ಖಾಶ್ಯ ಪಂಡಿತಂ ಮನ್ಯಾಅಧರ್ಮಾಧಾರ್ಮಿಕಾಇವ। ಧರ್ಮಯುಕ್ತಾ॒ಪ್ರಭಾಧಂತೇ**

---

ಶ್ರೇಯಸ್ಸಿನೊಂದಿಗೆ, **ನ ಯೋಕ್ಷ್ಯತಿ**-ಸೇರಿಸುವುದಿಲ್ಲವು. ಏಕೆಂದರೆ **ಅಪಾತ್ರ ದಾನಾತ್**-ಅಂತಹ ಹೀನಗುಣಗಳನ್ನು ಹೊಂದಿ ಅಪಾತ್ರನೆನಿಸಿದವನಿಗೆ ಉಪದೇಶ ವನ್ನು ಕೊಟ್ಟುದರಿಂದ, ಅಂತಹ ಉಪದೇಶಕನಾದ ಆಚಾರ್ಯನಿಗೆ ಶ್ರೇಯಸ್ಸುಂಟಾ ಗುವುದಿಲ್ಲವು; ಅದು ಯಾವುದು ಎಂದರೆ ಆತನ ಬ್ರಹ್ಮಜ್ಞಾನವೇ ನ್ಯೂನತೆಯನ್ನು ಹೊಂದುತ್ತದೆಂಬ ಭಾವವು; ಇದು ಹಿಂದೆಯೇ ಉಪಪಾದಿತವಾಗಿ ಅದಕ್ಕೆ ದೃಷ್ಟಾಂ ತವಾಗಿ ಚತುರ್ಮುಖನು ಸರಿಯಾದ ಅಧಿಕಾರಿಯಲ್ಲದ ಇಂದ್ರನಿಗೆ ಇದನ್ನು ಉಪ ದೇಶಿಸಿದುದರಿಂದ ತನ್ನ ಜ್ಞಾನವೆಲ್ಲಾ ಮರೆತುಹೋಗಿ ಪುನಃ ತನ್ನ ಮಗನಾದ ನಾರದರಿಂದ ಉಪದೇಶಿಸಲ್ಪಟ್ಟನೆಂದು ಹೇಳಲ್ಪಟ್ಟಿರುತ್ತದೆ. ಗುರುಪರಂಪರಾಸಾರದ ಪುಟವನ್ನು ನೋಡಿ. **ರತ್ನಪೂರ್ಣಾಂ**-ರತ್ನಗಳಿಂದ ತುಂಬಿದ, **ಇಮಾಂ ಪೃಥ್ವೀಂ**-ಈ ಭೂಮಿಯನ್ನು, **ಯದ್ಯಪಿದದ್ಯಾತ್**-ಒಂದು ವೇಳೆ ಅಪಾತ್ರನಲ್ಲಿ ಕೊಟ್ಟರೂ ಕೊಡಬಹುದು. ಆದರೆ, **ಇದಂತು**-ಈಗ ನೀನು ಹೊಂದಿ ರುವ ಈ ರಹಸ್ಯೋಪದೇಶವಾದರೋ, **ಅವ್ರತಾಯ**-ಶಾಸ್ತ್ರಾನುಸಾರ ನಡೆಯು ತ್ತೇನೆಂಬ ವ್ರತವಿಲ್ಲದವನಿಗೆ, **ನ ದೇಯಂ**-ಎಂದಿಗೂ ಕೊಡತಕ್ಕದ್ದಲ್ಲವು. **ಹೇ ನರೇಂದ್ರ**-ಓ ಕರಾಳರಾಜನೇ, **ಏತತ್ ಪರಮಂ**-ಈ ಸರ್ವಶ್ರೇಷ್ಠವಾಗಿ ಅಮೋಘವಾದ ರಹಸ್ಯವು, **ಜಿತೇಂದ್ರಿಯಾಯ**-ಇಂದ್ರಿಯಗಳನ್ನು ಜಯಿಸಿರುವ ಶಿಷ್ಯನಿಗೆ, **ಅಸಂಶಯಂ**-ಏನೊಂದೂ ಸಂದೇಹವಿಲ್ಲದೆ, **ತೇ**-ನಿನ್ನಿಂದ, **ಪ್ರದೇಯಂ ಭವೇತ್**-ಕೊಡತಕ್ಕದ್ದಾಗಿರುತ್ತದೆ. ಎಂದರೆ ಉಪದೇಶಮಾಡತಕ್ಕದ್ದಾಗಿರುತ್ತದೆ. **ಹೇ ಕರಾಳ**-ಓ ಕರಾಳ ರಾಜನೇ, **ತೇ**-ಪರಮಯೋಗ್ಯಾಧಿಕಾರಿಯಾದ ನಿನಗೆ, **ಕಿಂಚಿತ್ಮಾಭಯಮಸ್ತು**- ಸ್ವಲ್ಪವಾಗಲಿ ಪುನಸ್ಸಂಸಾರಪ್ರಾಪ್ತಿರೂಪಭಯವು ನಿನಗೆ ಬೇಡ; ಏಕೆಂದರೆ ನೀನು ಈಗ ಬ್ರಹ್ಮವಿದ್ಯೆಯನ್ನು ನನ್ನ ಮೂಲಕ ಉಪದೇಶಿ ಸಲ್ಪಟ್ಟವನಾದುದರಿಂದ ಅಪುನರಾವೃತ್ತಿ ರೂಪಮೋಕ್ಷಸಿದ್ಧಿಯುಂಟೆಂಬ ಭಾವವನ್ನು ಸೂಚಿಸಿರುತ್ತಾರೆ. ಅದೇನು ಸಂಸಾರದ ಭಯವಿಲ್ಲವೆಂದರೆ, **ಅದ್ಯ**-ಈಗ, **ತ್ವಯಾ**-ನಿನ್ನಿಂದ, **ಏತತ್ಪರಂಬ್ರಹ್ಮ**-ಈ ಶ್ರೇಷ್ಠವಾದ ಉಪನಿಷತ್ಪ್ರೋಕ್ತವಾದ ಪರಬ್ರ ಹ್ಮಪ್ರಾಪಕ ಬ್ರಹ್ಮವಿದ್ಯೆಯು, **ಯಥಾವದುಕ್ತಂ**-ಹೇಗೆ ಇದೆಯೋ ಹಾಗೆ ಯಥಾರ್ಥ

ಪಾದ ಉಪದೇಶವು, **ತ್ರ್ಯತವ್**-ನಿನ್ನಿಂದ ಕೇಳಲ್ಪಟ್ಟಿತು. ಆ ಪರಬ್ರಹ್ಮಪ್ರಾಪಕ ಬ್ರಹ್ಮವಿದ್ಯೆಯು ಪರಬ್ರಹ್ಮನಿಂದಲೇ ಬಂದುದಾದುದರಿಂದ ಆತನ ಹಾಗೆ, **ಪರಮಂ**-ಸರ್ವೋತ್ಕೃಷ್ಟವಾದುದು, **ಪವಿತ್ರಂ**-ಸರ್ವಪಾಪಗಳನ್ನೂ ಹೋಗಲಾಡಿಸಿ ಆತ್ಮವನ್ನು ಪರಿಶುದ್ಧನಾಗಿರುವ ಹಾಗೆ, "**ಸ್ವೇನರೂಪೇಣಾಭಿನಿಷ್ಪದ್ಯತೇ**" ಎಂಬಲ್ಲಿ ಹೇಳಿರುವ ಹಾಗೆ, ಮಾಡಬಲ್ಲದು, **ವಿಶೋಕಂ**-ಈ ಲೋಕದಲ್ಲಿ ದುಃಖಗಳಿರುವ ಹಾಗೆ ಅಲ್ಲದೆ ಆತ್ಮಾವನ್ನು ಶೋಕರಹಿತನಾಗಿ ಮಾಡತಕ್ಕದ್ದು, ಪರಮಾತ್ಮನ ಹಾಗೆ ಈ ಬ್ರಹ್ಮವಿದ್ಯೆಗೂ**ಅತ್ಯನ್ತಂ**-ಅನ್ತವನ್ನು ದಾಟಿದುದಾಗಿ, ಅನ್ತವಿಲ್ಲವು, ನಾಶವಿಲ್ಲವು. **ಅನಾದಿಮಧ್ಯಮಂ**-ಆದಿಯೂಮಧ್ಯವೂ ಇಲ್ಲದುದು" ಎಂದು ವಸಿಷ್ಠರ ಉಪದೇಶವು.

(೬) ಆಗಲಿ ಶಾಸ್ತ್ರವಿಧಿ ಇರುವದೇನೆಂದರೆ- "**ಪಾತ್ರಸ್ತಮಾತ್ಮವಿಜ್ಞಾನಂ ಕೃತ್ವಾದೇಹಂ ಸಮುತ್ಸೃಜೇತ್**" ಬ್ರಹ್ಮವಿದ್ಯೆಯ ಮೂಲಕ ಸದಾಚಾರ್ಯರಿಂದ ಪಡದ ಜ್ಞಾನವನ್ನು ಸತ್ಪಾತ್ರದಲ್ಲಿಡುವದನ್ನಾಗಿ ಮಾಡಿ, ಸತ್ಪಾತ್ರನಾದ ಶಿಷ್ಯನಿಗೆ ಉಪದೇಶಿಸಿ, ತನ್ನ ದೇಹವನ್ನು ಬಿಡತಕ್ಕದ್ದು" ಎಂಬುದಾಗಿ ಮೇಲೆ ಹೇಳಿದ ಹಾಗೆ ಸತ್ಪಾತ್ರನೇ ದೊರೆಯದ ಸಂದರ್ಭದಲ್ಲಿ ಏನು ಮಾಡತಕ್ಕದ್ದು ಎಂದರೆ, ಹಾಗೆ ಯಾರಿಗೂ ಉಪದೇಶಿಸದೆ ದೇಹತ್ಯಾಗ ಮಾಡಿದರೂ ಚಿಂತೆಯಿಲ್ಲವು. ಆ ಪಾತ್ರದಲ್ಲಿ ಸರ್ವಥೈವ ಆ ಬ್ರಹ್ಮವಿದ್ಯೆಯನ್ನಿಡತಕ್ಕದ್ದಲ್ಲವೆಂಬುದಕ್ಕೆ ಪ್ರಮಾಣವನ್ನು ಉದಹರಿಸುತ್ತಾರೆ="**ವಿದ್ಯಯೈವಸಮಂ**-ಆ ಬ್ರಹ್ಮವಿದ್ಯೆಯೊಂದಿಗೇನೇ, **ಕಾಮಂಮರ್ತವ್ಯಂ**-ಸತ್ಪಾತ್ರನು ದೊರೆಯದಿದ್ದರೆ, ಇಷ್ಟಾನುಸಾರವೇ ದೇಹವನ್ನು ತ್ಯಾಗಮಾಡತಕ್ಕದ್ದು. **ಘೋರಾಯಾಂ**:ಭಯಂಕರವಾದ, **ಆಪದ್ಯಪಿಚ**-ಆಪತ್ತು ಸಂಭವಿಸುವ ಸಂದರ್ಭದಲ್ಲೂ ಕೂಡ, **ಏನಾಂತು**-ಈ ಬ್ರಹ್ಮವಿದ್ಯೆಯನ್ನಾದರೋ, **ಇರಿಣೇ**-ಊಷರಕ್ಷೇತ್ರದಲ್ಲಿ **ನವಪೇತ್**–ಬೀಜವನ್ನು ಬಿತ್ತಕೂಡದು ಎಂದರೆ ಬೀಜಾವಾಪವು ಊಷರಕ್ಷೇತ್ರದಲ್ಲಿ ಹೇಗೆ ಫಲಕಾರಿಯಾಗದೆ ನಿರರ್ಥಕವೋ, ಹಾಗೆಯೇ ಅಪಾತ್ರದಲ್ಲಿ ಉಪದೇಶವು ಕೂಡುದುದಾಗಿ ನಿಸರ್ಥಕವೆಂಬ ಭಾವವು.

(೭) ಮುಂದೆ ಅಪಾತ್ರನಿಗೆ ಉಪದೇಶವು ಕೂಡದೆಂಬುದಕ್ಕೆ ಶಾಣ್ಡಿಲ್ಯಸ್ಮೃತಿಯಿಂದ ೮ ಶ್ಲೋಕಗಳನ್ನು ಉದಾಹರಿಸುತ್ತಾರೆ.

**ಮೂರ್ಖಾಃ**-ಮೂಢರುಗಳು, **ಪಂಡಿತಂಮನ್ಯಾಃ**-ತಾವೇ ಪಂಡಿತರುಗಳೆಂದು ಭಾವಿಸುವರಾಗಿಯೂ, **ಅಧರ್ಮ್ಯಾ**–ಅಧರ್ಮನಿಷ್ಠೆಯುಳ್ಳವರಾಗಿ, **ಧಾರ್ಮಿಕಾ ಇವ**–ಧರ್ಮಾನುಷ್ಠಾನವನ್ನು ಮಾಡುವರ ಹಾಗೆ ತೋರುವವರಾಗಿ, **ಸಾಧೂನಾಂ**–ಸಜ್ಜನರ, ಲಿಙ್ಗಂ-ವೇಷವನ್ನು **ಆಸ್ಥಿತಾಃ**-ಹೊಂದಿದವರಾಗಿ, **ಧರ್ಮಯುಕ್ತಾನ್**-ಶಾಸ್ತ್ರದ ವಿಧಿ ನಿಷೇಧವಾಕ್ಯಗಳಿಗನುಸಾರವಾದ ನಿಷ್ಠೆಯುಳ್ಳವರನ್ನು, **ಪ್ರಬಾಧನ್ತೇ**-

---

(೬) ಶಾಂಡಿಲ್ಯಸ್ಮೃತಿ ಮತ್ತು ಮನುಸ್ಮೃತಿ. ೨.೧೧೩. (೭) ಶಾಣ್ಡಿಲ್ಯಸ್ಮೃತಿ 4.25/8

ಸಾಧೂನಾಂ ಲಿಙ್ಗಮಾಸ್ಥಿತಾ । ಏಕತಸ್ತ್ವಪವರ್ಗಾರ್ಥಮನುಷ್ಠಾ
ನಾದಿಕೌಶಲಮ್ । ಲೋಕಾನುಸಾರಸ್ತ್ವೇಕತ್ರಗುರುಃ ಪಶ್ಚಾದು
ದೀರಿತಃ। ಭವನ್ತಿ ಬಹವೋ ಮೂರ್ಖಾಃ ಕ್ವಚಿದೇಕೋವಿಶುದ್ಧಧೀಃ॥
ತ್ರಾಸಿತೋ ಸದಾಮೂರ್ಖೈರಚಲೋಽಯಂಸ ಬುದ್ಧಿಮಾನ್ ।
ನವಿಶ್ವಾಸಃ ಕ್ವಚಿತ್ಕಾರ್ಯೋ ವಿಶೇಷಾತ್ತು ಕಲೌಯುಗೇ।

---

ವಿಶೇಷವಾಗಿ ಬಾಧಿಸುತ್ತಾರೆ. **ಏಕತಸ್ತು**-ಒಂದು ಸಂದರ್ಭದಲ್ಲಿ ಅಥವಾ ಒಂದು ಸ್ಥಳದಲ್ಲಿಯಾದರೋ, **ಅಪವರ್ಗಾರ್ಥಂ**-ಮೋಕ್ಷಪ್ರಾಪ್ತಿಗಾಗಿ, **ಅನುಷ್ಠಾನಾದಿ ಕೌಶಲಮ್**-ಸ್ವತಃ ಅನುಷ್ಠಾನವು, ಹಾಗೆಯೇ ಆದಿಪದದಿಂದ ಶಿಷ್ಯರಿಗೆ ಉಪದೇಶವು, ಇವುಗಳಲ್ಲಿ ತುಂಬಾ ಪ್ರಾಜ್ಞತೆಯನ್ನು ತೋರೋಣವು, ಮತ್ತು **ಏಕತ್ರತು**-ಇನ್ನೊಂದು ಸಂದರ್ಭ ಅಥವಾ ಸ್ಥಳದಲ್ಲಿ, **ಲೋಕಾನುಸಾರಂ**-ವೈರಾಗ್ಯ ಮೊದಲಾದವುಗಳನ್ನು ಬಿಟ್ಟು ಲೋಕದ ಭೋಗಗಳಿಗನುಸಾರವಾಗಿ ಅನುಷ್ಠಾನವೂ ಉಪದೇಶವೂ. ಹೀಗೆ ಭಿನ್ನಪ್ರವೃತ್ತಿಯುಳ್ಳವ ಗುರುವು ಎಂಬ ಭಾವವು, **ಪಶ್ಚಾತ್**-ಹಿಂದಿರಲಿಕ್ಕೆ ಯೋಗ್ಯನು ಎಂದರೆ ಅಧಮನೆಂದು. **ಉದಾರಿತಃ**-ಹೇಳಲ್ಪಟ್ಟನು. ಹೀಗೆ **ಮೂರ್ಖಾಃ**-ಮೂರ್ಖರೇ ಈ ಲೋಕದಲ್ಲಿ, **ಬಹವೋ ಭವನ್ತಿ**-ಅನೇಕರಾಗಿರುತ್ತಾರೆ. **ಕ್ವಚಿತ್**-ಎಲ್ಲೋ ಒಂದೊಂದು ಕಡೆಯಲ್ಲಿ ಮಾತ್ರ, “**ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ, ಯತತಾಮಪಿ ಸರ್ವೇಷಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ**” (೭-೩) ಎಂಬಲ್ಲಿ ಹೇಳಿರುವ ಹಾಗೆ, **ವಿಶುದ್ಧಧೀಃ**-ಮನಸ್ಸಿನ ಮಲಗಳೊಂದೂ ಇಲ್ಲದ ಪರಿಶುದ್ಧವಾದ ಬುದ್ಧಿಯುಳ್ಳವನಾಗುತ್ತಾನೆ. **ಸದಾ**-ಯಾವಾಗಲೂ, **ಮೂರ್ಖೈಃ**-ಮೂರ್ಖರಿಂದ, **ತ್ರಾಸಿತೋಽಪಿ**-ತನಗೆ ಉಪದೇಶಿಸದಿದ್ದರೆ ಏನಾದರೂ ತೊಂದರೆ ಮಾಡುವೆವೆಂದು ಭಯಪಡಿಸಲ್ಪಟ್ಟರೂ ಕೂಡ, **ಅಚಲೋಽಯಂ**-ಈ ಸದಾಚಾರ್ಯನು ಸ್ಥಿರಬುದ್ಧಿಯಿಂದ ಕದಲತಕ್ಕವನಲ್ಲನು, ಎಂದರೆ ಅಪಾತ್ರನು ಭಯಪಡಿಸಿದರೂ ಅವನಿಗೆ ಉಪದೇಶಿಸತಕ್ಕದ್ದಲ್ಲವೆಂಬ ಸ್ಥಿರಸಂಕಲ್ಪಯುಕ್ತನಾಗಿರುವನೆಂಬ ಭಾವವು. **ಸಃ**-ಅಂತವನೇ **ಬುದ್ಧಿಮಾನ್**-ವಿವೇಕ ಜ್ಞಾನವುಳ್ಳವನು. **ಕ್ವಚಿತ್**-ಯಾವನೊಬ್ಬನಲ್ಲೂ, ಎಂದರೆ ಯಾವ ಅಪಾತ್ರನಲ್ಲೂ, ವಿಶ್ವಾಸಃ-ನಂಬೋಣವು, ಇಲ್ಲವೆ ಪ್ರೀತಿಯೂ **ನಕಾರ್ಯಃ**-ಮಾಡತಕ್ಕದ್ದಲ್ಲವು. **ವಿಶೇಷಾತ್ತು**-ಆದರೆ ವಿಶೇಷವಾಗಿಯಾದರೋ, **ಕಲೌಯುಗೇ**-ಕಲಿಗಾಲದಲ್ಲಾದರೋ, ಎಂದರೆ ಅಧರ್ಮಪ್ರವೃತ್ತಿಯೇ ಹೆಚ್ಚಾಗಿ **ಅಧರ್ಮೋಗ್ರಸತೇ ಧರ್ಮಂ**-ಅಧರ್ಮವು ಧರ್ಮವನ್ನು ನುಂಗಿಬಿಡುತ್ತೆ ಎಂದು ಮಹರ್ಷಿಯು ಹೇಳಿರುವ ಹಾಗೆ, ಅಧರ್ಮದ ಹೆಚ್ಚಳವಾಗಿರುವ ಕಲಿಕಾಲದಲ್ಲಾದರೋ, ವಿಶ್ವಾಸವನ್ನು ಎಂದಿಗೂ ಮಾಡಕೂಡದು. **ಪಾಪಿಷ್ಠಾಃ**-ಅಧರ್ಮಪ್ರವರ್ತಕರಾಗಿ ಪಾಪ ಮಾಡಿದವರು.

**ಪಾಪಿಷ್ಠಾ ವಾದವರ್ಷೇಣ ಮೋಹಯನ್ತ್ಯವಿಚಕ್ಷಣಾನ್। ಗೋಪಯನ್ನಾಚರೇದ್ಧರ್ಮಂ ನಾಪೃಷ್ಟಃ ಕಿಂಚಿದುಚ್ಚರೇತ್॥ ಪೃಷ್ಟೋಽಪಿ ನವದೇದರ್ಥಂ ಗುಹ್ಯಂ ಸಿದ್ಧಾನ್ತಮೇವ ಚ। ಆಶ್ರಿತಾಯಾತಿ ಭಕ್ತಾಯ ಶಾಸ್ತ್ರಶ್ರದ್ಧಾಪರಾಯ ಚ। ನ್ಯಾಯೇನ ಪೃಚ್ಛತೇ ಸರ್ವಂ ವಕ್ತವ್ಯಂ ಶೌಚಯೋಗಿನೇ॥ ಆತ್ಮಪೂಜಾರ್ಥ ಮರ್ಥಾರ್ಥಂ**

---

**ಅವಿಚಕ್ಷಣಾನ್**-ತುಂಬಾ ತಿಳುವಳಿಕೆಯಿಲ್ಲದೆ ಯುಕ್ತಾಯುಕ್ತಗಳನ್ನು ಗ್ರಹಿಸುವ ಯೋಗ್ಯತೆಯಿಲ್ಲದವರನ್ನು, **ವಾದವರ್ಷೇಣ**-ವಾದಗಳನ್ನು ಮಳೆಯ ಹಾಗೆ **ಸುರಿ** ಸುವದರಿಂದ, **ಮೋಹಯನ್ತಿ**-ಮೋಹವನ್ನುಂಟುಮಾಡುವರು, ಮುಖ್ಯವಾಗಿ ಮೂರು ಭ್ರಮೆಗಳಾದ ದೇಹವೇ ಆತ್ಮ ಎಂಬ, ತಾನೇ ಸ್ವತಂತ್ರನೆಂಬ, ತಾನೇ ಪರ ಮಾತ್ಮನೆಂಬ ಇತ್ಯಾದಿ ಭ್ರಮೆಗಳನ್ನುಂಟುಮಾಡುವರು. **ಧರ್ಮಂ**-ಶಾಸ್ತ್ರಗಳಲ್ಲಿರುವ ವಿಧಿನಿಷೇಧ ವಾಕ್ಯಗಳಿಗನುಸಾರ ಪ್ರವೃತ್ತಿಯನ್ನು, **ಗೋಪಯನ್**-ರಕ್ಷಿಸುವವನಾಗಿ, **ಆಚರೇತ್**-ಅನುಷ್ಠಿಸತಕ್ಕದ್ದು. ರಕ್ಷಿಸಿ ಅನುಷ್ಠಿಸು ಎಂದು ಹೇಳಿರುವದರಿಂದ ಅಯೋಗ್ಯರಿಗೆ ಉಪದೇಶಿಸದೆ ಅನುಷ್ಠಿಸತಕ್ಕದೆಂಬ ಭಾವವು. ಇದರಿಂದ **"ಮಂತ್ರ ಯತ್ನೇನ ಗೋಪಯೇತ್"** ಎಂದು ಹೇಳಿದ ಅರ್ಥವಾಕ್ಯವೇ ಉಪದೇಶಿಸಲ್ಪಟ್ಟಿತು. **ಅಪೃಷ್ಟಃ**-ಬಂದು ಪ್ರಣಾಮಾದ್ಯಭಿವಾದನಾದಿಗಳಿಂದ ಆಶ್ರಯಿಸಿ **ಕೇಳಿದ** ವನಿಗೆ, **ಕಿಂಚಿತ್ ನೋಚ್ಚರೇತ್**-ಸ್ವಲ್ಪವಾಗಲಿ ಉಪದೇಶವನ್ನು ಉಚ್ಚರಿಸತಕ್ಕದ್ದಲ್ಲವು. **ಪೃಷ್ಟೋಽಪಿ**-ಅನಧಿಕಾರಿಯು ಬಂದು ಕೇಳಿದರೂ ಕೂಡ, **ಗುಹ್ಯಮರ್ಥಂ**-ಗೂಢರಹಸ್ಯಾರ್ಥವನ್ನೂ **ಸಿದ್ಧಾಂತಮೇವಚ**-ಸತ್ಯವಾದ ಸಿದ್ಧಾಂತಸ್ವೀಕೃತ ಸಿದ್ಧಾನ್ತ ವನ್ನೂ ಕೂಡ, **ನವದೇತ್**-ಉಪದೇಶಿಸತಕ್ಕದ್ದಲ್ಲವು. ಹಾಗಾದರೆ ಯಾರಿಗೆ ಉಪ ದೇಶಿಸತಕ್ಕದ್ದೆಂದರೆ ಹೇಳುತ್ತಾರೆ: **ಆಶ್ರಿತಾಯ**-ಬಂದು ಪ್ರಣಾಮಾದಿಗಳಿಂದ **"ಶಾಧಿಮಾಂತ್ವಾಂ ಪ್ರಪನ್ನಮ್"** ಎಂಬಲ್ಲಿ ಹೇಳಿರುವ ಹಾಗೆ ಆಶ್ರಯಿಸಿ ಪ್ರಾರ್ಥಿಸುವವನಿಗೂ, **ಅತಿಭಕ್ತಾಯ**-ಅತ್ಯಂತ ದೇವಭಕ್ತಿ ಗುರುಭಕ್ತಿಯುತನಿಗೂ **ಶಾಸ್ತ್ರಶ್ರದ್ಧಾಪರಾಯಚ**-ಶಾಸ್ತ್ರಜ್ಞಾನ ಸಂಪಾದನೆಯಲ್ಲಿ ಶ್ರದ್ಧೆಯಿಂದ ಕೂಡಿರುವ ನಿಗೂ, **ನ್ಯಾಯೇನಪೃಚ್ಛತೇ**-ಶಾಸ್ತ್ರದಲ್ಲಿ ಹೇಳಿರುವ ಹಾಗೆ ಪ್ರಾರ್ಥಿಸುವವನಿಗೆ, ನನಗೆ ಸ್ವಲ್ಪ ಉಪದೇಶಿಸಿ ಎಂದು ನಮ್ರತೆಯಿಂದ, ಬ್ರಹ್ಮಜ್ಞಾನವಿಲ್ಲವೇ, ತಾನು ಪಾಪಿಷ್ಠನೇ ಮೋಕ್ಷ ಹೊಂದುವ ಬಗೆ ಹೇಗೆ ಎಂದು ಪಾದಕ್ಕೆರಗಿ ಕೇಳಿಕೊ ಳ್ಳುವನಿಗೆ ಎಂಬ ಭಾವವು. **ಶೌಚಯೋಗಿನೇ**-ನಿತ್ಯ ನೈಮಿತ್ತಿಕಾನುಷ್ಠಾನದ ಮೂಲಕ ಅಂತರ್ಬಾಹ್ಯ ಪರಿಶುದ್ಧತೆಯನ್ನು ಹೊಂದಿದವನಿಗೆ, ಉಪಾಯಾನುಷ್ಠಾನಕ್ಕೆ ಪ್ರತಿಬಂಧಕ ಪಾಪಗಳನ್ನು ವರ್ಣಾಶ್ರಮ ಧರ್ಮಾಚರಣೆಯಿಂದ ಹೋಗಲಾಡಿಸಿ

**ಡಂಭಾರ್ಥಮಪಿ ಖಿನ್ನಧೀಃ ॥ ಅಯೋಗ್ಯೇಷು ವದಞ್ಛಾಸ್ತ್ರಂ ಸನ್ಮಾರ್ಗಾತ್ಪ್ರಚ್ಯುತೋಭವೇತ್ । ಊಷರೇ ನಿವಪೇದ್ಬೀಜಂಷಂಡೇ ಕನ್ಯಾಂ ಪ್ರಯೋಜಯೇತ್ ॥ ಸೃಜೇದ್ವಾವಾನರೇ ಮಾಲಾಂ ನಾಪಾತ್ರೇ ಶಾಸ್ತ್ರಮುತ್ಸೃಜೇತ್ ॥**

---

ಕೊಂಡವನಿಗೆ, **ಸರ್ವಂ ವಕ್ತವ್ಯಂ**-ಅಗತ್ಯವಾಗಿ ಸರ್ವವನ್ನೂ ಉಪದೇಶಿಸತಕ್ಕದ್ದು, ಇದು ಆಚಾರ್ಯರ ಇತಿಕರ್ತವ್ಯತೆ ಎಂದು ಪ್ರದರ್ಶಿಸುವದಕ್ಕಾಗಿ, **ವಕ್ತವ್ಯಂ**-ಎಂಬ ಪ್ರಯೋಗವು. ಆಚಾರ್ಯರು ಇಂತಹ ಶಿಷ್ಯನಿಗೆ ಉಪದೇಶಿಸತಕ್ಕದ್ದೆಂದು ವಿಧಿಸಲ್ಪಟ್ಟಿತು. ಹೇಗೆ ಉಪದೇಶಿಸತಕ್ಕದ್ದೆಂಬ ಸಂದರ್ಭದಲ್ಲಿ **ನಿಸ್ಪೃಹೋವದೇತ್**-ಎಂಬಲ್ಲಿ ಏನೊಂದು ಆಶೋತ್ತರಗಳನ್ನೂ ಮನಸ್ಸಿನಲ್ಲಿಡದೆ ಖ್ಯಾತಿ ಲಾಭ ಪೂಜೆಗಳಿಂದ ವಿಮುಖರಾಗಿ, **ಕೃಪಯಾ**-ಕೃಪೆಯಿಂದ ಉಪದೇಶಿಸತಕ್ಕದ್ದೆಂದು ಮುಂದೆ ಹೇಳಲ್ಪಡುತ್ತದೆ. **ಆತ್ಮಪೂಜಾರ್ಥಂ**-ತನಗೆ ಪೂಜ್ಯತೆಯ ಪ್ರಯೋಜನಕ್ಕಾಗಲಿ, **ಅರ್ಥಾರ್ಥಂ**-ಧನಾಶೆಯಿಂದಲಾಗಲಿ, **ಡಂಭಾರ್ಥಮಪಿ**-ತಾನು ಶ್ರೇಷ್ಠನಾದ ಆಚಾರ್ಯನೆಂಬ ಹೆಮ್ಮೆಗಾಗಲಿ, **ಖಿನ್ನಧೀಃ**-ಪ್ರೀತಿಯಿಂದ ಉಪದೇಶಿಸದೆ, ಉಪದೇಶಿಸಬೇಕಾಗಿ ಬಂದಿದೆಯಲ್ಲಾ ಎಂಬ ಕ್ಲೇಶಯುಕ್ತನಾಗಿ, **ಅಯೋಗ್ಯೇಷು**-ಮೇಲೆ ಹೇಳಿದ ಹಾಗೆ ಅಯೋಗ್ಯರಲ್ಲಿ, **ಶಾಸ್ತ್ರಂವದನ್**-ಉಪದೇಶಿಸುವನಾದರೆ, **ಸನ್ಮಾರ್ಗಾತ್**-ಸಂಪ್ರದಾಯನಿಷ್ಠರ ಸನ್ಮಾರ್ಗದಿಂದ, **ಪ್ರಚ್ಯುತೋಭವೇತ್**-ಜಾರಿಬಿದ್ದವನಾಗುವನು; ಎಂದರೆ ಇತರ ಸಂಪ್ರದಾಯನಿಷ್ಠರಪ್ರಸನ್ನತೆಗೆ ಒಳಗಾಗುವದಿಲ್ಲವು; ಪುರುಷಾರ್ಥಕಾಷ್ಠೆಯೇ ಅಂತಹ ಆಚಾರ್ಯನಿಗೆ ಇಲ್ಲವಾಗುತ್ತದೆಂಬ ಭಾವವು. ಸಂಪ್ರದಾಯನಿಷ್ಠರ ಬಹುಮತಿಗೆ ಹೊರಗಾಗುವನೆಂಬ ತಾತ್ಪರ್ಯವು. ಮುಂದೆ ಕೆಲವು ನಿಷ್ಪ್ರಯೋಜಕವಾದ ಕೆಲಸಗಳನ್ನು ಒಂದು ವೇಳೆ ಮಾಡಿದರೂ ಮಾಡಬಹುದು; ಆದರೆ ಅಪಾತ್ರನಲ್ಲಿ ಶಾಸ್ತ್ರೋಪದೇಶವನ್ನಿಡಕೂಡದೆಂದು ಹೇಳುತ್ತಾರೆ. **ಊಷರೇ**-ತುಂಬಾ ಉಪ್ಪಿರುವದರಿಂದ ಬೆಳೆ ಬೆಳೆಯದ ಕ್ಷೇತ್ರದಲ್ಲಾದರೂ, **ಬೀಜಂ**-ಬೀಜವನ್ನು, **ನಿವಪೇತ್**-ಬಿತ್ತಿದರೂ ಬಿತ್ತಬಹುದು; **ಷಂಡೇ**-ನಪುಂಸಕನಲ್ಲಿ, **ಕನ್ಯಾಂ**-ತನ್ನ ಮಗಳಾದ ಬಾಲಕಿಯನ್ನು, **ಪ್ರಯೋಜಯೇತ್**-ವಿವಾಹ ಮೂಲಕ ಸೇರಿಸಿದರೂ ಸೇರಿಸಬಹುದು; **ವಾನರೇ**-ಕಪಿಯಲ್ಲಿ **ಮಾಲಾಂ**-ಮನೋಹರವಾದ ಪುಷ್ಪಮಾಲಿಕೆಯನ್ನು, **ಸೃಜೇದ್ವಾ**-ಕೊಟ್ಟರೂ ಕೊಡಬಹುದು. ಆದರೆ **ಅಪಾತ್ರೇ**-ಅಪಾತ್ರನಲ್ಲಿ, ಶಾಸ್ತ್ರಂ-ಮಂತ್ರ ರಹಸ್ಯಗಳುಳ್ಳ ಶಾಸ್ತ್ರವನ್ನು, **ನೋತ್ಸೃಜೇತ್**-ಬಿಡತಕ್ಕದ್ದಲ್ಲವು ಎಂದರೆ ಉಪದೇಶಿಸಲ್ಪಡತಕ್ಕದ್ದಲ್ಲವು. ಇಷ್ಟು ಕಠಿಣವಾದ ವಿಧಿಯು ಕರುಣಾಶೂನ್ಯವಾದುದಲ್ಲವೇ? ಎಂದು ಆಕ್ಷೇಪಿತವಾದರೆ ಸಮಾಧಾನ ಹೇಗೆಂದರೆ, ಆಚಾರ್ಯನು ಹೀಗೆ ಶಿಷ್ಯನನ್ನು ಪರೀಕ್ಷಿಸಿ ಉಪದೇಶಿ

ಸುವದರ ಪ್ರಯೋಜನವೇನೆಂದರೆ- ಆಚಾರ್ಯರೇನೋ ಖ್ಯಾತಿಲಾಭ ಪೂಜೆಗಾಗಿ ಉಪದೇಶಿಸದೆ "**ದೇಶಿಕೋಮೇದಯಾಳುಃ**" ಎಂಬಲ್ಲಿ ಹೇಳಿರುವಂತೆ ಕರುಣಾರ್ದ್ರ ಹೃದಯರಾಗಿ ಸಿಷ್ಯಪರರಾಗಿ ಉಪದೇಶಿಸಿದರೂ, "**ಪ್ರಯೋಜನಮನುದ್ದಿಶ್ಯ ನಮಂದೋಪಿಪ್ರವರ್ತತೇ**" ಎಂಬಲ್ಲಿ ಹೇಳಿರುವ ಹಾಗೆ ಸದಾಚಾರ್ಯರಿಗೂ ಒಂದು ಮುಖ್ಯೋದ್ದೇಶ್ಯವುಂಟು. ಸಂಪ್ರದಾಯಕ್ಕೆ ಚ್ಯುತಿ ಉಂಟಾಗದ ಹಾಗೆ ತಾನು ತಮ್ಮ ಆಚಾರ್ಯರಿಂದ ಬಂದ ಉಪದೇಶವು ಅಲ್ಲಿಗೇನೇ ನಿಲ್ಲದೆ ಈಗ ಸಚ್ಛಿಷ್ಯನಿಗೆ ಉಪದೇಶಿಸಿದರೆ, ಆತನು ತನ್ನ ಸಚ್ಛಿಷ್ಯರಿಗೆ ಉಪದೇಶಿಸಲಿ ಎಂಬ ಪ್ರಯೋಜನವು ಆಚಾರ್ಯನಿಗೂ ಉಂಟು. ಈ ತಮ್ಮ ಮನೋರಥವು ಈಡೇರದೆ ನಿಷ್ಫಲವಾಗುವ ಸಂದರ್ಭದಲ್ಲಿ ಉಪದೇಶವು ನಿರರ್ಥಕವಾಗುವದರಿಂದ ಅಂತವನಿಗೆ ಉಪದೇಶವು ಕಾರ್ಯಕಾರಿಯಾಗುವುದಿಲ್ಲವೆಂಬ ಭಾವವು. ಊಷರಕ್ಷೇತ್ರದಲ್ಲಿ ಬಿತ್ತಿದ ಬೀಜವು ಹೇಗೆ ಫಲಕಾರಿಯಾಗದೋ, ನಪುಂಸಕನಿಗೆ ಕನ್ಯವನ್ನು ಕೊಟ್ಟು ವಿವಾಹ ಮಾಡಿದರೆ ಪುತ್ರೋತ್ಪತ್ತಿ ಹೇಗಿಲ್ಲವೋ, ವಾನರ ಕೈಯ್ಯಲ್ಲಿ ಕೋಮಲ ಪುಷ್ಪಮಾಲಿಕೆಯನ್ನು ಕೊಟ್ಟುದುದು ಹೇಗೆ ಹಾಳಾಗಿ ಕಾರ್ಯಕಾರಿಯಾಗದೋ, ಹಾಗೆಯೇ ಅಪಾತ್ರನಲ್ಲಿ ಮಾಡಿದ ಶಾಸ್ತ್ರೋಪದೇಶವೂ ಸಹ ಆಚಾರ್ಯನಿಗಿರುವ ಸತ್ಸಂಪ್ರದಾಯಾಭಿವೃದ್ಧಿರೂಪ ಮನೋರಥಾವಾಪ್ತಿಗೆ ಪರಮ ಕುಂದಕವೆಂಬ ಭಾವವು.

ಇದರೊಂದಿಗೆ ಇನ್ನೊಂದು ಮುಖ್ಯವಾದ ಆಕಾಂಕ್ಷೆಯೂ ತೋರಿಬರುತ್ತದೆ. ಆಚಾರ್ಯರಿಗೆ ಬೇಕಾದ ಅಪಾತ್ರನಿದ್ದಾನೆಂದು ಭಾವಿಸೋಣ. ಹಾಗಾದರೆ ಆ ಅಪಾತ್ರನಿಗೆ ವಿವೇಕವನ್ನು ಕೊಟ್ಟು ಸತ್ಪಾತ್ರನನ್ನಾಗಿ ಮಾಡಿ ಅನಂತರ ರಹಸ್ಯೋಪದೇಶವನ್ನು ಮಾಡಿ ಮೋಕ್ಷಪ್ರಾಪ್ತಿಗೆ ಅನುಕೂಲ ಮಾಡಿ ಕೊಡಕೂಡದೇ? ಎಂದರೆ, ಇದರಲ್ಲೇನೂ ಪ್ರತ್ಯವಾಯವಿಲ್ಲವು. ಏಕಾಏಕಿ ಅಪಾತ್ರನಾಗಿರುವಾಗಲೇ ರಹಸ್ಯೋಪದೇಶವು ಕೂಡದೆಂದು ಇಷ್ಟು ಮಾತ್ರದಲ್ಲೇ ನಿರ್ಬಂಧವೇ ವಿನಾ, ಆತನನ್ನು ಸತ್ಪಾತ್ರನನ್ನಾಗಿ ಮಾಡಿದ ನಂತರವೂ ಕೂಡದೆಂದು ಇಲ್ಲಿ ನಿಷೇಧಿಸಿ ಹೇಳಲಿಲ್ಲವು. ಒಬ್ಬನು ಮಹಾಪಾಪಿಯಾಗಿದ್ದಾನೆ; ಆತನು ಅದಕ್ಕಾಗಿ ಶೋಕಿಸಿ, ಮಹಾಭಾಗವತನನ್ನಾಶ್ರಯಿಸಿ ಶರಣಾಗತಿಯನ್ನು ಅನುಷ್ಠಿಸಿ ಪ್ರಾಯಶ್ಚಿತ್ತ ಮಾಡಿಕೊಂಡು, ಪುನೀತನಾಗಿ ಆಚಾರ್ಯೋಪದೇಶವನ್ನು ಪ್ರಾರ್ಥಿಸಿ ಹೊಂದುವದು ಇಲ್ಲಿ ನಿಷೇಧಿಸಲ್ಪಡಲಿಲ್ಲವು. ಇದಕ್ಕೆ ದೃಷ್ಟಾಂತವಾಗಿ ಅನೇಕ ಇತಿಹಾಸಗಳುಂಟು. ಕ್ಷತ್ರಬಂಧು ವೃತ್ತಾಂತವನ್ನು ಸ್ಮರಿಸಬಹುದು. ಒಬ್ಬ ವೇಶ್ಯಾಸ್ತ್ರೀಯಲ್ಲಿ ತುಂಬಾ ಅನುರಕ್ತನಾಗಿ ಅಯೋಗ್ಯನಾಗಿದ್ದ ಒಬ್ಬ ಶೂದ್ರನನ್ನು ಶ್ರೀ ಯತಿರಾಜರು, ಸತ್ಪಾತ್ರನನ್ನಾಗಿ ಮಾಡಿ, ಆತನಿಗೆ ಶಾಸ್ತ್ರವಿಹಿತ ಉಪದೇಶವೆಷ್ಟೋ ಅಷ್ಟನ್ನು ಮಾಡಿ, ತಮ್ಮಿಂದಾ ಭಾಗವತಾಶ್ರಯಣವೇ ಆತನಿಗೆ ಮುಕ್ತಿದಾಯಕವೆಂದು ಉಪದೇಶಿಸಿ, ಆತನಿಗಾಗಿ ಶರಣಾಗತಿಯನ್ನನುಷ್ಠಿಸಿ ಮುಕ್ತಿ ಹೊಂದಿಸಿದರೆಂಬ ಇತಿಹಾಸವುಂಟು.

**(೮) ನನಾಸ್ತಿಕಾಯಾ ನೃಜವೇ ನಾಭಕ್ತಾಯ ಕದಾಚನ| ನೈವ ಹಿಂಸಾಭಿರುಚಯೇ ನಲುಬ್ಧಾಯ ವಿಶೇಷತಃ| ದಾತವ್ಯೋ ಮನ್ತ್ರರಾಜೋಽಯಂ ಮನ್ತ್ರೋಽಯಂ ಹಿ ನತಾದೃಶಃ| ಋಜವೇ ಗುರುಭಕ್ತಾಯ ವೈಷ್ಣವಾಯ ವಿಶೇಷತಃ| ಸರ್ವ ಪ್ರಾಣ್ಯನುಕೂಲಾಯ**

---

ಹಾಗೆಯೇ ಯಾಮುನ ಮುನಿಗಳೂ ರಾಜ್ಯಪದವಿಯನ್ನನುಭವಿಸುತ್ತಾ ರಹಸ್ಯೋಪದೇಶಕ್ಕೆ ಅಪಾತ್ರರಾಗಿದ್ದುದರಿಂದ ಶ್ರೀನಾಥಮುನಿಗಳ ಶಿಷ್ಯರಾದ ಮಣಕ್ಕಾಲ್ ನಂಬಿಯುವರು ( ಶ್ರೀರಾಮಮಿಶ್ರರು ) ಅವರಿಗೆ ವಿವೇಕವನ್ನು ಕೊಟ್ಟು, ರಾಜ್ಯವನ್ನು ತ್ಯಜಿಸುವ ಹಾಗೆ ಮಾಡಿ ವೈರಾಗ್ಯವನ್ನುಂಟುಮಾಡಿ, ಸತ್ಪಾತ್ರರನ್ನಾಗಿ ಮಾಡಿ ರಹಸ್ಯಾರ್ಥಗಳನ್ನು ಉಪದೇಶಿಸಿದರೆಂಬ ಇತಿಹಾಸವೂ ಉಂಟು. ಇಂತಹ ಇತರ ಸನ್ನಿವೇಶಗಳು ಶ್ರೀ ಶ್ರೀನಿವಾಸಮಹಾತ್ಮ್ಯೆಯಲ್ಲೂ ಉಂಟು. ಗ್ರಂಥವಿಸ್ತರ ಭಯವು ದಾಸನನ್ನು ಪೀಡಿಸುತ್ತದೆ” ಇಲ್ಲಿಗೆ ಶಾಂಡಿಲ್ಯ ಸ್ಮೃತಿ ಪ್ರಮಾಣಗಳು ಮುಗಿದವು.

ಮುಂದೆ **ಸಾತ್ತ್ವಕಿ ತಂತ್ರ** ಪ್ರಮಾಣಗಳನ್ನು ಉದಾಹರಿಸುತ್ತಾರೆ.–

“ **ಅಯಂಮನ್ತ್ರರಾಜಃ** ” ಮನ್ತ್ರಗಳಲ್ಲೆಲ್ಲಾ ಶ್ರೇಷ್ಠವಾದ ಈ ಮನ್ತ್ರವು, **ನಾಸ್ತಿಕಾಯ**-ನಾಸ್ತಿಕನಿಗೆ, **ನದಾತವ್ಯಃ**-ಕೊಡತಕ್ಕದ್ದಲ್ಲವು ಎಂದರೆ ಉಪದೇಶಿಸತಕ್ಕದ್ದಲ್ಲವು. ಇನ್ನೂ ಯಾರು ಯಾರಿಗೆ ಕೊಡತಕ್ಕದ್ದಲ್ಲವೆಂದರೆ ಹೇಳುತ್ತಾರೆ: **ಅನೃಜವೇ**-ಋಜುವಾದ ಬುದ್ಧಿಯಿಲ್ಲದ ಕಪಟಬುದ್ಧಿಯುಕ್ತನಿಗೂ **ನ**-ಕೊಡದು. **ಅಭಕ್ತಾಯ**-ದೇವರಲ್ಲೂ ತದೀಯರಲ್ಲೂ ಭಕ್ತಿಯಿಲ್ಲದವನಿಗೂ **ಕದಾಚನ.** ಎಂದಿಗೂ ಕೂಡದು. **ಹಿಂಸಾಭಿರುಚಯೇ**-ಪ್ರಾಣಿಹಿಂಸೆಯಲ್ಲಿ ರುಚಿಯುಳ್ಳವನಿಗ, **ನೈವ**-ಕೂಡವೇ ಕೂಡದು; **ಲುಬ್ಧಾಯ**–ಹಣದ ದುರಾಸೆಯಿಂದ, ಅದನ್ನು ದಾನ ಮಾಡದೆ ಕೂಡಿ ಹಾಕುವವನಿಗೆ, ಅಥವಾ ಜೇಟಿಯಾಡುವವನಿಗೆ, **ವಿಶೇಷತಃನ**-ವಿಶೇಷವಾಗಿ ಕೂಡದು. ಹಣದಾಶೆ ವಿಶೇಷವಾಗಿ ಇರುವವನು ಮೋಕ್ಷಶಾಸ್ತ್ರಕ್ಕೆ ಅರ್ಹನಲ್ಲವು; ವೈರಾಗ್ಯವಿರುವವನೇ ಯೋಗ್ಯನೆಂಬ ಭಾವವು. ಅದು ಏತಕ್ಕೆ ಉಪದೇಶಿಸತಕ್ಕದ್ದಲ್ಲವೆಂದರೆ ಕಾರಣವನ್ನು ಹೇಳುತ್ತಾರೆ: **ಹಿ**-ಯಾವ ಕಾರಣದಿಂದ, **ಮನ್ತ್ರೋಽಯಂ**-ಈ ಅಷ್ಟಾಕ್ಷರಮಂತ್ರವು, **ನತಾದೃಶಃ**-ಅಂತಹ ನಿಕೃಷ್ಟರಾದವರಿಗೆಲ್ಲಾ ಉಪದೇಶಿಸತಕ್ಕದ್ದಲ್ಲವು. ಹಾಗಾದರೆ ಯಾರಿಗೆ ಉಪದೇಶಿಸತಕ್ಕದ್ದೆಂದರೆ ಹೇಳುತ್ತಾರೆ: **ಋಜವೇ** -ಪ್ರಾಮಾಣಿಕ ಬುದ್ಧಿಯುಳ್ಳವನಿಗೆ, **ಗುರುಭಕ್ತಾಯ**–ಗುರುವಿನಲ್ಲಿ ವಿಶೇಷ ಭಕ್ತಿಯುಳ್ಳವನಿಗೆ, **ವಿಶೇಷತಃ**-ಮುಖ್ಯವಾಗಿ,

---

(೮) ಸಾತ್ವಕಿ ತನ್ತ್ರ.

**ದಾತವ್ಯೋ ದೇಶಿಕೇನ ತು" (೯) "ತೊಂಡರಕ್ಕಮುದುಣ್ಣ ಚ್ಚೊಲ್‌ಮಾಲೈಗಳ್ ಶೊನ್ನೇ‌ನ್" (೧೦) "ಅನ್ನಾದಿನೋಲಿಟ್ಟರಿವಿತ್ತೇನಾಳ್ ಪ್ರೊರುಳ್ಳೈಜ್ಜಿನ್ನಾವುಲ್ ಕೊಳ್ಳಿ ನೀರ್ ತೇರ್ನ್ದು"ಎನ್ರು**

---

**ವೈಷ್ಣವಾಯ**-ವಿಷ್ಣುಭಕ್ತನಿಗೆ ಆಗಬಹುದು, ಇದರಿಂದ ವಿಷ್ಣುಭಕ್ತನಲ್ಲದವನಿಗೆ ಬೇಡವೆಂದು ಹೇಳಿದಂತಾಯಿತು; **ಸರ್ವಪ್ರಾಣ್ಯನುಕೂಲಾಯ**-ಸರ್ವ ಪ್ರಾಣಿಗಳಲ್ಲೂ ಅನುಕೂಲನಾಗಿರುವವನಿಗೂ, **ದೇಶಿಕೇನ**-ಆಚಾರ್ಯನಿಂದ, **ದಾತವ್ಯಃ**-ಕೊಡಲ್ಪಡತಕ್ಕದ್ದು, ಎಂದರೆ ಉಪದೇಶಿಸತಕ್ಕದ್ದು.

ಮುಂದೆ ಆಳ್ವಾರ್ ದಿವ್ಯಸೂಕ್ತಿಪ್ರಮಾಣದಿಂದ ಸಮರ್ಥಿಸಿ ಹೇಳುತ್ತಾರೆ:-

**ಕಣ್ಣುಕೊಣ್ಡೆನ್ನೈಕ್ಕಣ್ಣೈಯಾರ್ ಕಳಿತ್ತು । ಪಣ್ಡೈವಿನೈಯಾಯಿನ ಪತ್ತೋಡರುತ್ತು ತೊಣ್ಡರ್ಕ್ಕಮುದುಣ್ಣ ಚ್ಚೊನ್ಮಾಲೈಗಳ್ ಶೊನ್ನೇನ್! ಅಣ್ಡತ್ತಮರರ್ ಪೆರುಮಾನಡಿಯೇನೈ ॥**

ಇದು ಮೂಲಮಂತ್ರದ ತಾತ್ಪರ್ಯವನ್ನು ಸೂಚಿಸುವ ಗಾಥೆಯು:-ಎನ್‌ಕಣ್ ಇಣ್ಣೈಆರ-ನನ್ನ ನಯನ ದ್ವಂದ್ವವು ತೃಪ್ತಿಯನ್ನು ಹೊಂದುವ ಹಾಗೆ, **ಕಣ್ಣುಕೊಂಡು**-ಸರ್ವೇಶ್ವರನನ್ನು ದರ್ಶನ ಮಾಡಿ, ಅಥವಾ ಮೂಲಮಂತ್ರದ ಪ್ರಣವದಲ್ಲಿ ತನ್ನ ಜ್ಞಾನಚಕ್ಷುಸ್ಸಿನಿಂದ ಮಹಾವಿಷ್ಣುವಿನ ಸ್ವರೂಪ ಸ್ವಭಾವಗಳನ್ನೂ ತನ್ನ ಸ್ವರೂಪಸ್ವಭಾವಗಳನ್ನೂ ಅರಿತವನಾಗಿ ಎಂಬರ್ಥವು, ಇದರಿಂದ ತನ್ನ ಪರಮಾತ್ಮಶೇಷತ್ವವನ್ನು ತನ್ನ ಜ್ಞಾನಚಕ್ಷುಸ್ಸಿನಿಂದ ತಿಳಿದವನಾಗಿ ಎಂಬ ತಾತ್ಪರ್ಯವು. **ಕಳಿತ್ತು**-ತನ್ಮೂಲಕ ಆನಂದಿಸಿ, **ಪಣ್ಡೈ**-ಅನಾದಿ ಕಾಲದಿಂದ ಅನುಸರಿಸಿ ಬಂದ, **ವಿನೈಯಾಯಿನ**-ವಿರೋಧಿ ವರ್ಗಗಳಾದ ಪಾಪಗಳೂ ಅಹಂಕಾರ ಮಮಕಾರಗಳೆಲ್ಲವನ್ನೂ, **ಪತ್ತೋಡು ಅರ್ರೈತ್ತು**-ಸವಾಸನವಾಗಿ ಕಿತ್ತು ಹಾಕಿ, (ಇದು ನಮಸ್ಶಬ್ದಾರ್ಥವು; ಗುರುಮುಖೇನ ಅನುಷ್ಠಿಸಿದ ಶರಣಾಗತಿಯ ಮೂಲಕ ಸರ್ವಪಾಪಗಳನ್ನೂ ಹೋಗಲಾಡಿಸಿಕೊಂಡು ಎಂಬರ್ಥವು), **ಅಂಡತ್ತಮರರ್**-ಪರಮಪದದಲ್ಲಿರುವ ನಿತ್ಯಸೂರಿಗಳು, **ಪೆರುಮಾನ್**-ಅನುಭವಿಸುವ ಪರಮಪುರುಷನಿಗೂ ಆ ಕಾರಣದಿಂದ, ತದೀಯರಿಗೂ, **ಅಡಿಯೇನ**-ದಾಸನಾದ ನಾನು, **ತೊಂಡರ್ಕ್ಕು**-ಉಪದೇಶಿಸಲು ಯೋಗ್ಯರಾದ ತದೀಯರಾದ ಶ್ರೀವೈಷ್ಣವರುಗಳಿಗಾಗಿ, **ಅಮುದುಣ್ಣ**-ಅಮೃತವನ್ನು ಭುಜಿಸುವ ಹಾಗೆ, **ಚ್ಚೊನ್ನಮಾಲೈಗಳ್**-ಈ ತಿರುವಾಯ್ಮೊಳಿರೂಪ ಪಾಶುರಮಾಲೆಗಳನ್ನು, **ಶೊನ್ನೇನ್**-ಭಗವದ್ಭಾಗವತಕೈಂಕರ್ಯ ರೂಪದಲ್ಲಿ ಯೋಗ್ಯ

---

(೯) ತಿರುವಾಯ್ ೯. ೪. ೯.

**ಶ್ರೀಸಾತ್ವತ ಭಗವದ್ಗೀತಾ ವಸಿಷ್ಠಕರಾಳಸಂವಾದ ಶಾಣ್ಡಿಲ್ಯಸ್ಮೃತಿ ಸಾತ್ಯಕಿತನ್ತ್ರಾದಿಗಳಲ್ ಚೊಲ್ಲುಗಿರ ಪಡಿಯೇ ಶರಣ್ಯರ್ ಅನುಮತಿ ಪಣ್ಣಿ ನ್ಪಡಿಕ್ಕೀಡಾಗ ಸಾತ್ವಿಕತಾಸ್ತಿಕ್ಯಾಧಿ ಗುಣಂಗಳೈಯುಡೈಯರಾಯ್ (೧೧) "ಅಭಯಂ ಸತ್ವಸಂಶುದ್ಧಿಜ್ಞಾನಯೋಗವ್ಯವಸ್ಥಿತಿಃ। ದಾನಂ ದಮಶ್ಚಯಜ್ಞಶ್ಚ ಸ್ವಾಧ್ಯಾಯ**

---

ರಿಗೇ ಹೇಳಿರುತ್ತೇನೆ; ಎಂದರೆ ಸರಿಯಾದ ಯೋಗ್ಯರಿಗೇನೇ ಉಪದೇಶಿಸಿರುತ್ತೇನೆ (ಇದು ನಾರಾಯಣಾಯ ಎಂಬ ಮೂರನೆಯ ಪದದ ಅರ್ಥವು,)

(೧೦) ಈ ಪೂರಾಪಾಶುರವು:- **" ನಾನ್ಮುಕನೈ ನಾರಾಯಣನ್ಪಡೈತ್ತಾನ್ ನಾನ್ಮುಕನುಮ್ ತಾನ್ಮುಕಮಾಯ್ ಚ್ಚಙ್ಕರನೈತ್ತಾನ್ ಪಡೈತ್ತಾನ್। ಯಾನ್ಮುಕಮಾಯ್ ಅನ್ದಾದಿಮೇಲಿಟ್ಟರಿವಿತ್ತೇನ್ ನಾಳ್‌ಪೊರುಳೈಚ್ಚಿನ್ದಾಮಲ್ ಕೊಣ್ಮಿನೀರ್ ತೇರ್ನ್ದು" ॥೧॥**

**ನಾನ್ಮುಕನೈನಾರಾಯಣನ್ಪಡೈತ್ತಾನ್**- ಚತುರ್ಮುಖನನ್ನು ಶ್ರೀಮನ್ನಾರಾಯಣನು ಸೃಷ್ಟಿಸಿದನು. **ನಾನ್ಮುಕನುಮ್ ತಾನ್ಮುಖಮಾಯ್ ಚ್ಚಙ್ಕರನೈತ್ತಾನ್ ಪಡೈತ್ತಾನ್**-ಚತುರ್ಮುಖನು ಪ್ರಧಾನನಾಗಿ ತಾನೂ ಶಂಕರನನ್ನು ಸೃಷ್ಟಿಸಿದನು; ಹೀಗೆ ಇವರುಗಳೆಲ್ಲಾ ಬಂಧಕ್ಕೊಳಪಡಿಸಿ ಜೀವಾತ್ಮರಿಗೆ ಕ್ಲೇಶವನ್ನುಂಟುಮಾಡಿದರು. ತಿರುಮಳಿಶೈಯಾಳ್ವಾರಾದ ತಾವಾದರೋ ಹಾಗಲ್ಲವು, ಸಂಸಾರ ನಿವೃತ್ತಿಯುಂಟಾಗಿರುವ ಹಾಗೆ ಮಾಡಿರುತ್ತೇನೆಂದು ಹೇಳುತ್ತಾರೆ. **ಯಾನ್‌ಮುಕಮಾಯ್**-ನನ್ನ ಮೂಲಕವಾಗಿ, **ಆಳ್‌ಪೊರುಳೈ**-ತಿಳಿಯಲು ಕಷ್ಟವಾಗಿರುವ ರಹಸ್ಯಾರ್ಥವನ್ನು, **ಅನ್ದಾದಿಮೇಲಿಟ್ಟು**-ಅನ್ದಾದಿ ರೂಪದಲ್ಲಿ ಈ(೯೬) ಪಾಶುರಗಳ ಮೂಲಕ, **ಅರಿವಿತ್ತೇನ್**-ತಿಳಿಯಪಡಿಸಿರುತ್ತೇನೆ. **ನೀರ್‌ತೇರ್‌ನ್ದು**-ನೀವು ಚನ್ನಾಗಿ ವಿಮರ್ಶಿಸಿ ನೋಡಿ, **ಚಿನ್ದಾಮಲ್‌ಕೊಣ್ಮಿನ್**-ಒಂದು ರಹಸ್ಯಾರ್ಥವನ್ನೂ ಪರಿತ್ಯಾಗ ಮಾಡದೆ ಗ್ರಹಿಸತಕ್ಕದ್ದು ಅಥವಾ ಒಂದನ್ನೂ ಅಪಾರ್ಥ ಮಾಡಿ ತಿಳಿಯದೆ, ಸಂಸಾರದಲ್ಲಿರುವ ಕ್ಲೇಶಗಳನ್ನೂ ನಾನು ಹೇಳಿರುವ ರಹಸ್ಯಗಳಿಂದುಂಟಾಗುವ ಶ್ರೇಯಸ್ಸನ್ನೂ ವಿವೇಕಿಸಿ ತಿಳಿದು, ನನ್ನ ಉಪದೇಶಕ್ಕೆ ಸಂಪೂರ್ಣ ಗಮನ ಕೊಡತಕ್ಕದೆಂಬ ಭಾವವು. ಚತುರ್ಮುಖಾದಿಗಳು ಬಂಧವನ್ನುಂಟುಮಾಡುವ ಸೃಷ್ಟಿಕ್ರಮದಲ್ಲಿ ಪ್ರಧಾನರಾದರು, ನಾನಾದರೋ ಬಂಧನಿವೃತ್ತಿಯುಂಟಾಗುವ ಉಪದೇಶವನ್ನು ಕೈಕೊಂಡೆನು; ಲಾಲಿಸತಕ್ಕದ್ದೆಂದು ಹೇಳಿರುತ್ತಾರೆ.-

---

(೧೦) ನಾನ್ಮುಖಂತಿರು ೧. (೧೧) ಗೀ. ೧೬. ೧

**ಏನ್ರು**-ಎಂಬುದಾಗಿ, **ಶ್ರೀಸಾತ್ವತ ಭಗವದ್ಗೀತಾ ವಸಿಷ್ಠಕರಾಳ ಸಂವಾದ ಶಾಂಡಿಲ್ಯಸ್ಮೃತಿ ಸಾತ್ಯಕಿ ತಂತ್ರವೇ** ಮೊದಲಾದುವುಗಳಲ್ಲಿ, **ಚೊಲ್ಲುಗಿರಪಡಿಯೇ**-ಹೇಳಿರುವ ಹಾಗೆ, **ಶರಣ್ಯ**-ರಕ್ಷಣೋಪಾಯನಾಗಿರಲು, ಯೋಗ್ಯನಾದ ಭಗವಂತನು, **ಅನುಮತಿಪ್ಪಣ್ಣುವ್ಪಡಿಕ್ಕೀಡಾನ**- ಅನುಮತಿಯನ್ನು ಕೊಡುವವಕ್ಕೆ ಯೋಗ್ಯವಾದ, **ಸಾತ್ವಿಕತಾಸ್ತಿಕ್ಯಾತಿಗುಣಂಗಳ್ಯೈಯುಡೈಯರಾಯ್**-ಸಾತ್ವಿಕತೆ ಏನು ಮತ್ತು ಆಸ್ತಿಕ್ಯಬುದ್ಧಿ ಏನು ಎಂದರೆ ಜೀವಾತ್ಮ ಪರಮಾತ್ಮಾ ವಿಷಯವಾದ ಶಾಸ್ತ್ರದಲ್ಲಿ ನಂಬಿಕೆ ಏನು ಇವೇ ಮೊದಲಾದ ಗುಣಗಳನ್ನು ಹೊಂದಿರುವ, (೧೧) ಈ ಗೀತಾಶ್ಲೋಕದಲ್ಲಿ ದೈವೀಸಂಪತ್ತನ್ನು ಹೊಂದಿರುವವನು ಯಾವ ಗುಣಗಳನ್ನು ಹೊಂದಿರುವನೆಂಬುದು ಹೇಳಲ್ಪಡುತ್ತದೆ. ದಾಸನು ಬರೆದಿರುವ ಭಗವದ್ಗೀತೆಯ ಆಚಾರ್ಯಹೃದಯಾನ್ವೇಷಿಣೀ ವ್ಯಾಖ್ಯಾನ ಪರಾಂಬರಿಸಿ; (೧) **ಅಭಯಂ**-ಇಷ್ಟವಾದುವರ ವಿಯೋಗ ಅಥವಾ ಅನಿಷ್ಟಪ್ರಾಪ್ತಿ ಇವುಗಳಿಂದ ಉಂಟಾಗುವದರಲ್ಲಿ ಭಯವಿಲ್ಲದಿರೋಣವು; (೨) **ಸತ್ವಸಂಶುದ್ಧಿಃ**-ಮನಸ್ಸಿಗೆ ರಜಸ್ತಮೋಗುಣಗಳ ಸಂಬಂಧವಿಲ್ಲದೆ ಅದು ಪರಿಶುದ್ಧವಾಗಿರೋಣವು; (೩) **ಜ್ಞಾನಯೋಗವ್ಯವಸ್ಥಿತಿಃ**-ಪ್ರಕೃತಿವಿಯುಕ ಆತ್ಮಸ್ವರೂಪವನ್ನು ವಿವೇಕಿಸಿ ತಿಳಿಯೋಣವು; (೪) **ದವುಶ್ಚ**-ಮನಸ್ಸಿನ ಮೂಲಕ ಇಂದ್ರಿಯಗಳು ವಿಷಯಗಳಲ್ಲಿ ಪ್ರವರ್ತಿಸದ ಹಾಗೆ ಅದನ್ನು ನಿರೋಧಿಸೋಣವು; (೬) **ಯಜ್ಞಶ್ಚ**-ಫಲಾಭಿಸಂಧಿ ಇಲ್ಲದೆ ಭಗವದಾರಾಧನ ರೂಪದಲ್ಲಿ ಪಂಚಮಹಾಯಜ್ಞಗಳ ಅನುಷ್ಠಾನವು; **ಸ್ವಾಧ್ಯಾಯಃ**-ಭಗವಂತನ ಸ್ವರೂಪಾದಿಗಳನ್ನು ತದಾರಾಧನಕ್ರಮಗಳನ್ನು ತಿಳಿಸುವುದು ವೇದವು ಎಂದು ತಿಳಿದು ಅದರ ಅಧ್ಯಯನವು; **ತಪಃ**-ಏಕಾದಶಿ ದ್ವಾದಶೀ ಪ್ರಯುಕ್ತ ಏಕಾದಶೀ ಉಪವಾಸ, ಕೃಚ್ಛ್ರ ಚಾಂದ್ರಾಯಣಾದಿಗಳು, ಭಗವಂತನಿಗೆ ಪ್ರೀತಿಕರವಾದ ವ್ರತಗಳು; (೯) **ಆರ್ಜವಂ**-ಋಜುತ್ವವು, ಮನೋವಾಕ್ಕಾಯ ಕರ್ಮಗಳಲ್ಲಿ ಒಂದೇ ವಿಧವಾಗಿರೋಣವು; (೧೦) **ಅಹಿಂಸಾ**-ಇತರ ಪ್ರಾಣಿಗಳಿಗೆ ಹಿಂಸೆ ಕೊಡದೆ ಇರೋಣವು; (೧೧) **ಸತ್ಯಂ**-ಯಥಾರ್ಥವಾದುದಾಗಿ ಹಿತವಾಗಿರುವದನ್ನು ಹೇಳೋಣವು; (೧೩) **ತ್ಯಾಗಃ**-ಆತ್ಮಹಿತಕ್ಕೆ, ವಿರುದ್ಧ ವಸ್ತುಗಳ ಪರಿತ್ಯಾಗವು; (೧೪) **ಶಾನ್ತಿಃ**-ಇಂದ್ರಿಯಗಳು ವಿಷಯಗಳಲ್ಲಿ ಪ್ರವರ್ತಿಸದ ಹಾಗೆ ಅವುಗಳನ್ನು ತಡೆಯೋಣವು; (೧೫) **ಅಪೈಶುನವು್**-ಇತರರಿಗೆ ಅನರ್ಥವನ್ನುಂಟು ಮಾಡುವಂಥಾ ಮಾತುಗಳನ್ನಾಡದೇ ಇರೋಣವು; (೧೬) **ದಯಾಭೂತೇಷು**-ಪ್ರಾಣಿಗಳಲ್ಲಿ ದುಃಖಗಳನ್ನು ಸಹಿಸದಿರೋಣವು; (೧೭) **ಅಲೋಲುಪ್ತ್ವಂ**-ಅಥವಾ **ಅಲೋಲುತ್ವಂ** ಎಂಬುದಾಗಿ ಪಾಠವು, **ಅಲೋಲುಪತ್ವಂ**-ವಿಷಯೋಪಭೋಗಗಳಲ್ಲಿ ಆಶೆಯಿಲ್ಲದಿರೋಣವು; (೧೮) **ಮಾರ್ದವಂ**-ಮೃದುಸ್ವಭಾವವು

---

(೧೧) ಗೀ ೧೬, ೧-೩

**ಸ್ತಪ ಆರ್ಜವಮ್। ಅಹಿಂಸಾ ಸತ್ಯ ಮಕ್ರೋಧಸ್ತ್ಯಾಗಶ್ಶಾನ್ತಿರ ಪೈಶುನಮ್। ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀ ರಚಾ ಪಲಮ್। ತೇಜಃ ಕ್ಷಮಾ ಧೃತಿಶ್ಶೌಚ ಮದ್ರೋಹೋ ನಾತಿಮಾನಿತಾ। ಭವನ್ತಿ ಸಂಪದಂ ದೈವೀ ಮಭಿಜಾತಸ್ಯ ಭಾರತ॥" ಎನ್ನುಮ್ (೧೨) "ದ್ವಿವಿಧೋಭೂತಸರ್ಗೋಯಂ ದೈವ ಮಾಸುರ ಏವ ಚ। ವಿಷ್ಣುಭಕ್ತಿ ಪರೋದೈವಃ" ಎನ್ರುಮ್ ಶೊಲ್ಲಪ್ಪಟ್ಟ ದೈವ ಪ್ರಕೃತಿಗಳುಕ್ಕು (೧೩) "ಸಂವತ್ಸರಂ ತದರ್ಧಂವಾ**

---

ಳ್ಳೋಣವು; (೧೯) **ಹ್ರೀಃ**-ಮಾಡಬಾರದ್ದನ್ನು ಮಾಡಿದೆನೇ ಎಂದು ಲಜ್ಜೆಯು; (೨೦) **ಅಚಾಪಲಮ್**-ತನಗೆ ಬೇಕಾದ ವಸ್ತುಗಳನ್ನು ಅಪೇಕ್ಷಿಸುವ ಚಾಪಲ್ಯ ವಿಲ್ಲದವನು; (೨೧) **ತೇಜಃ**-ದುರ್ಜನರಿಂದ ತಿರಸ್ಕಾರವನ್ನು ಹೊಂದದೇ ಇರೋಣವು, (೨೨) **ಕ್ಷಮಾ**-ಇತರರ ಮೂಲಕವಾಗಿ ತೊಂದರೆಯನ್ನು ಅನುಭವಿಸಿದರೂ ಅದಕ್ಕಾಗಿ ಆ ಇತರರ ವಿಷಯದಲ್ಲೂ ಚಿತ್ತವಿಕಾರವಿಲ್ಲದಿರೋಣವು; (೨೩) **ಧೃತಿಃ**-ಮಹತ್ತಾದ ಆಪತ್ತಿನಲ್ಲೂ ಮಾಡಬೇಕಾದುದನ್ನು ಮಾಡುವುದರಲ್ಲಿ ಸಾವಧಾನದಿಂದಿರುವುದು; (೨೪) **ಶೌಚಂ**-ಬಾಹ್ಯೇನ್ದ್ರಿಯಗಳು ಮತ್ತು ಅಂತರಿಂದ್ರಿಯವಾದ ಮನಸ್ಸು, ಶಾಸ್ತ್ರೀಯ ಕರ್ತವ್ಯತೆಗೆ ಯೋಗ್ಯವಾಗಿರೋಣವು; (೨೫) **ಅದ್ರೋಹಃ**-ಇತರರ ಹಿತಗಳಿಗೆ ವಿಘಾತವಿಲ್ಲದಿರೋಣವು; (೨೬) **ನಾತಿಮಾನಿತಾ**-ಗರ್ವವಿಲ್ಲದಿರೋಣವು. ಈ ಇಪ್ಪತ್ತಾರು ಗುಣಗಳೂ, **ಓ ಭಾರತ**- ಓ ಭರತಸತ್ಕುಲಪ್ರಸೂತನಾಗಿ ದೈವೀಸಂಪತ್ತನ್ನು ಹೊಂದಿದ ಅರ್ಜುನನೇ, **ದೈವೀಸಂಪದಂ**-ದೈವೀ ಸಂಪತ್ತನ್ನು ಕುರಿತು, **ಅಭಿಜಾತಸ್ಯ**-ಹುಟ್ಟಿದವನಿಗೆ ಎಂದರೆ ಭಗವದಾಜ್ಞಾನುವರ್ತನ ಶೀಲರಿಗೆ, **ಭವಂತಿ**-ಉಂಟಾಗುತ್ತವೆ" **ಎನ್ರುಂ**-ಎಂದೂ, (೧೨) "**ಅಯಂ**-ಈ, **ಭೂತಸರ್ಗಃ**-ಪ್ರಾಣಿಸೃಷ್ಟಿಕ್ರಮವು, **ದೈವ ಆಸುರ ಏವ ಚ**-ದೈವ ಮತ್ತು ಆಸುರವೆಂಬುದಾಗಿ, **ದ್ವಿವಿಧಃ**-ಎರಡು ವಿಧವುಳ್ಳದುದು. **ದೈವಃ**-ದೈವಸರ್ಗವು ಯಾವುದು ಎಂದರೆ, **ವಿಷ್ಣುಭಕ್ತಿಪರಃ**-ವಿಷ್ಣುಭಕ್ತಿಪರನು" **ಎನ್ರುಂ**-ಎಂಬುದಾಗಿ, **ಶೊಲ್ಲುಪ್ಪಟ್ಟ ದೈವೀಪ್ರಕೃತಿಗಳುಕ್ಕು**-ಹೇಳಲ್ಪಟ್ಟ ದೈವೀಸ್ವಭಾವಯುಕ್ತರಿಗೆ, ಇಂತಹ ದೈವೀಸಂಪದ್ಯುಕ್ತರಿಗೇ ಆಚಾರ್ಯನು ಬ್ರಹ್ಮವಿದ್ಯೆಯನ್ನು, ಈ ಸಂದರ್ಭದಲ್ಲಿ ಶರಣಾಗತಿ ಶಾಸ್ತ್ರವನ್ನೂ ಉಪದೇಶಿಸತಕ್ಕದ್ದೆಂದು ಹೇಳುತ್ತಾರೆ:-"**ಸಂವತ್ಸರಂ**"-ಒಂದು ಸಂವತ್ಸರವಾಗಲಿ, **ತದರ್ಧಂವಾ**-ಆರು ತಿಂಗಳಾಗಲಿ, **ಮಾಸತ್ರಯಮಥಾಪಿವಾ**-ಹಾಗಿಲ್ಲದಿದ್ದರೆ

---

(೧೨) ವಿ. ಧ. ೧೦೬. ೭೪. (೧೩) ಶಾಣ್ಡಿಲ್ಯಸ್ಮೃತಿ ೧. ೧೧೯.

**ಮಾಸತ್ರಯ ಮಥಾಪಿವಾ। ಪರೀಕ್ಷ್ಯ ವಿವಿಧೋಪಾಯೈಃ ಕೃಪಯಾ ನಿಸ್ಪೃಹೋವದೇತ್ ॥ (೧೪) "ಯದೃಚ್ಛಯೋ ಪ್ರಪನ್ನಾನಾಂ ದೇಶಾನ್ತರ ನಿವಾಸಿನಾಂ। ಇಷ್ಟೋಪದೇಶಃ ಕರ್ತ್ತವ್ಯೋ ನಾರಾಯಣ ರತಾತ್ಮನಾಂ ॥ ಇತ್ಯಾದಿಗಳಿರ್‌ಚೊನ್ನ ಪರೀಕ್ಷಾದಿ ಮೂಲಗುಣ ನಿಶ್ಚಯಪೂರ್ವಕಮಾಗ "ಶ್ರುತಾದನ್ಯತ್ರ ಸಂತುಷ್ಟಸ್ತತ್ರೈವಚ ಕುತೂಹಲೀ" ಎನ್ರಲಾಮವಸ್ಥೆಯಿಲೇ ಅಷಟ್ಕರ್ಣಮಾಗವೆಳಿಯಿಟ್ಟು (೧೫) "ದಂಭೋದರೋಽತಿಮಾನಶ್ಚ ಕ್ರೋಧಃ ಪಾರುಷ್ಯ ಮೇವಚ। ಅಜ್ಞಾನಂ ಚಾ ಭಿಜಾತಸ್ಯ ಪಾರ್ಥಸಂಪದಮಾಸುರೀಮ್" ಎನ್ರುಮ್ (೧೬) "ವಿಪರೀತಸ್ತಥಾಸುರಃ"**

---

ಮೂರು ತಿಂಗಳಾಗಲಿ. **ವಿವಿಧೋಪಾಯೈಃ**-ನಾನಾ ವಿಧವಾದ ಉಪಾಯಗಳಿಂದ, **ಪರೀಕ್ಷ್ಯ**-ಚನ್ನಾಗಿ ಪರೀಕ್ಷಿಸಿ, **ಕೃಪಯಾ**-ತುಂಬಾ ಕೃಪೆಯಿಂದ ಆಚಾರ್ಯನು, **ನಿಸ್ಪೃಹಃ**-ತನ್ನ ಉಪದೇಶಕ್ಕೆ ಗುರುದಕ್ಷಿಣೆ ಮುಂತಾದ್ದನ್ನು ಅಪೇಕ್ಷಿಸದೆ, **ವದೇತ್**-ಉಪದೇಶಿಸತಕ್ಕದ್ದು, ಯಾವುದನ್ನು ಎಂದರೆ ರಹಸ್ಯವಾದ ಬ್ರಹ್ಮವಿದ್ಯೆ ಮತ್ತು ಮನ್ತ್ರಗಳನ್ನು, ಎಂಬುದಾಗಿಯೂ, (೧೪) "**ಯದೃಚ್ಛಯೋಪಪನ್ನಾನಾಂ**-ಯಾದೃಚ್ಛಿಕವಾಗಿ ಬಂದು ಆಶ್ರಯಿಸಿದವರಾಗಿಯೂ, **ದೇಶಾಂತರ ನಿವಾಸಿನಾಂ**-ಬೇರೆ ದೂರ ದೇಶದಲ್ಲಿ ವಾಸ ಮಾಡುವವರಾಗಿಯೂ, **ನಾರಾಯಣರತಾತ್ಮನಾಂ**-ಶ್ರೀಮನ್ನಾರಾಯಣನಲ್ಲಿ ಸಕ್ತವಾದ ಮನಸ್ಸುಳ್ಳವರಾಗಿಯೂ ಇರುವವರಿಗೆ, **ಇಷ್ಟೋಪದೇಶಃ ಕರ್ತ್ತವ್ಯಃ**-ಬಹುದೂರದಿಂದ ಈ ಉಪದೇಶಕ್ಕಾಗಿಯೇ ಶ್ರದ್ಧೆಯಿಂದ ಬಂದವರಾದ ಪ್ರಯುಕ್ತ ತುಂಬಾ ಪರೀಕ್ಷೆಯ ಆವಶ್ಯಕವಿಲ್ಲದೇನೇ, ಹಿತದಿಂದ ಉಪದೇಶವನ್ನು ಮಾಡತಕ್ಕದ್ದು. ಆ ದೇಶದಲ್ಲೇ ಇರುವರಾದರೆ, ನಾರಾಯಣ ಪರತ್ವಾದಿಗಳಿಲ್ಲದೇನೇ ಡಂಭಕ್ಕಾಗಿ ಬಂದು ಆಶ್ರಯಿಸಬಹುದು. ಹಾಗಿಲ್ಲದೆ ದೂರ ದೇಶದಲ್ಲಿದ್ದು ಕಷ್ಟಸಾಧ್ಯವಾದ ಪ್ರಯಾಣವನ್ನು ಕೈಗೊಂಡು ಬಂದವರಾದ ಪ್ರಯುಕ್ತ ಸ್ವಲ್ಪ ಪರೀಕ್ಷಿಸಿದರೆ ಸಾಕು; ನಾರಾಯಣಪರನೆಂದು ತೋರಿಬಿಟ್ಟರೆ ತುಂಬಾ ಹಿತದಿಂದ ಉಪದೇಶಿಸತಕ್ಕದ್ದೆಂಬ ಭಾವವು." **ಇತ್ಯಾದಿಗಳಿರ್‌ಚೊನ್ನ**-ಇವೇ ಮೊದಲಾದ ಪ್ರಮಾಣಗಳಲ್ಲಿ ಹೇಳಲ್ಪಟ್ಟ, **ಪರೀಕ್ಷಾದಿಮೂಲಗುಣ ನಿಶ್ಚಯಪೂರ್ವಕಮಾಗ**-ಪರೀಕ್ಷೆಯೇ ಮೊದಲಾದ ಮೂಲಕವಾಗಿ ಉಂಟಾದ ಉಪದೇಶಕ್ಕೆ ಅರ್ಹವಾದ ಗುಣಗಳಿವೆ ಎಂಬ ನಿಶ್ಚಯಪೂರ್ವಕವಾಗಿ, ಇಲ್ಲಿ ಪರೀಕ್ಷಾದಿ ಎಂಬಲ್ಲಿನ **ಆದಿ**-

---

(೧೫) ಗೀ ೧೬. ೪.

**ಎನ್ರುಂ ಶೊಲ್ಲಪ್ಪಟ್ಟ ಆಸುರ ಪ್ರಕೃತಿಗಳುಕ್ಕು ಮರೈತ್ತು, ಶೀರಿಯ ಧನಮುಡೈಯಾರ್ ಶೇಮಿತ್ತು ವಾಳುಮಾಪ್ಪೋಲೆ ಚರಿತಾರ್ಥ ರಾಯ್, ವರ್ತ್ತಿಪ್ಪಾರ್‌ಗಳ್ ಪೂರ್ವಾ ಚಾರ್ಯರ್‌ಗಳ್.**

---

**ಪದನಿಂದ** ಮಹಾಭಾಗವತೋತ್ತಮರ ಹೇಳಿಕೆ ಪತ್ರ ಮೊದಲಾದುವುಗಳು ಸೂಚಿಸ **ಲ್ಪಟ್ಟಿತು** ; " **ಶ್ರುತಾದನ್ಯತ್ರ**-ಶಾಸ್ತ್ರೋಪದೇಶ ಮತ್ತು ರಹಸ್ಯಗಳ ಉಪದೇಶ, **ಇವುಗಳಿಗಿಂತ** ಬೇರೆ ಯಾವ ಅರ್ಥಲಾಭ ವಿಷಯೋಪಭೋಗಾದಿಗಳಿಗಿಂತ, **ಸಂತುಷ್ಟಃ**-ಸಂತೋಷಚಿತ್ತನಾಗಿ ಅಥವಾ ಅಂತಹ ವಿಷಯೋಪಭೋಗಗಳು ಸಾಕೆಂದು **ಸಂತೋಷಚಿತ್ತನಾದ**, ಮತ್ತು **ತತ್ರೈವ**-ಆ ರಹಸ್ಯ ಶಾಸ್ತ್ರಾರ್ಥಗಳನ್ನು ಉಪದೇಶ **ಮೂಲಕ** ಕೇಳುವದರಲ್ಲೇ, **ಕುತೂಹಲೀಚ**-ಕುತೂಹಲವುಳ್ಳವನಾಗಿರುವನು " **ಎನ್ರಲಾಮವಸ್ಥೈಯಿಲೇ**-ಎಂದು ಹೇಳಬಹುದಾದ ಅವಸ್ಥೆಯಲ್ಲಿ, **ಅಷಟ್ಕರ್ಣಮಾಗವೆಳಿಯಿಟ್ಟು**-ಆರು ಕಿವಿಗಳಿರಬಾರದ ಹಾಗೆ ಎಂದರೆ ಆಚಾರ್ಯ ಶಿಷ್ಯರು ಇಬ್ಬರು **ಹೊರತು**ಮೂರನೆಯವನಿಗೆ ತಿಳಿಯದ ಹಾಗೆ ಬಹಿರಂಗಪಡಿಸಿ ಎಂದರೆ ಉಪದೇಶಿಸಿ, **ಹಾಗೆ** ಮೂರನೆಯವನು ಕೇಳಕೂಡದೆಂದು ಹೇಳಿದುವರ ಅಭಿಪ್ರಾಯವೇನೆಂಬುದನ್ನು **ಮುಂದೆ** ಸ್ಪಷ್ಟಪಡಿಸುತ್ತಾರೆ. (೧೫) " **ದಂಭಃ**-ತಾನು ಧಾರ್ಮಿಕನೆಂದು ಇತರರು **ಹೊಗಳಬೇಕೆಂದು** ಧರ್ಮಾನುಷ್ಠಾನವನ್ನು ಮಾಡುವದು ; **ದರ್ಪಃ**-ಇದು ಮಾಡ **ಬಹುದು**, ಇದು ಮಾಡಬಾರದೆಂಬ ವಿವೇಕವಿಲ್ಲದೆ ವಿಷಯಾನುಭವದಿಂದಾಂಟಾದ **ಹರ್ಷವು** ; **ಅತಿಮಾನಶ್ಚ**-ತನಗಿರುವ ವಿದ್ಯೆ, ಆಭಿಜಾತ್ಯ ಮೊದಲಾದುವುಗಳಿಗೆ **ಅನುಗುಣವಲ್ಲದ** ಗರ್ವವು ; **ಕ್ರೋಧಃ**-ಪರರನ್ನು ಪೀಡಿಸಬೇಕೆಂಬ ಫಲಕ್ಕಾಗಿ **ಉಂಟಾದ** ಚಿತ್ತವಿಕಾರವು; **ಅಜ್ಞಾನಂ**-ಪಾರತತ್ವ ಜೀವತತ್ವಗಳ ವಿಷಯದಲ್ಲೂ **ಮತ್ತು** ಕೃತ್ಯಾಕೃತ್ಯ ವಿಷಯದಲ್ಲೂ ಜ್ಞಾನವಿಲ್ಲದಿರೋಣವು, ತತ್ವತ್ರಯಗಳ ಸ್ವರೂಪ **ಸ್ವಭಾವಗಳ** ಜ್ಞಾನವಿಲ್ಲದಿರೋಣವು. **ಹೇ ಪಾರ್ಥ**-ಓ ಅರ್ಜುನನೇ, **ಆಸುರೀ ಸಂಪದಂ**-ಆಸುರ ಸಂಪತ್ತನ್ನು ಕುರಿತು, **ಅಭಿಜಾತಸ್ಯ**-ಹುಟ್ಟಿದವನಿಗೆ, **ಭವನ್ತಿ**-**ಉಂಟಾಗುತ್ತವೆ**. ಎಂದರೆ ಭಗವದಾಜ್ಞೆಯನ್ನು ಅತಿಕ್ರಮಿಸಿ ನಡೆಯುವವರಿಗೆ ಈ **ಮೇಲೆ** ಹೇಳಿದ ಆರು ನಿಕೃಷ್ಟ ಗುಣಗಳು ಪ್ರಾಪ್ತವಾಗುತ್ತವೆ ಎಂಬುದು ಶ್ಲೋಕ **ತಾತ್ಪರ್ಯವು** " **ಎನ್ರುಮ್**-ಎಂಬುದಾಗಿಯೂ, ಮತ್ತು (೧೬) " **ವಿಪರೀತಸ್ತಥಾಸುರಃ**"-ಹಿಂದೆ ಉದಾಹರಿಸಿರುವ ವಿಷ್ಣುಧರ್ಮಶ್ಲೋಕದ ನಾಲ್ಕನೆಯ **ಪಾದವು**. " **ವಿಷ್ಣುಭಕ್ತಿಪರೋದೈವಃ ವಿಪರೀತಸ್ತಥಾಪರಃ**" ಎಂದು ಹೇಳ **ಲ್ಪಟ್ಟಿತು**. ದೈವೀಸ್ವಭಾವನು ವಿಷ್ಣುಭಕ್ತಿಪರನು ; **ವಿಪರೀತಃ**-ಹಾಗೆ **ವಿಷ್ಣುಭಕ್ತಿಯಿಲ್ಲದವನು**, **ಅಸುರಃ**-ಆಸುರಸ್ವಭಾವಯುಕ್ತನು ಎಂದು ಹೇಳಲ್ಪ

---

(೧೬) ವಿ. ಧ. ೧೧೯. ೨೪.

ಟ್ಟಿತು." **ಎನ್ರುವ್**-ಎಂಬುದಾಗಿಯೂ, **ಶೊಲ್ಲಪ್ಪಟ್ಟ**-ಹೇಳಲ್ಪಟ್ಟ, **ಆಸುರಪ್ರ ಕೃತಿಗಳಕ್ಕು**-ಆಸುರ ಸ್ವಭಾವವುಳ್ಳವರಿಗೆ, **ಮರೈತ್ತು**-ಮರಿಸಿ ಎಂದರೆ ಅಂತವರಿಗೆ ಉಪದೇಶಿಸದೆ, ಇದೇ **ಅಷ್ಟಕ್ಕರ್ಣಮಾಕವೆಳಿಯಿಟ್ಟು**-ಎಂಬುದರ ಮುಖ್ಯ ತಾತ್ಪ ರ್ಯವು; **ಶೀರಿಯಧನ ಮುಡೈಯಾರ್**-ಶ್ಲಾಘ್ಯವಾದ ಧನವನ್ನು ಹೊಂದಿರು ವವರು, **ಶೇಮಿತ್ತುವಾಳುವಾಪ್ಪೋಲೇ**-ಇತರರಿಗೆ ಕೊಡದೆ ಸಿಕ್ಷೇಪಿಸಿ ಎಂದರೆ ಭೂಮಿಯಲ್ಲಿ ಭದ್ರವಾಗಿ ಹೂತಿಟ್ಟು, ಕಳ್ಳಕಾಕರರು ಬಂದರೆ ಅವರಿಗೆ ಸಿಕ್ಕದ ಹಾಗೆ ನೆಲದಲ್ಲಿ ಗುಪ್ತವಾಗಿ ಹೂಳಿಟ್ಟು, ಹೀಗೆ ಆಚಾರ್ಯರಿಂದ ಬಂದ ಸಮುಪದೇಶವನ್ನು ಯಾರೂ ಸರಿಯಾಗಿ ಉಪದೇಶಕ್ಕೆ ಸಿಕ್ಕಲಿಲ್ಲವೆಂದು ಇಟ್ಟುಕೊಂಡುಬಿಟ್ಟರೆ, **ಅರಣ್ಯ ಚಂದ್ರಿಕೆ** ಎಂದರೆ ಯಾರೂ ಇಲ್ಲದಿರುವ ಅರಣ್ಯದಲ್ಲಿ ಬಿದ್ದ ದಿವ್ಯ ಚಂದ್ರಿಕೆಯಾಗಿ ನಿರರ್ಥಕವಾಗುವದಿಲ್ಲವೋ? ಎಂದರೆ ಸತ್ಪಾತ್ರನನ್ನು ಆರಿಸಿಕೊಂಡು ಹಿಡಿದು ಅಗತ್ಯ ವಾಗಿ ಉಪದೇಶಿಸತಕ್ಕದ್ದು. ಹಾಗೆ ಮಾಡುವ ಸದಾಚಾರ್ಯನು, "**ಪೊನ್ನುಲಕಾಳೀರೋ ಪುವನಮುಳಿದಾಳೀರೋ**" ಎಂಬಲ್ಲಿ ಶ್ರೀನಮ್ಮಾಳ್ವಾರು ಹೇಳಿರುವ ಹಾಗೆ ಎರಡು ವಿಭೂತಿಯನ್ನೂ ಆಳುವಂತಹ ಮಹತ್ಕಾರ್ಯವನ್ನು ಮಾಡುವಂತವನು. ಇಹದಲ್ಲೂ ತನ್ನ ಇತಕರ್ತ್ರವ್ಯತೆಯನ್ನು ನಡೆಸಿ ಶಿಷ್ಯರಿಗೆ ಉಪಕರಿಸಿ ಮಾಹಾತ್ಮ್ಯೆ ಯನ್ನು ಹೊಂದುವನು; ಪೊನ್ನುಲಕಲ್ಲೂ ಎಂದರೆ ದಿವ್ಯ ವೈಕುಂಠದಲ್ಲೂ ತಾನೂ ತನ್ನ ಶಿಷ್ಯರೂ ಸಹ ಪರಮಾನಂದ ಭಾಕ್ಕುಗಳಾಗುವರು. ಆದುದರಿಂದ ಆಚಾರ್ಯ ರುಗಳು "**ವಾಚಾಧರ್ಮಮವಾಪ್ನುಹಿ**" ಎಂಬ ಗುರುಸ್ಥಾನದ ಆಂಜನೇಯನನ್ನು ಕುರಿತ ಸೀತಾವಾಕ್ಯದ ಹಾಗೆ, ಶಿಷ್ಯನಿಗೆ ಉಪದೇಶಿಸಿ, ಆತನನ್ನು ಪರಿಗ್ರಹಿಸತಕ್ಕದ್ದು ಎಂದು ಶ್ರೀಯಃಪತಿಯನ್ನು ಶರಣಾಗತಿಯ ಮೂಲಕ ಪ್ರಾರ್ಥಿಸಿದ ವಾಕ್ಯಹಾಯವು ಪರಮ ಪ್ರೀಯಸ್ಕರವಾಗಿ ಉಭಯವಿಭೂತಿನಾಯಕರು ಆಚಾರ್ಯರು ಎಂಬುದರಲ್ಲಿ ಸಂದೇಹವಿಲ್ಲವೆಂದು ಮುಂದೆ ತಿಳಿಸುತ್ತಾರೆ; ಆದುದರಿಂದಲೇ **ಚರಿತಾರ್ಥರಾಯ್**-ಅನುಷ್ಠಿಸಲ್ಪಟ್ಟ ಪ್ರಯೋಜನವುಳ್ಳವರಾಗಿ ಎಂದರೆ ಉತ್ತಮರಾಗಿ ಸತ್ಪಾತ್ರರಾದ ಶಿಷ್ಯರಿಗೆ ಉಪದೇಶಿಸುವುದೇ ಸ್ವಯಂಪ್ರಯೋಜನವೆಂದು ಭಾವಿಸಿದವರಾಗಿ, **ಪ್ರಯೋಜನಮನುದ್ದಿಶ್ಯ ನಮಂದೋಪಿಪ್ರವರ್ತತೇ**-ಎಂದರೆ ಏನೊಂದೂ ಪ್ರಯೋ ಜನವಿಲ್ಲದೆ ಎಷ್ಟು ಮಂದಬುದ್ಧಿಯುಳ್ಳವನಾದರೂ ಪ್ರವರ್ತಿಸುವುದಿಲ್ಲವು, ಎಂಬ ನ್ಯಾಯವುಂಟು; ಈ ಆಚಾರ್ಯನಿಗೆ ಏನಾದರೂ ದ್ರವ್ಯ ಮೊದಲಾದ ಆಶೆ ಯುಂಟೋ ಎಂದರೆ ಅಂತಹ ಐಹಿಕ ಪ್ರಯೋಜನವನ್ನೇನೂ ಅಪೇಕ್ಷಿಸುವುದಿಲ್ಲವು; ಇವರಿಗೆ ಪ್ರಯೋಜನವು ಯಾವುದು? ಎಂದರೆ ಸತ್ಪಾತ್ರನಾದ ಶಿಷ್ಯನ ವಿಷಯದಲ್ಲಿ ವಿನಿಯೋಗಿಸೋಣವು; ಆದರೆ ಈ ರಹಸ್ಯಾರ್ಥವು, ತಮ್ಮ ಮಹಾ ಗುರುಗಳಿಂದ ಸಂಪಾದಿಸಿದುದು ಮಹತ್ತಾದ ಧನವು; ಆದುದರಿಂದ ಕಳ್ಳರ ಭಯವಿರುವ ಕಾಲದಲ್ಲಿ ವಿಶೇಷ ಧನವಂತನು ಹೇಗೆ ನೆಲದಲ್ಲಿ ಬಚ್ಚಿಟ್ಟು ಕಾಪಾಡುವನೋ ಹಾಗೆ ಆಸುರ ಸ್ವಭಾವವುಳ್ಳವರಿಂದ ರಕ್ಷಿಸಿ, ದೈವೀಸ್ವಭಾವದಲ್ಲಿ ವಿನಿಯೋಗಿಸುವುದೇ ಚರಿತಾರ್ಥ

## ಅಧಿಕಾರಿಭೇದೇನ ವಿಸ್ತರ ಸಙ್ಗ್ರಹರೂಪಾಚಾರೋಪದೇಶಕ್ರಮಃ

ವೆಂದು ಇಲ್ಲಿ ಹೇಳಲ್ಪಟ್ಟಿತು, ಹೀಗೆ ಸದ್ವಿನಿಯೋಗದಿಂದ ಧನ್ಯರಾಗಿ ಎಂಬ ಭಾವವು, **ಪೂರ್ವಾಚಾರ್ಯಗಳ್**-ಹಿಂದಿನ ಆಚಾರ್ಯರುಗಳು, **ವರ್ತಿಪ್ಪಾರ್ ಗಳ್**-ನಡೆಸುತ್ತಿದ್ದರು. ಆದುದರಿಂದ ಈಗಿನ ಆಚಾರ್ಯರುಗಳೂ ಉತ್ತರಕಾಲೀನ ಆಚಾರ್ಯರುಗಳೂ ಸಹಹಾಗೆಯೇ ನಡೆಯತಕ್ಕದ್ದು ವಿಧಾಯಕವೆಂದು ಹೇಳಿದರು. ಇದು ಶಾಸ್ತ್ರ ಬಲವಿರುವ ಸಂಪ್ರದಾಯವೆಂದು ಅನೇಕ ಪ್ರಮಾಣಗಳಿಂದ ಸಮರ್ಥಿಸಿ ಇದೀಗ ಆಚಾರ್ಯರುಗಳ ಮುಖ್ಯ ಕೃತ್ಯವೆಂದು ಒಂದು ಮಹಾವಾಕ್ಯದಿಂದ ಸ್ಥಾಪಿಸಿದರು. ಸತ್ಸಂಪ್ರದಾಯ ರೀತ್ಯಾ ಆಚಾರ್ಯನು ವರ್ತಿಸಬೇಕೆಂದೂ, ಆತನು ಸತ್ಪಾತ್ರನಾದ ಸಚ್ಛಿಷ್ಯನಲ್ಲಿ ಮೇಲೆ ಹೇಳಿದ ಮಹಾ ಗುಣಗಳುಳ್ಳ, ದೈವೀ ಸಂಪದ್ಯುಕ್ತನಾಗಿರುವವನಿಗೆ ಉಪದೇಶಿಸತಕ್ಕದ್ದೇ ವಿನಾ ಆಸುರ ಸ್ವಭಾವದವನಿಗೆ ಕೂಡದೆಂದು ತಿಳಿಸಿದರು. ಹೀಗೆ ಉಪದೇಶಿಸುವ ಸಂದರ್ಭದಲ್ಲಿ ಆಚಾರ್ಯನಿಗೆ ಖ್ಯಾತಿ ಲಾಭ ಪೂಜೆಗಳಲ್ಲಿ ಆಶೆ ಇರಕೂಡದು. ಹಾಗಾದರೆ ಉಪದೇಶಿಸುವದರಲ್ಲಿ ತನಗೆ ಪ್ರಯೋಜನವೇನು ? ಎಂದರೆ ಈ ಸತ್ಸಂಪ್ರದಾಯವು ವೃದ್ಧಿಯನ್ನು ಹೊಂದಲಿ ಎಂಬುದು. ಅದಕ್ಕಾಗಿ ಈ ಸಚ್ಛಿಷ್ಯನು ತಾನು ಈಗ ಹೊಂದಿದ ಸಮುಪದೇಶವನ್ನು ಮುಂದಕ್ಕೆ ಸತ್ಪಾತ್ರನಾದ ಸಚ್ಛಿಷ್ಯನಿಗೆ ಮಾಡಲಿ ಎಂಬುದೇ ಅವರ ಅಭಿಲಾಷೆಯು. ಇಷ್ಟು ಮಾತ್ರನೇ ಎಂದು ತಿಳಿಸಿದರು.

### ಆಚಾರ್ಯೋಪದೇಶಕ್ರಮವು ಅಧಿಕಾರಿ ಭೇದದಿಂದ ವಿಸ್ತರಸ್ಸಙ್ಗ್ರಹ ರೂಪವಾದುದು.

ಹೀಗಾದನಂತರ, ಕೆಲವರು ಅಲ್ಪಶ್ರುತರಾಗಿರುತ್ತಾರೆ; ಆದರೆ ಅವರುಗಳು ಆಸ್ತಿಕ್ಯ ಬುದ್ಧಿಯುಕ್ತರಾಗಿ ಭಕ್ತಿಯುತ ಸಚ್ಛಿಷ್ಯರಾಗಿರುತ್ತಾರೆ. ಆದರೆ ಮೇಲೆ ಹೇಳಿದ ಎಲ್ಲಾ ವಿಧವಾದ ಪ್ರಾಜ್ಞತೆ ಇರುವುದಿಲ್ಲವು. ಅಂಥಾವರಿಗೆ ಆಚಾರ್ಯನು ಉಪದೇಶಿಸಕೂಡದೇ ? ಹಾಗೆ ಕೂಡದೆಂದರೆ ಶಾಸ್ತ್ರವಿನಿಯೋಗಕ್ಕೆ ಅತ್ಯಲ್ಪ ಜನ ಒದಗಿ ರಹಸ್ಯ ಜ್ಞಾನ ಪ್ರಚಾರಕ್ಕೆ ಕುಂದಕವಾಗುವುದಿಲ್ಲವೇ ? ಎಂದರೆ, ಅದಕ್ಕೆ ಮುಂದೆ ಸಮಾಧಾನ ಹೇಳುವವರಾಗಿ ಹೆಚ್ಚು ಪ್ರಜ್ಞಾವಂತನಿಗೆ ರಹಸ್ಯಾರ್ಥಗಳನ್ನು ವಿಸ್ತರವಾಗಿಯೂ, ಮಿತಪ್ರಜ್ಞನಿಗೆ ಸಂಗ್ರಹವಾಗಿಯೂ, ಉಪದೇಶಿಸಬಹುದೆಂದು ಅನುಮತಿಯನ್ನು ದಯಪಾಲಿಸುತ್ತಾರೆ. ಸಂಗ್ರಹವಾದ ಶಾಸ್ತ್ರ ರುಚಿಯುಳ್ಳವರಿಗೆ ಸಙ್ಗ್ರಹೇಣ ಹೇಳಬಹುದೆಂದೂ, ಅದು ಎಷ್ಟರ ಮಟ್ಟಿಗೆ ಉಪದೇಶಿಸಬಹುದೆಂದೂ, ತಿಳಿಸುತ್ತಾರೆ. ಹೀಗೆ ಆಚಾರ್ಯಕೃತ್ಯಾಧಿಕಾರದಲ್ಲಿ ಎರಡೇ ವಾಕ್ಯಗಳಿರುತ್ತವೆ. ಒಂದು ಮಹಾವಾಕ್ಯವು ಸತ್ಪಾತ್ರನಿಗೆ ವಿಸ್ತರವಾದ ಉಪದೇಶವು. ಮುಂದೆ ಲಘುಪ್ರಜ್ಞನಿಗೆ ಸಂಗ್ರಹೋಪದೇಶವು ; ಅದು ಯಾವುದೆಂದರೆ :-- **ಇವರ್ ಗಳ್**-- ಈ ಆಚಾರ್ಯರುಗಳು, **ಇದೇ ಈ ವಾಕ್ಯಕ್ಕೆ** ಕರ್ತೃಪದವು, ಕ್ರಿಯಾಪದವು **ವಾಕ್ಯಾಂತ್ಯದಲ್ಲಿ "ಅರುಳಿ**

ಇವರ್‌ಗಳ್, ದೇಹೇಂದ್ರಿಯಾದಿ ವ್ಯತಿರಿಕ್ತನಾಯ್, ನಿತ್ಯನಾಯ್ ಇರುಪ್ಪಾನೊರು ಆತ್ಮಾವುಂಡು; ಇಚ್ಚೇತನಾಚೇತನಙ್ಗಳಿರಣ್ಡುಮೊಳಿಯ ಇವತ್ತುಕ್ಕು ಅನ್ತರ್ಯಾಮಿಯಾಯ್ ಶೇಷಿಯಾಯ್ ಇರುಪ್ಪಾನೊರು ಪರಮಾತ್ಮಾ ಉಂಡು; ಇಪ್ಪರಮಾತ್ಮಾವೈಯೊಳ್ಳಿಯ ಇವ್ವಾತ್ಮಾವುಕ್ಕು ತಾನುಮ್ ಪಿರರುಮ್ ರಕ್ಷಕನಮಾಟ್ಟಾರೆನು ತತ್ವತ್ತ್ರೈಯುಮ್, ಅನಾದಿಕಾಲಮುನ್ನಾದಿಯಾಗ ಸಂಸರಿತ್ತು ಪೋನ್ದವಡಿಯೇನುಕ್ಕು ಇನಿಯೊರು ಗರ್ಭವಾಸಾದಿ ಕ್ಲೇಶಮ್

---

ಚ್ಚೈಯ್‌ವರ್‌ಗಳ್" ಎಂದು ಇರುತ್ತದೆ. ಇವರುಗಳು ಕೃಪಯಾ ಉಪದೇಶಿಸುವರೆಂದು ಹೇಳುತ್ತಾರೆ. ಎಷ್ಟುಮಟ್ಟಿಗೆ ಉಪದೇಶಿಸತಕ್ಕದ್ದೆಂದರೆ ಪ್ರಥಮತಃ ಸೂಕ್ಷ್ಮವಾಗಿ ಅವರಿಗೆ ತತ್ವತ್ರಯಗಳ ವೈಲಕ್ಷಣ್ಯವನ್ನು ತಿಳಿಸತಕ್ಕದ್ದು, ಹೇಗೆಂದರೆ (೧) **ದೇಹೇನ್ದ್ರಿಯಾದಿ ವ್ಯತಿರಿಕ್ತನಾಯ್**–ದೇಹ, ಹನ್ನೊಂದು ಇಂದ್ರಿಯಗಳು, ಆದಿಶಬ್ದದಿಂದ, ಪ್ರಾಣ, ಬುದ್ಧಿ ಇವುಗಳಿಗಿಂತ ಬೇರೆಯಾಗಿ, **ನಿತ್ಯನಾಯ್**–ನಿತ್ಯನಾಗಿ, **ಇರುಪ್ಪಾನೊರು ಆತ್ಮಾವುಂಡು**–ಇರುವ ಒಬ್ಬ ಆತ್ಮನೆಂಬುವನು ನಮ್ಮ ಹೃದಯದಲ್ಲಿರುವನು, (೨) **ಇಚ್ಚೇತನಾಚೇತನಙ್ಗಳಿರಣ್ಡುಮೊಳಿಯ**- ಈ ಚೇತನನಾದ ಆತ್ಮಾ, ದೇಹಾದಿಗಳಾದ ಅಚೇತನ ಇವೆರಡು ಮಾತ್ರವೇ ಅಲ್ಲದೆ, **ಇವತ್ತುಕ್ಕುಂ**-ಇವುಗಳಿಗೆ, **ಅನ್ತರ್ಯಾಮಿಯಾಯ್**-ವ್ಯಾಪಿಸಿ ಒಳಗಿರುವವನಾಗಿ, **ಶೇಷಿಯಾಯ್**-ಇವೆರಡರಿಂದ ಸರ್ವಜಗತ್ತಿಗೂ ಶೇಷಿಯಾಗಿ, **ಇರುಪ್ಪಾನೊರು ಪರಮಾತ್ಮಾ ಉಂಡು**-ಇರುವ ಒಬ್ಬ ಪರಮಾತ್ಮನುಂಟು, ಹೀಗೆ ಇವೆರಡೂ ಶರೀರವಾಗಿಯೂ ಅವುಗಳಿಗೆ ಆತ್ಮನಾಗಿಯೂ ಇರುವ ಪರಮಾತ್ಮಾ ಉಂಟು ; ಇವೆರಡು ಅಪೃಕ್ಸಿಸಿದ್ಧ ವಿಶೇಷಣವಾಗಿ ಹೊಂದಿರುವ ಪರಮಾತ್ಮ ಒಬ್ಬನು ಹೃದಯ ಗುಹೆಯಲ್ಲೇ ಇದ್ದಾನೆ; ಆದುದರಿಂದ ತತ್ವತ್ರಯಗಳುಂಟು ಎಂದೂ, (೩) **ಇಪ್ಪರಮಾತ್ಮಾವೈ ಒಳಿಯ**–ಈ ಪರಮಾತ್ಮನನ್ನು ಬಿಟ್ಟರೆ, **ಇವ್ವಾತ್ಮಾವುಕ್ಕು**–ಜೀವಾತ್ಮನಾದ ತನಗೆ, **ತಾನುಂ ಪಿರರುಂ ರಕ್ಷಕನಮಾಟ್ಟಾರ್**-ತಾನೂ ಇತರರೂ ಚತುರ್ಮುಖ ಬ್ರಹ್ಮರುದ್ರೇಂದ್ರಾದಿ ದೇವತೆಗಳೂ ರಕ್ಷಕರಾಗಲಾರರು; **ಎನ್ನುತತ್ವತ್ತ್ರೈಯುಂ**-ಎಂಬ ಯಥಾರ್ಥವಾದ ಸಿದ್ಧಾನ್ತವನ್ನೂ, (೪) **ಅನಾದಿಕಾಲದಿಂದಲೂ, ಅನ್ನಾದಿಯಾಗ**–ಬಿಟ್ಟದ್ದೇ ಪುನಃ ಬಂದೊದಗುವದಾಗಿ ಎಂದರೆ " **ಪುನರಪಿ ಮರಣಂ ಪುನರಪಿ ಜನನಂ** " ಹೀಗೆ ಪುನರಾವೃತ್ತಿಯುಳ್ಳ, ಆದುದರಿಂದ ಒಂದು ಪಾಶುರಾಂತ್ಯದಲ್ಲಿರುವ ಪದದಿಂದ ಆರಂಭಿಸಿ ಮುಂದಿನ ಪಾಶುರವು ಹೇಳಲ್ಪಟ್ಟ ಗ್ರಂಥವು **ಅಂದಾದಿ** ಎಂದು ಹೇಳಿಸಿಕೊಳ್ಳುತ್ತದೆ. ತಿರುವಾಯ್‌ಮೊಳಿ, ಪಿಳ್ಳೈಯಂದಾದಿ, ರಾಮಾನುಜನೂತ್ತಂತಾದಿ ಇವುಗಳೆಲ್ಲಾ ಹಾಗೆಯೇ ಇರುತ್ತವೆ.

**ವಾರಾದಪಡಿ ತಿರುವಡ್ಯೆಗಳ್ಯೆತಂದು ರಕ್ಷಿತ್ತರುಳವೇಣುವೆನ್ರು ಆಚಾರ್ಯನ್ ಪ್ರಸಾದಿತ್ತ ಗುರುಪರಂಪರಾಪೂರ್ವಕ ದ್ವಯತ್ತಾಲೇ ಶ್ರೀಮ (ಶ್ರೀಮಾನನ) ನ್ನಾರಾಯಣ್ ತಿರುವಡಿಗಳ್ಯೆ ಶರಣಮಾಗಪ್ಪತ್ತಿ, ಆತ್ಮಾತ್ಮೀಯಙ್ಗಳುಮ್ ಅವತ್ತ್ಯೆಪತ್ತವರುಮ್ ಶುಮ್ಯೆಗಳ್ಯೆಯೇಮ್, ಅಙ್ಗೇ ಸಮರ್ಪಿಪ್ಪದೆನ್ರು ಹಿತತ್ತ್ಯೆಯುಮ್, ಸದಾಚಾರ್ಯ್ ಕಾಟ್ಟಿಕ್ಕೊಡುತ್ತೆ ಕೈಕೊಂಡ ಎಂಬೆರುಮಾರ್ ಇನಿ ನಮ್ಮ್ಯೆ ಒರುಪಡಿಕ್ಕುಮ್ ಕೈವಿಡಾನೆನ್ಗಿರತೇತ್ತತ್ತೋಡೆ, ಇಙ್ಗಿರುನ್ದ**

---

**ಸಂಸರತ್ತುಪ್ಪೋನ್ತ**–ಸಂಸಾರ ಬಂಧುವನ್ನು ಅನುಭವಿಸುತ್ತಿರುವ, **ಅಡಿಯೇನಕ್ಕ**-ಪಾದಸೇವಕನಿಗೆ, **ಇನಿಯಾರು ಗರ್ಭವಾಸಾದಿ ಕ್ಲೇಶಂ ವಾರಾದಪಡಿ**-ಇನ್ನೊಂದು ಯಾವ ತಾಯಿಯ ಗರ್ಭವನ್ನು ಹೊಂದಿ ಕ್ಲೇಶಗಳು ಬಾರದ ಹಾಗೆ, **ತಿರುವಡಿಗಳ್ಯೆ ತಂದು**–ಸ್ವಾಮಿಯ ಪಾದ ಕಮಲಗಳೇ ನನಗೆ ಉತ್ತಾರಕವಾಗಿ ದಯಗಾಲಿಸಿ, **ರಕ್ಷಿತ್ತರುಳವೇಣುಂ**-ರಕ್ಷಿಸಿ ಕೃಪೆ ಮಾಡಬೇಕು, **ಎನ್ರು**-ಎಂಬುದಾಗಿ, **ಆಚಾರ್ಯ್ ಪ್ರಸಾದಿತ್ತ**-ಆಚಾರ್ಯನು ಅನುಗ್ರಹಿಸಿ ಉಪದೇಶಿಸಿದ, ಆಶ್ರಯಿಸಿದ ತನಗೆ ಆಚಾರ್ಯರ ಪ್ರಾಚಾರ್ಯಾದಿ ಪರಂಪರೆಗಳನ್ನು ಆಚಾರ್ಯರೇ ತಿಳಿಸಬೇಕಾಗಿರುವುದರಿಂದ ಆಚಾರ್ಯರು ಕೃಪೆಯಿಟ್ಟು ಉಪದೇಶಿಸಿದ, **ಗುರುಪರಂಪರಾಪೂರ್ವಕ**ವೆಂದರೆ ಗುರುಪರಂಪರೆಯನ್ನು ಅನುಸಂಧಾನ ಮಾಡಿ, ಅವರ ತನಯಗಳನ್ನು ಹೇಳಿ, **ದ್ವಯತ್ತಾಲೆ**-ಆಚಾರ್ಯರು ಉಪದೇಶಿಸಿದ ದ್ವಯ ಮಂತ್ರದ ಮೂಲಕವಾಗಿ, **ಶ್ರೀಮನ್ನಾರಾಯಣ್ ತಿರುವಡಿಗಳ್ಯೆ**-ಲಕ್ಷ್ಮೀಯುಕ್ತನಾಗಿಯೇ ಇರುವ ನಾರಾಯಣನ ಪಾದಕಮಲಗಳನ್ನು **ಶರಣಮಾಗ**-ಉಪಾಯವಾಗಿ, **ಪತ್ತಿ**-ಆಶ್ರಯಿಸಿ, **ಆತ್ಮಾತ್ಮೀಯಙ್ಗಳುಮ್**-ತನ್ನ ಆತ್ಮಸ್ವರೂಪ ಮತ್ತು **ಆತ್ಮೀಯಗಳು** ಎಂದರೆ ಉಪಾಯ ಫಲಗಳು, ಇವುಗಳನ್ನೂ **ಅವತ್ತ್ಯೆಪತ್ತ**-ಆ ಸ್ವರೂಪ, ಉಪಾಯ, ಫಲಗಳಿಗೆ ಸಂಬಂಧಿಸಿದ, **ಶುಮ್ಯೆಗಳ್ಯೆಯುಮ್**–ಸರ್ವಭರವನ್ನೂ, **ಅಙ್ಗೇ**–ಸರ್ವೇಶ್ವರನ ಪಾದ ಕಮಲಗಳಲ್ಲೇ, **ಸಮರ್ಪಿಪ್ಪದು**-ಸಮರ್ಪಿಸತಕ್ಕದ್ದೆಂದು, ಇದೇ ಭರನ್ಯಾದ ಶಬ್ದಾರ್ಥವೆಂಬ ಉಪದೇಶರೂಪವಾದ, **ಹಿತತ್ತ್ಯೆಯುಮ್**-ಉಪಯಾನುಷ್ಠಾನವನ್ನು ಮಾಡಬೇಕೆಂಬ ಹಿತವನ್ನೂ, **ಸದಾಚಾರ್ಯ್**–ಸತ್ಸಂಪ್ರದಾಯನಿಷ್ಠನಾಗಿ ಮಹಾ ಪ್ರಾಜ್ಞನಾಗಿ, **ಆಚರತೀತಿ ಆಚಾರ್ಯಃ** ಎಂಬುದಕ್ಕನುಗುಣವಾಗಿ ತಾನು ಅನುಷ್ಠಿಸಿದುದನ್ನೇ ಉಪದೇಶಿಸುವ ಆಚಾರ್ಯನು, **ಕಾಟ್ಟಿಕೊಡುತ್ತ್ಯೆ**-ತನ್ನ ಆಚಾರದಿಂದ ತೋರಿಸಿ ಕೊಟ್ಟುದನ್ನು, **ಕೈಕೊಂಡು**-ಅಂಗೀಕರಿಸಿ, ಅವಲಂಬಿಸಿದ **ನಮ್ಮ್ಯೆ**–ನಮ್ಮನ್ನು, **ಇನಿ**–ಇನ್ನು ಮೇಲೆ ಎಂದರೆ ಹೀಗೆ ಉಪಾಯಾನುಷ್ಠಾನವನ್ನು ಮಾಡಿ ಕೃತಕೃತ್ಯರಾದ ನಮ್ಮನ್ನು, **ಎಂಬೆರುಮಾರ್**–ನಮ್ಮ ಸ್ವಾಮಿಯಾದ ಭಗವಂತನು, ಒರುಪಡಿಕ್ಕುಂ-ಒಂದು ವಿಧದಲ್ಲೂ, **ಕೈವಿಡಾರ್**-ಕೈ ಬಿಡುವುದಿಲ್ಲ,

**ಕಾಲಮ್ ಅಪವರ್ಗಪೂರ್ವರಂಗಮಾನ ನಿರಪರಾಧಾನುಕೂಲವೃತ್ತಿಯೋಡೆ ನಡಪ್ಪದೆನ್ರು ಉತ್ತರಕೃತ್ಯತ್ತೈಯುಮ್ ಸಙ್ಗ್ರಹರುಚಿಗಳುಕ್ಕುಚ್ಚುರಂಗವರುಳಿಚ್ಚೈವರ್‌ಗಳ್.**

---

ರಕ್ಷಿಸಿಯೇ ರಕ್ಷಿಸುಪನು, **ಎಙ್ಗ್ರತೇತ್ತುತೋಡ್**-ಎಂಬುವ ಮಹಾವಿಶ್ವಾಸಪೂರ್ವಕವಾಗಿ, (೬) **ಇಙ್ಗ್ರುದ್ದ ಕಾಲಂ**-ಉಪಾಯಾನುಷ್ಠಾನಾ ನಂತರ ಇಲ್ಲಿರುವ ಕಾಲವೂ, **ಅಪವರ್ಗಪೂರ್ವರಂಗಮಾನ**-ನಾಟಕಕ್ಕೆ ಪೂರ್ವರಂಗವಾಗಿ ಉಪೋದ್ಘಾತವು, ನಟಿಯು ನಾಟಕವಾಡುವುದಕ್ಕೆ ಪ್ರಕರಣ ಸಂಗತಿಗಳನ್ನು ಸೂಚಿಸೋಣವು; ಅದರ ಹಾಗೆ ಮೋಕ್ಷ ಪ್ರಾಪ್ತಿಗೆ ಪೂರ್ವಭಾವಿಯಾಗಿರುವ ಪ್ರಕರಣವಾದ, **ನಿರಪರಾಧಾನುಕೂಲ ವೃತ್ತಿಯೋಡೆ ನಡಪ್ಪದು**–ಏನೊಂದೂ ಅಪರಾಧವನ್ನೂ ಉತ್ತರ ಕಾಲದಲ್ಲಿ ನಡೆಸದೇ ಅನುಕೂಲವಾಗಿ ಶಾಸ್ತ್ರಸಮ್ಮತವಾದ ಮಾರ್ಗದಲ್ಲಿ ನಡೆಸತಕ್ಕದ್ದು; ಹೇಗೆಂದರೆ ಶಾಸ್ತ್ರಸಮ್ಮತವಾಗಿ ಭಗವದ್ಭಾಗವತಕೈಂಕರ್ಯವಾಗಿ ನಡೆಸಿ ಎಂಬರ್ಥವು; **ಎನ್ರು**-ಎಂಬುದಾಗಿ, **ಉತ್ತರ ಕೃತ್ಯತ್ತೈಯುಮ್**–ಪ್ರಪತ್ತ್ಯುತ್ತರ ಕಾಲದಲ್ಲಿ ಶಿಷ್ಯನು ಮಾಡಬೇಕಾದ ಆಜ್ಞಾನುಜ್ಞಾಕೈಂಕರ್ಯಗಳಾದ, ನಿತ್ಯ ನೈಮಿತ್ತಿಕಾನುಷ್ಠಾನ ಭಗವದ್ಭಾಗವತಕೈಂಕ್ಯರ ರೂಪ ಉತ್ತರ ಕೃತ್ಯಗಳನ್ನೂ (ಇವೆಲ್ಲಾ ೧೨ ವಿಧವಾದುವೆಂದು ಉತ್ತರಕೃತ್ಯಾಧಿಕಾರದಲ್ಲಿ ಹೇಳಲ್ಪಟ್ಟಿವೆ) ಹೀಗೆ ಆರು ವಿಧ ಉಪದೇಶಗಳನ್ನೂ **ಸಙ್ಗ್ರಹರುಚಿಗಳುಕ್ಕು**-ವಿಸ್ತಾರವಾಗಿ ತಿಳಿಯಲು ಕಾಲ ದೇಶಾವಸ್ಥಾ ಪ್ರಕ್ರಿಯೆಗಳಿಂದ ತಿಳಿಯಲು ಸಾಧ್ಯವಿಲ್ಲದೆ ಸಙ್ಗ್ರಹವಾಗಿ ತಿಳಿಯಬೇಕೆಂಬ ಆಶೆಯುಳ್ಳವರಿಗೆ, **ಶುರುಙ್ಗ**-ಸೂಕ್ಷ್ಮವಾಗಿ, **ಅರುಳಿಚ್ಚೈವರ್‌ಗಳ್**-ಕೃಪೆ ಮಾಡಿ ಉಪದೇಶಿಸುವರು; ಇದಕ್ಕೆ ಕರ್ತೃಪದವು ವಾಕ್ಯಾದಿಯಲ್ಲಿ **ಇವರ್‌ಗಳ್** ಎಂದಿರುತ್ತದೆ. ಇವರು ಯಾರೆಂದರೆ ಹಿಂದಿನ ವಾಕ್ಯದ ಕೊನೆಯಲ್ಲಿ **ಪೂರ್ವಾಚಾರ್ಯಗಳ್**-ಹಿಂದಿನ ಸಂತ್ಸಂಪ್ರದಾಯನಿಷ್ಠರಾದ ಆಚಾರ್ಯರುಗಳು ಎಂದಿರುತ್ತದೆ. ಹೀಗೆ ಆಚಾರ್ಯಕೃತ್ಯವನ್ನು ಒಂದು ಮಹಾ ವಾಕ್ಯದಿಂದ ಚೆನ್ನಾಗಿ ವಿಮರ್ಶಿಸಿ ತಿಳಿಯಬೇಕೆಂಬ ಕುತೂಹಲವುಳ್ಳವರಿಗೆ ವಿಸ್ತಾರವಾಗಿ ಉಪದೇಶಿಸಿದ ಪ್ರಕ್ರಿಯೆಯನ್ನೂ, ಹಾಗಲ್ಲದೆ ಸಙ್ಗ್ರಹವಾಗಿ ತಿಳಿಯಬೇಕೆಂಬುವರಿಗೆ ಸೂಕ್ಷ್ಮವಾಗಿ ಏನೇನನ್ನು ಮುಖ್ಯವಾಗಿ ಹಿಂದಿನ ಆಚಾರ್ಯರುಗಳು ತಿಳಿಸುತ್ತಿದ್ದರೆಂಬುದನ್ನು ಇನ್ನೊಂದು ವಾಕ್ಯದಿಂದಲೂ ತಿಳಿಸಿರುತ್ತಾರೆ. ಇದನ್ನನುಸರಿಸಿಯೇ, ಶ್ರೀನಿಗಮಾಸ್ತದೇಶಿಕರವರು ವಿಸ್ತಾರವಾಗಿ ತಿಳಿಯಬೇಕೆಂಬ ಅಪೇಕ್ಷೆಯುಳ್ಳವರಿಗೆ ಈ ರಹಸ್ಯತ್ರಯ ಸಾರವೆಂಬ ಅಮೋಘ ಗ್ರಂಥವನ್ನು ಪರಮಕೃಪಯಾ ಎಲ್ಲರೂ ತಿಳಿದು ಕೃತಾರ್ಥರಾಗಲೆಂದು ಆಗಿನವರಿಗೆ ಸುಲಭವಾದ ತಮಿಳ್ ಭಾಷೆಯಲ್ಲೇ ಬರೆದರು. ಅವರ ಮಕ್ಕಳಾದ ಮಹಾನುಭಾವರಾದ “ **ಶ್ರೀಮದ್ವರದನಾಥೇನ ವೇದಾಂತಚಾರ್ಯಸೂನುನಾ। ರಹಸ್ಯತ್ರಯಸಾರಾರ್ಥ ಸಙ್ಗ್ರಹೋಯಂ ಪ್ರಕಾಶ್ಯತೇ** ” ಎಂಬಲ್ಲಿ ಹೇಳಿ

**ಏವಮೇವ ಮಮ ಇಚಾರ್ಯಾಃ ಉಪದಿದಿಶುರಿತ್ಯಾಹ**

**ಪ್ರತ್ಯೇಯಸ್ತು (ಪ್ರತ್ಯಗ್ವಸ್ತು) ವಿಲಕ್ಷಣಾಃ ಪ್ರಕೃತಿತ ಸ್ವಾತ್ಮಾ ಪತಿ ಸ್ತತ್ಪರಃ। ಸ್ವಸ್ಮಿನ್ನಾತ್ಮ ಭರಾರ್ಪಣಂ ಹಿತತಮಂ ತಚ್ಛೇಷವೃತ್ತಿಃ ಫಲಮ್**

---

ರುವ ಹಾಗೆ ಸಂಸ್ಕೃತದಲ್ಲಿ ಸಂಗ್ರಹವಾಗಿ ಬರೆದಿರುತ್ತಾರೆ. ಇದಕ್ಕೂ ಲೋಕ ಸಙ್ಗ್ರಹಾರ್ಥವಾಗಿ ದಾಸನು ಕನ್ನಡಕ್ಕೆ ಪರಿವರ್ತನೆಯನ್ನು ಮಾಡಿರುತ್ತೇನೆ. ಆದರೆ ಸ್ತ್ರೀ ಶೂದ್ರಾದಿಗಳಿಗೂ ಈ ಸಙ್ಗ್ರಹ ತಾತ್ಪರ್ಯವೇ ಸಾಕು. ಸ್ವಾಮಿ ಶ್ರೀ ದೇಶಿಕವರ್ಯರು ಮೇಲಿನ ವಾಕ್ಯದಲ್ಲಿ ಹೇಳಿದ ಐದು ವಿಷಯಗಳೇ ಸಾಕಾಗಿವೆ. ಆಗಿನ ಕಾಲದಲ್ಲಿ ತಮಿಳು ಸಂಸ್ಕೃತಗಳ ಪ್ರಾಚುರ್ಯವಿದ್ದುದರಿಂದ ಹೀಗೆ ಗ್ರಂಥ ಗಳು ಬರೆಯಲ್ಪಟ್ಟವು. ಈಗ ಇವೆರಡು ಭಾಷೆಗಳ ಜ್ಞಾನವೂ ಇಲ್ಲದ ಸ್ಥಿತಿಯು ಒದಗಿರುವುದರಿಂದ ಪರಿವರ್ತನೆಯು ಅತ್ಯಾವಶ್ಯಕವು. ಆದುದರಿಂದಲೇ ದಾಸನು ಈ ವಿಸ್ತಾರವಾದ ಗ್ರಂಥದ ಪರಿವರ್ತನೆಯಲ್ಲಿ ಉದ್ಯುಕ್ತನಾದೆನು. ಕುರುಣಾಮಹೋ ದದಿಯಾದ ಶ್ರೀನಿವಾಸನು ದಾಸನನ್ನು ಸಙ್ಕಲ್ಪಿಸುವ ಹಾಗೆ ಪ್ರೇರಿಸಿ, ತಾನೇ ಪ್ರೇರಕನಾಗಿ ನಿಂತು ನಾಂಗವಾಗಿ ಬರೆಸಿ ಕೊಟ್ಟಿರುವುದರಿಂದ ಸ್ವಯಂಪ್ರಜ್ಞಾಶಾಲಿ ಗಳಲ್ಲದ ಮಹನೀಯರುಗಳು ಉಪಾದೇಯವೆಂದು ಭಾವಿಸಬೇಕೆಂಬ ಪ್ರಾರ್ಥನೆಯು..

ಈ ಆಚಾರ್ಯಕೃತ್ಯವನ್ನು ಸಙ್ಗ್ರಹವಾಗಿ "ನ್ಯಾಸವಿಂಶತಿ"ಯಲ್ಲಿ ಸ್ವಾಮಿ ಯವರೇ ಅನುಗ್ರಹಿಸಿ, ಅದಕ್ಕೆ ವ್ಯಾಖ್ಯಾನವನ್ನು ಬರೆದಿರುತ್ತಾರೆ. ಪರಾಂಬರಿಸ ಬಹುದು.

ಮುಖ್ಯವಾಗಿ ಆಚಾರ್ಯರು ತಮ್ಮ ಶಿಷ್ಯನನ್ನು ಪರೀಕ್ಷಿಸಿ ಆತನಿಗೆ ತತ್ವಹಿತ ಪುರುಷಾರ್ಥವನ್ನು ವಿಸ್ತಾರವಾಗಿಯಾಗಲಿ ಸಙ್ಗ್ರಹವಾಗಿಯಾಗಲೀ ಉಪದೇಶಿಸಿ, ಆತನು ಭರನ್ಯಾಸವನ್ನು ಅನುಷ್ಠಿಸುವ ಹಾಗೆ ಮಾಡಿಸಿ, ಆತನು ಪ್ರಪತ್ತ್ಯುತ್ತರ ಕಾಲ ಕಾಲದಲ್ಲಿ ಹೇಗಿರಬೇಕೆಂದು ತಿಳಿಸತಕ್ಕದ್ದೆಂದು ಇಲ್ಲಿ ಹೇಳಲ್ಪಟ್ಟಿತು.

ಹೀಗೆಯೇ ತಮ್ಮ **ಆಚಾರ್ಯರೂ ತತ್ವಹಿತಪುರುಷಾರ್ಥ**ಗಳನ್ನು ತಮಗೆ ಉಪದೇಶಿಸಿದರೆಂದು ತಿಳಿಸುತ್ತಾರೆ.

ತಮ್ಮ ಆಚಾರ್ಯರೂ ಕೂಡ ಹೀಗೆಯೇ ತಮಗೆ ತತ್ವಹಿತ ಪುರುಷಾರ್ಥಗಳನ್ನು ಉಪದೇಶಿಸಿ ತಮ್ಮನ್ನು ಕೃತಾರ್ಥನನ್ನಾಗಿ ಮಾಡಿದರೆಂದು ಕೃತಜ್ಞತಾಪೂರ್ವಕವಾಗಿ ಹೇಳುವ ಸಂದರ್ಭದಲ್ಲಿ ಈ ಆಚಾರ್ಯಕೃತ್ಯಕ್ಕೆ ಮುಖ್ಯ ನಿದರ್ಶನವನ್ನು ತಮ್ಮ ಆಚಾ ರ್ಯರಲ್ಲೇ ಕಂಡಿರುವುದಾಗಿ ತಿಳಿಸುತ್ತಾರೆ. (೧) **ಪ್ರತ್ಯೇಯಸ್ತು**-ತಿಳಿಯತಕ್ಕವನಾದ **ಚೇತನನಾದರೋ, ಅಥವಾ ಪ್ರತ್ಯಗ್ವಸ್ತು**-ತನ್ನನ್ನು ತಾನೇ ತಿಳಿಯುವ ಶಕ್ತಿಯುಳ್ಳ ಜೀವಾತ್ಮನು, **ಪ್ರಕೃತಿತಃ**-ತನ್ನ ದೇಹವಾದ ಜಡವಸ್ತುವಾದ **ಪ್ರಕೃತಿ**ಗಿಂತ,

**ಇತ್ಥಂ ತತ್ತ್ವಹಿತಪುಮರ್ಥ ಇತಿ ನಸ್ತ್ರೇಧಾ ವಿಭಕ್ತಂಧನಮ್। ದಾಯತ್ವೇನ ದಯಾಧನಾಸ್ಸ್ವಯಮದುರ್ದತ್ತಾತ್ಮನಾಂ ದೇಶಿಕಾಃ ||೧೭||**

---

**ವಿಲಕ್ಷಣಃ**-ವಿಲಕ್ಷಣನು; ಇದರಿಂದ ದೇಹಾತ್ಮ ಭ್ರಮ ನಿವಾರಣೆಯೂ ಹೇಳಲ್ಪಟ್ಟಿತು ; ಹೇಗೆ ವಿಲಕ್ಷಣನೆಂಬುದು ಹಿಂದೆಯೇ ತತ್ತ್ವತ್ರಯಾಧಿಕಾರದಲ್ಲಿ ಉಪಪಾದಿತವು; ಪ್ರತ್ಯಕ್ತ್ವ, ಕರ್ತೃತ್ವ, ಭೋಕ್ತೃತ್ವಗಳಿಂದ ವಿಲಕ್ಷಣನು. ದೇಹವು ಜಡವು, ಆತ್ಮಾಜ್ಞಾನಸ್ವರೂಪನು, ಜ್ಞಾನಗುಣಕನು ಹೀಗೆ ವಿಲಕ್ಷಣನು. ದೇಹವು ತನಗೆ ತಾನೇ ತಿಳಿಯುವ ಶಕ್ತಿಯನ್ನು ಹೊಂದಿಲ್ಲವು. ಇತರರಿಗೆ ಮಾತ್ರವೇ ತಿಳಿಯುವಂಥಾದ್ದು, ಆದುದರಿಂದ ಪರಾಕ್ತ್ವವುಂಟು. ಆತ್ಮಾ ತನಗೆ ತಾನೇ ತಿಳಿಯುತ್ತದೆ. ಇದಕ್ಕೆ ಪ್ರತ್ಯಕ್ತ್ವವೆಂದು ಹೆಸರು. ಹೀಗೆ ವಿಲಕ್ಷಣವು. **ತ್ರಾತಾ**–ಈ ಜೀವಾತ್ಮನಿಗೆ ರಕ್ಷಕನಾಗಿಯೂ. **ಪತಿಃ**- " ಪತಿಂ ವಿಶ್ವಸ್ಯ" ಎಂಬಲ್ಲಿ ಹೇಳಿರುವ ಹಾಗೆ ಸರ್ವಶೇಷಿಯಾಗಿ ಸ್ವಾಮಿಯಾಗಿಯೂ ಇರುವವನು, **ತತ್ಪರಃ**-ಮೇಲೆ ಹೇಳಿರುವ ಜೀವಾತ್ಮನಿಗಿಂತ ಉತ್ಕೃಷ್ಟನು, ಹೇಗೆ, ಎಂದರೆ ಶ್ರಿಯಃಪತಿತ್ವ, ಹೇಯಪ್ರತ್ಯನೀಕತ್ವ, ಕಲ್ಯಾಣಗುಣಾಕರತ್ವ, ಸರ್ವಸೃಷ್ಟಿ ಸ್ಥಿತಿಲಯಕಾರಣತ್ವ, ದಿವ್ಯಮಂಗಳ ವಿಗ್ರಹತ್ವ, ಉಭಯವಿಭೂತಿನಾಯಕತ್ವ, ಸರ್ವಾಂತರ್ಯಾಮಿತ್ವ, ಸರ್ವಾಧಾರತ್ವ, ಸರ್ವಶರೀರತ್ವಂ, ಸರ್ವಶೇಷಿತ್ವ, ಸರ್ವನಿಯಮನತ್ವ, ಪ್ರಕೃತಿಗಿಂತ ವಿಲಕ್ಷಣನಾದ ಜೀವಾತ್ಮನಿಗಿಂತ ವಿಲಕ್ಷಣನೆಂದು ಹೇಳಿದುದರಿಂದ, ಸರ್ವೇಶ್ವರನು ಚೇತನಾಚೇತನಗಳಿಗಿಂತ ವಿಲಕ್ಷಣನೆಂಬುದು ಕೈಮುತಿಕ ನ್ಯಾಯಸಿದ್ಧವು. ಇದರಿಂದ ಸ್ವತಂತ್ರಾತ್ಮ ಭ್ರಾಂತಿ ಮತ್ತು ಜೀವೇಶ್ರೈಕ್ಯ ಭ್ರಾಂತಿಗಳ ನಿವಾರಣೆಯು ಹೇಳಲ್ಪಟ್ಟಿತು; ಮತ್ತು ಜೀವ ಪರಮಾತ್ಮ ಸ್ವರೂಪಗಳಲ್ಲಿರುವ ವಿವೇಕ ಜ್ಞಾನವು ಬೋಧಿಸಲ್ಪಟ್ಟಿತು; ಹೀಗೆ ತತ್ತ್ವತ್ರಯಗಳ ವೈಲಕ್ಷಣ್ಯ ಜ್ಞಾನವನ್ನು ದೇಶಿಕರು ಉಪದೇಶಿಸತಕ್ಕದ್ದೆಂದು ಹೇಳಲ್ಪಟ್ಟಿತು ; ಹೀಗೆ ತತ್ತ್ವತ್ರಯಾಧಿಕಾರದ ಸಂಗ್ರಹ ಜ್ಞಾನದ ಆವಶ್ಯಕತೆಯು ಬೋಧಿತವು. ಅಲ್ಲಿಂದ ಹಿತತಮವಾದುದು ಯಾವುದೆಂದರೆ ಪರಿಕರ ವಿಭಾಗಾಧಿಕಾರ ಸಾಂಗಪ್ರಪದನಾಧಿಕಾರಗಳಲ್ಲಿ ಹೇಳಲ್ಪಟ್ಟ ಸಂಗ್ರಹಾರ್ಥವೆಂದು ಹೇಳುತ್ತಾರೆ– ಅದು ಯಾವುದೆಂದರೆ (೨) **ತಸ್ಮಿನ್**-ಆ ಪರಮ ಪುರುಷನಲ್ಲಿ ಎಂದರೆ ಆತನ ಪಾದ ಕಮಲದಲ್ಲಿ, **ಆತ್ಮಭರಾರ್ಪಣಂ**-ಆತ್ಮಾವಿನ ಸ್ವರೂಪ, ರಕ್ಷಾ, ಫಲಸಮರ್ಪಣವು, **ಹಿತತಮಂ**-ಅತ್ಯಂತ ಹಿತವಾದುದು ; " **ತಸ್ಮಾನ್ನ್ಯಾಸಮೇಷಾಂತಪಸಾಮತಿರಿಕ್ತಮಾಹುಃ**" ಎಂಬ ತೈತ್ತರೀಯ ವಾಕ್ಯಾನುಸಾರ ಅತ್ಯುತ್ಕೃಷ್ಟ ಸಾಧನವು ಎಂಬ ಭಾವವು. ಹಿತತಮವು ಹೇಗೆ ? ಎಂದರೆ ಭಕ್ತಿಯೋಗಕ್ಕೆ ಬೇಕಾದ ಕಷ್ಟತರವಾದ ಕರ್ಮಯೋಗ ಉಪಾಸನಾದಿಗಳಿಲ್ಲದೆ ಸಕೃದನುಷ್ಠೇಯವಾಗಿ ಸುಲಭವಾದ ಉಪಾಯವಾದುದರಿಂದ ಕರ್ಮಯೋಗಾ

ದಿಗಳಿಂದ ಮಿಳಿತವಾದ ಉಪಾಸನೆಯು **ಹಿತಕರವಾದರೆ** ಇದು ಎಂದರೆ ಆಚಾರ್ಯರ ಮೂಲಕ ಮಾಡುವ ಭರನ್ಯಾಸವು **ಹಿತತಮವು.** ಮುಂದೆ ಅದರಿಂದುಂಟಾಗುವ ಪುರುಷಾರ್ಥವೆಂದರೆ ಫಲವನ್ನು ಹೇಳುತ್ತಾರೆ. (೩) **ತಚ್ಛೇಷವೃತ್ತಿಃ**-ಭಗವಂತನ ಸಾಯುಜ್ಯವನ್ನು ಹೊಂದಿ ಪರಿಪೂರ್ಣ ಬ್ರಹ್ಮನನ್ನು ಅನುಭವಿಸುತ್ತಾ ಶೇಷಭೂತನಾಗಿ ಆತನಿಗೆ ನಿತ್ಯಕೈಂಕರ್ಯವನ್ನು ಮಾಡುತ್ತಾ ಆನಂದಿಸುತ್ತಿರುವುದೇ **ಫಲವ್**-ಪುರುಷಾರ್ಥವು, ಇದರಲ್ಲೇ ದೇಹವಿಯೋಗದವರೆಗೂ ಉತ್ತರಕೃತ್ಯವಾಗಿ ಬೋಧಿಸಲ್ಪಟ್ಟ ಭಗವದ್ಭಾಗವತಕೈಂಕರ್ಯವೂ ಅಂತರ್ಗತವು. **ಇತ್ಥಂ**-ಹೀಗೆ, **ತತ್ತ್ವ ಹಿತಪುರುಷಾರ್ಥ ಇತಿ**-ತತ್ತ್ವಹಿತಪುರುಷಾರ್ಥಗಳು ಎಂದು, **ದತ್ತಾತ್ಮನಾಂ**-ಆಚಾರ್ಯನಿಗೆ ತಾನು ಶೇಷಭೂತನೆಂದು ಭಾವಿಸಿ ಆಶ್ರಯಿಸಿದ ಶಿಷ್ಯರಾದ, ಆಚಾರ್ಯರಿಗೆ ಶೇಷನನ್ನಾಗಿ ತನ್ನನ್ನು ಸಮರ್ಪಿಸಿಕೊಂಡ ಶಿಷ್ಯರಾದ ಎಂಬ ಭಾವವು, **ನಃ**-ನಮಗೆ, **ತ್ರೇಧಾವಿಭಕ್ತಂ**-ಮೂರಾಗಿ ವಿಭಾಗಿಸಲ್ಪಟ್ಟ **ಧನವ್**-ಜ್ಞಾನರೂಪಧನವ್, ಐಹಿಕ ಧನವೆಲ್ಲಾ ನಶ್ವರವಾಗಿ ಅಂತಹ ಫಲಗಳನ್ನು ಕೊಡುವಂಥಾದ್ದು, ಈ ಆಚಾರ್ಯೋಪದೇಶದಿಂದುಂಟಾಗುವ ಧನವು ಶಾಶ್ವತವಾದ ಸರ್ವೋತ್ಕೃಷ್ಟವಾದ ಸುಖವನ್ನು ಕೊಡುವ ಧನವೆಂಬ ಭಾವವು, ತತ್ತ್ವಹಿತಪುರುಷಾರ್ಥಗಳನ್ನು ಚನ್ನಾಗಿ ತಿಳಿಸುವ ಈ ಮೂರು ರಹಸ್ಯಗಳ ಜ್ಞಾನವನ್ನು ಎಂಬ ತಾತ್ಪರ್ಯವು, **ದಯಾಧನಾಃ**-ತಮ್ಮನ್ನು ಆಶ್ರಯಿಸುವ ಚೇತನರನ್ನು ಉದ್ಧಾರ ಮಾಡಬೇಕೆಂಬ ದಯೆಯನ್ನೇ ಧನವಾಗಿವುಳ್ಳ, ಇದರಿಂದ ಐಹಿಕ ಧನವನ್ನು ಸಂಪೂರ್ಣವಾಗಿ ತ್ಯಾಗಮಾಡಿದ ಮಹಾವೈರಾಗ್ಯನಿಧಿಗಳೆಂದು ಹೇಳಲ್ಪಟ್ಟರು, **ದೇಶಿಕಾಃ**-ಆಚಾರ್ಯರುಗಳು, ಅಥವಾ ಗೌರವಾರ್ಥವಾಗಿ ಬಹುವಚನವೆಂದೂ ಭಾವಿಸಬಹುದು; **ಸ್ವಯಂ**-ತಾವಾಗಿಯೇ ಇತರ ಪ್ರೇರಣೆ ಬೇಕಿಲ್ಲದೆ, **ದಾಯತ್ವೇನ**-ತಮಗೆ ಆಚಾರ್ಯರು ಸಲ್ಲಿಸತಕ್ಕ ಧನಾಂಶವೆಂಬ ಭಾವನೆಯಿಂದ **ಅದುಃ**-ಕೊಟ್ಟರು. ತಂದೆಯಾದವನು ಹೇಗೆ ತನಗೆ ಬಂದ ಪಿತ್ರಾರ್ಜಿತ ಧನವನ್ನು ತನ್ನ ಮಕ್ಕಳಿಗೆ ಸಲ್ಲತಕ್ಕದ್ದೆಂದು ಅವಶ್ಯಕವಾಗಿ ದಾಯಧನವನ್ನಾಗಿ ಕೊಡಬೇಕೋ ಹಾಗೆ ಎಂಬ ತಾತ್ಪರ್ಯವು. ಸ್ವಾರ್ಜಿತವಾಗಿದ್ದರೆ ಕೊಟ್ಟೇ ತೀರಬೇಕೆಂಬ ನಿಯಮವಿಲ್ಲವು. ಪಿತ್ರಾರ್ಜಿತವಾದುದರಿಂದ ಕೊಟ್ಟೇ ತೀರಬೇಕು. ಹಾಗೆಯೇ ಆಚಾರ್ಯರುಗಳೂ ಸಹ ತಮ್ಮ ಆಚಾರ್ಯರಿಂದ ಬಂದ ಧನವನ್ನು ತಮ್ಮ ಸಚ್ಛಿಷ್ಯರಿಗೆ ಕೊಟ್ಟೇ ತೀರಬೇಕೆಂಬ ಭಾವವು ತೋರಿಬರುತ್ತದೆ. ಇದರಿಂದ ಅಸತ್ತುಗಳಾದ ಇತರರಿಗೆ ಆಸುರ ಸ್ವಭಾವದವರಿಗೆ ಈ ಧನವು ಸಲ್ಲತಕ್ಕದ್ದಲ್ಲವೆಂಬ ಭಾವವೂ ಸೂಚಿತವು. ಈ ಆಚಾರ್ಯರು ಪ್ರಾಚಾರ್ಯರಿಂದ ತಮಗೆ ಬಂದ ರಹಸ್ಯೋಪದೇಶವನ್ನು ತಾವೇ ಇಟ್ಟುಕೊಳ್ಳಕೂಡದು; ದಾಯಧನವಾಗಿ ತಮ್ಮ ಸಚ್ಛಿಷ್ಯರಲ್ಲಿ ವಿನಿಯೋಗಿಸತಕ್ಕದ್ದು ಆಚಾರ್ಯರ ಇತಿಕರ್ತವ್ಯವು. ಹಾಗೆ ಭಾವಿಸಿ, ಶಿಷ್ಯರಲ್ಲಿ ಆ ಧನವನ್ನು ಕೊಡಬೇಕಾದುದು ಸದಾಚಾರ್ಯರ ಸಂಪ್ರದಾಯಧರ್ಮವು ಎಂಬ ಭಾವವು. ಧನವು ಹೇಗೆ ಗೃಹ

ಕ್ಷೇತ್ರಾರಾಮ ಚಿನ್ನ ಬೆಳ್ಳಿಯ ರೂಪದಲ್ಲಿ ವಿಭಾಗಿಸಲ್ಪಟ್ಟಿದೆಯೋ, ಹಾಗೆಯೇ ಈ ಜ್ಞಾನಧನವೂ ತತ್ತ್ವ, ಹಿತ, ಪುರುಷಾರ್ಥ ರೂಪದಲ್ಲಿ ಮೂರು ವಿಧವು. **ಈ ದಾಯಧನ**ವೆಂಬ ಪ್ರಯೋಗವನ್ನು ಸ್ಥಿರೀಕರಿಸುವ ಒಂದು ಇತಿಹಾಸವೂ ಉಂಟು. ನಾಥಮುನಿಗಳು ತಮ್ಮ ಪೌತ್ರರಾದ ಯಾಮುನ ಮುನಿಗಳಿಗೆ ಈ ರಹಸ್ಯಾರ್ಥಗಳನ್ನೆಲ್ಲಾ ಉಪದೇಶಿಸತಕ್ಕದ್ದೆಂದು ತಮ್ಮ ಶಿಷ್ಯರಾದ ಉಯ್ಯಕೊಂಡಾರರಿಗೆ ತಿಳಿಸಿದರು. ಆದರೆ ಅವರಿಗೆ ಉಪದೇಶಿಸುವ ಅನುಕೂಲ ಒದಗಲಿಲ್ಲವಾದುದರಿಂದ ಉಯ್ಯಕೊಂಡಾರವರು **ಮಂತ್ರಾರ್ಥವನ್ನೆಲ್ಲಾ** ಮಣಕ್ಕಾಲ್ ನಂಬಿಯನ್ನು ಕುರಿತು ಯಾಮುನ ಮುನಿಗಳಿಗೆ ಉಪದೇಶಿಸತಕ್ಕದ್ದೆಂದು ಹೇಳಿದರು. ತದನುಸಾರವಾಗಿ ಅವರು ಯಾಮುನ ಮುನಿಗಳಿಗೆ ರಾಜ್ಯಧನವನ್ನು ತ್ಯಾಗ ಮಾಡುವ ಹಾಗೆ ಉಪದೇಶದ ಮೂಲಕ ವೈರಾಗ್ಯವನ್ನು ಹುಟ್ಟಿಸಿ, ಶ್ರೀರಂಗಕ್ಕೆ ಕರೆದುಕೊಂಡು ಹೋಗಿ ಶ್ರೀರಂಗನಾಥನನ್ನು ತೋರಿಸಿ ನಾಥಮುನಿಗಳು ನಿಮಗೆ ಕೊಡಹೇಳಿದ ಧನವನ್ನು ಈಗ ಅರ್ಪಿಸಿರುತ್ತೇನೆಂದು ಹೇಳಿದರು. ಈ ಉಪದೇಶವನ್ನು ವಿಶದವಾಗಿ ಶಿಷ್ಯನು ಪ್ರಾಜ್ಞನಾಗಿದ್ದರೆ ವಿಸ್ತಾರವಾಗಿಯೂ, ಪರಿಮಿತಗ್ರಹಣಶಕ್ತಿಯುಳ್ಳವನಾದರೆ ಸಂಗ್ರಹವಾಗಿಯೂ, ಆದರೆ ವಿಶದವಾಗಿಯೂ ಸಚ್ಛಿಷ್ಯನಿಗೆ ಉಪದೇಶಿಸತಕ್ಕದ್ದು ಸದಾಚಾರ್ಯನ ಮುಖ್ಯ ಕರ್ತವ್ಯವೆಂದು ಆಚಾರ್ಯಕೃತ್ಯವನ್ನು ನಿರೂಪಣೆ ಮಾಡಿದರು. ಆಗಲಿ, ಸದಾಚಾರ್ಯನು ತನ್ನಲ್ಲಿ ಬಂದ ಸರ್ವರನ್ನೂ ಭಾವಿಸಿ ದಾಯಧನವನ್ನಾಗಿ ಈ ಜ್ಞಾನವನ್ನು ಸರ್ವರಿಗೂ ಉಪದೇಶಿಸತಕ್ಕದ್ದೇ ಎಂಬ ಸಂದೇಹಹಲ್ಲಿ, **ದತ್ತಾತ್ಮನಾಂ** ಎಂದು ಹೇಳಿ ತಮ್ಮನ್ನಾಶ್ರಯಿಸಿದ ಸಚ್ಛಿಷ್ಯನನ್ನು ಮಾತ್ರ ತನ್ನ ಪುತ್ರನನ್ನಾಗಿ ಭಾವಿಸಿ, ದಾಯಧನಕ್ಕೆ ಅರ್ಹನೆಂದು ಕೊಡತಕ್ಕದ್ದೇ ವಿನಾ ಸರ್ವರಿಗೂ ಸರ್ವಾತ್ಮನಾ ಕೂಡದೆಂಬ ಭಾವವನ್ನು ಈ ಪ್ರಯೋಗದಿಂದ ತೋರ್ಪಡಿಸಿದರು. ಇದನ್ನನುಸರಿಸಿಯೇ ತಮ್ಮ ಆಚಾರ್ಯರು ಇಂತಹ ದಾಯಧನವನ್ನು ತಮಗೂ ದಯಪಾಲಿಸಿದುದರಿಂದ ಆಚಾರ್ಯರು ದಾಯಧನರು ಎಂಬ ಭಾವವನ್ನು ಕೃತಜ್ಞತಾ ಮೂಲಕ ಸೂಚಿಸಿರುತ್ತಾರೆ. ಅದನ್ನೇ ವ್ಯಕ್ತವಾಗಿಯೇ ಮುಂದಿನ ವಾಕ್ಯದಿಂದ ವ್ಯಕ್ತಪಡಿಸುತ್ತಾರೆ. ಆಚಾರ್ಯರು ಹೇಗೆ ದಾಯಧನರೋ ಹಾಗೆಯೇ ಪರಮಪುರುಷನೂ ಸಹ ದಾಯಧನನೆಂದು ಹಿಂದೆಯೇ ಹೇಳಲ್ಪಟ್ಟಿತು. ಮುಕ್ತೈಶ್ವರ್ಯವನ್ನು ತನ್ನ ಪುತ್ರನಾದ ಜೀವಾತ್ಮನು ಹೊಂದಲು ಯೋಗ್ಯನನ್ನಾಗಿ ಮಾಡಿ, ಅನಂತರ ಅದನ್ನು ತಾನು ಆಚಾರ್ಯರ ಪುರುಷಕಾರರೂಪವಾದ ದಿವ್ಯಸೂಕ್ತಿಗೆ ಮರ್ಯಾದೆಯನ್ನು ಕೊಟ್ಟು ಅನುಗ್ರಹಿಸುವುದರಿಂದ, ಶ್ರಿಯಃಪತಿಯೂ ದಾಯಧನನು.

ಈ ಶ್ಲೋಕದ ಮೂಲಕ ಪ್ರಧಾನ ಪ್ರತಿತಂತ್ರಾಧಿಕಾರ ಮೊದಲುಗೊಂಡು ನಿಗಮನಾಧಿಕಾರದವರೆಗೂ ಹೇಳಿರುವ ಎಲ್ಲಾ ಉಪದೇಶವೂ ಪ್ರಾಜ್ಞನಾದ ಶಿಷ್ಯನಿಗೆ ಅತ್ಯಾವಶ್ಯಕವಾಗಿ, ತಮ್ಮ ಆಚಾರ್ಯನ ಮೂಲಕವಾಗಿ ಸಚ್ಛಿಷ್ಯನು ಉಪದೇಶವನ್ನು

ಹೊಂದತಕ್ಕದ್ದು ಶಿಷ್ಯಕೃತ್ಯವೆಂಬ ಮುಂದಿನ ಅಧಿಕಾರ ಸಙ್ಗತಿಯು ಇಲ್ಲಿ ಸೂಚಿತವು. ಈ ಸಂದರ್ಭದಲ್ಲಿ ಒಂದು ಪೂರ್ವಪಕ್ಷವೂ ಉದಿಸಬಹುದು. ಈ ರಹಸ್ಯಗಳ ಅರ್ಥಗಳೆಲ್ಲಾ ಸತ್ಸಂಪ್ರದಾಯ ರೀತಿಯಲ್ಲಿ ಸದಾಚಾರ್ಯರಿಂದ ಸಚ್ಛಿಷ್ಯರಿಗೆ ಉಪದೇಶಿಸತಕ್ಕವುಗಳಾಗಿರುವಾಗ ಅದನ್ನು ತಪ್ಪಿಸಿ ತಾವು ಎಲ್ಲರಿಗೂ ಎಂದರೆ ಯೋಗ್ಯಾಯೋಗ್ಯರಿಗೆಲ್ಲಾ ತಿಳಿಯುವ ಹಾಗೆ ಈ ಗ್ರಂಥರೂಪದಲ್ಲಿ ಪ್ರಕಾಶಪಡಿಸುವುದು ನ್ಯಾಯವೋ? "**ಮನ್ತ್ರಂ ಯತ್ನೇನ ಗೋಪಯೇತ್**" ಎಂಬ ವಿಧಿಗೂ ಸತ್ಸಂಪ್ರದಾಯಕ್ಕೂ ವಿರುದ್ಧವಾಗಲಿಲ್ಲವೇ? ಎಂದರೆ, ಅದಕ್ಕೆ ಸಮಾಧಾನವಾಗಿ ಸೂಚಿಸುತ್ತಾರೆ. ಈ ಅರ್ಥಗಳೆಲ್ಲಾ ನಮ್ಮ ದರ್ಶನ ಸ್ಥಾಪಕರಾದ ಶ್ರೀಯತಿವರ್ಯರು ಕಷ್ಟಪಟ್ಟು ತಮ್ಮ ಆಚಾರ್ಯರಿಂದ ಸಂಗ್ರಹಿಸಿ ತಮ್ಮ ಸಚ್ಛಿಷ್ಯರಾದ, ತಮಗೆ ಮಹಾಸನ (ಮಡಪಳ್ಳಿ) ಕೈಂಕರ್ಯ ಮಾಡಿದ, ಮತ್ತು ಶ್ರೀ ಭಾಷ್ಯಕಾರರ ನಾಲ್ಕು ಶ್ರೀ ಭಾಷ್ಯ ಸಿಂಹಾಸನಾಧಿಪತಿಗಳಲ್ಲಿ ಒಬ್ಬರಾದ, ಕಿಡಂಬಿಯಾಚ್ಚಾನ್ ಎಂದೂ ಪ್ರಣತಾರ್ತಿಹರರ್ ಎಂದೂ ಅಪರ ನಾಮಧೇಯಗಳುಳ್ಳವರಿಗೆ ಉಪದೇಶಿಸಿದರು. ಇವರು, ನಿಗಮಾಂತ ಮಹಾದೇಶಿಕರವರ ಗುರುಗಳೂ ಮತ್ತು ಮಾತುಲರೂ ಆದ ಕಿಡಾಂಬಿ ಅಪ್ಪುಳ್ಳಾರಿಗೆ ವೃದ್ಧ ಪ್ರಪಿತಾಮಹರು. ಹೀಗೆ ಸಂಪ್ರದಾಯವಾಗಿ ಶಿಷ್ಯಪರಂಪರೆಯಿಂದ ಬಂದ ಈ ರಹಸ್ಯಗಳ ಅಮೋಘಾರ್ಥಗಳು ಮರೆತುಹೋಗಿ ಎಲ್ಲಿ ಖಿಲವಾಗಿ ಹೋಗುವುವೋ ಎಂಬ ಕಾತರದಿಂದ, ಅವುಗಳನ್ನು ಗ್ರಂಥರೂಪದಲ್ಲಿ ಭದ್ರಪಡಿಸುವದು ಕರ್ತವ್ಯವಾದುದರಿಂದ, ಬರೆಯಲ್ಪಟ್ಟಿತೆಂದೂ, ಹೀಗೆ ಬರೆದಿಟ್ಟಿರುದುದರಿಂದ ಸತ್ಸಂಪ್ರದಾಯದ ಉಪಹತಿಗೆ ಏನೂ ಕಾರಣವಿಲ್ಲವೆಂದು ಹೇಳುತ್ತಾರೆ. ಆದುದರಿಂದ ಈಗ ನಾವು ಆಶ್ರಯಿಸಿದ ಆಚಾರ್ಯರುಗಳು ಶ್ರೀ ದೇಶಿಕರವರ ಈ ಗ್ರಂಥವನ್ನೇ ಮುಖ್ಯವಾಗಿ ಭಾವಿಸಿ, ಇದರಲ್ಲಿರುವುದನ್ನೇ ಉಪದೇಶಿಸುತ್ತಾರೆ. ಆದುದರಿಂದಲೇ ಮುಮುಕ್ಷುವಿಗೆ ಇದು ಸರ್ವೋತ್ಕೃಷ್ಟ ಗ್ರಂಥವು. ಆ ಕಾರಣದಿಂದಲೇ ದಾಸನು ಇದನ್ನು ಪರಿವರ್ತನೆಯೊಂದಿಗೆ ಉಪಪಾದನೆಯನ್ನು ಮಾಡಿರುತ್ತೇನೆ. ದಾಸನ ಅಭಿಪ್ರಾಯವೂ ಸತ್ಸಂಪ್ರದಾಯವನ್ನು ತ್ಯಾಗ ಮಾಡಿ ಇದನ್ನೇ ಸ್ವೀಕರಿಸಬೇಕೆಂದಿಲ್ಲವು. ಗುರುಮೂಲಕ ಉಪದೇಶವನ್ನು ಹೊಂದಿ, ಅಲ್ಲಿಯೇ ಗ್ರಂಥ ಪೂರ್ತಿ ಮಾಡುವುದಕ್ಕೆ ಅನುಕೂಲವಿಲ್ಲದವರಿಗೂ, ಉಪದೇಶಿಸಲ್ಪಟ್ಟುದುದನ್ನೂ ಸ್ಥಿರಪಡಿಸಿಕೊಳ್ಳಬೇಕೆಂಬ ಆಶೆಯುಳ್ಳವರಿಗೂ ಸಹಾಯಕರವಾಗುವ ಹಾಗೆ ರಚಿಸಿರುತ್ತೇನೆ.

ಈ ರಹಸ್ಯಾರ್ಥವೆಲ್ಲಾ **ಆಚಾರ್ಯರಿಂದ ಉಪದೇಶಿಸಲ್ಪಡತಕ್ಕದ್ದು. ಹೀಗಿರುವಾಗ ಈ ಗ್ರಂಥರಚನೆಯು ಸತ್ಸಂಪ್ರದಾಯಕ್ಕೆ ವಿರೋಧಿಯಲ್ಲವೋ ಎಂದರೆ ಸಮಾಧಾನವು. ಹೇಗೆಂದರೆ:-**

**ಇಪ್ಪಡಿ**-ಈ ಮೇಲೆ ಆಚಾರ್ಯಕೃತ್ಯವನ್ನು ತಿಳಿಸುವ ಸಂದರ್ಭದಲ್ಲಿ ಹೇಳಿದ ಹಾಗೆ, **ರಹಸ್ಯತ್ರಯವನ್ನು**, **ಪತ್ತಿನ**-ಕುರಿತು, **ಕೀಳುಮುರ್**-ಹಿಂದಿನ ಅಧಿಕಾರ

**ಏತತ್ಸರ್ವಂ ಆಚಾರ್ಯೇಣೋಪದೇಷ್ಟವ್ಯಮ್; ಏವಂಸತಿ, ಏತದ್ಗ್ರಂಥ ನಿರ್ಮಾಣಂ ಸತ್ಸಂಪ್ರದಾಯ ವಿರೋಧೀತ್ಯತ್ರಾಹ**

**ಇಪ್ಪಡಿ ರಹಸ್ಯತ್ರಯತ್ತೈಪ್ಪತ್ತಿನ ಕೀಳುಮ್ ಮೇಲುಮ್ ಉಳ್ಳ ಪಾಶುರಙ್ಗಳೆಲ್ಲಾಮ್ ವೇದಾಂತೋದನ ಸಂಪ್ರದಾಯಮಾನ ಮುಡಪ್ಪಳ್ಳಿ ನಾರ್ತ್ತೈಯ್ಯೆ ಆಚಾರ್ಯ್ಯ ಪಕ್ಕಲಿಲೇ ತಾನ್ ಕೇಟ್ಟ ರುಳಿನಪಡಿಯೇ, ಕಿಡಾಂಬಿ ಅಪ್ಪುಳ್ಳಾರಡಿಯೇನೈ ಕಿಳಿಯೈ ಪಳಕ್ಕು ವಿಕ್ಕು ಮಾಪ್ಪೋಲೆ ಪಳಕ್ಕುವಿಕ್ಕ ಅವರ್ ತಿರುವುಳ್ಳತ್ತಲಿರಕ್ಕು**

---

ಗಳಲ್ಲೂ, **ಮೇಲುಮ್**-ಮುಂದೆಯೂ, **ಉಳ್ಳ**-ಇರುವ, **ಪಾಶುರಙ್ಗಳೆಲ್ಲಾಂ**-ಹಿತೋಕ್ತಿಗಳೆಲ್ಲಾ, ತಾವು ಈ ಗ್ರಂಥದಲ್ಲಿ ಉಪದೇಶಿಸಿರುವುದೆಲ್ಲಾ ಎಂಬ ಭಾವವು. **ವೇದಾಂತೋದಯನ ಸಂಪ್ರದಾಯಮಾನ**-ವೇದಾಂತ ಶಾಸ್ತ್ರವನ್ನು ಸಾಕ್ಷಾತ್ತಾಗಿ ಶ್ರೀಯತಿವರ್ಯರ ಶ್ರೀಭಾಷ್ಯಾದಿ ತರ್ಕಶಾಸ್ತ್ರಮೂಲಕವಾಗಿ, ನಾಲ್ಕು ಶ್ರೀಭಾಷ್ಯ ಸಿಂಹಾಸನ ಪತಿಗಳಲ್ಲಿ ಒಬ್ಬರಾಗಿ ಪ್ರಕಟನ ಮಾಡಿದುದರಿಂದ **ವೇದಾಂತೋದಯನ**ರೆಂದು ಹೇಳಿಸಿಕೊಳ್ಳುವ ಸಂಪ್ರದಾಯವಾದ, ಮತ್ತು **ಮುಡಪ್ಪಳ್ಳಿ ನಾರ್ತ್ತೈಯೇ**-ಶ್ರೀಯತಿವರ್ಯರಿಗೆ ಮಹಾನಸ ಕೈಂಕರ್ಯವನ್ನು ಮಾಡತಕ್ಕದ್ದೆಂದು ತಮ್ಮ ಪ್ರಾಚಾರ್ಯರಾದ ತಿರುಕೋಟ್ಟಿಯೂರ್ ನಂಬಿಯವರಿಂದ ಆಜ್ಞಪ್ತರಾದ ಕಿಡಾಂಬಿ ಆಚ್ಚಾನ್ ಎಂಬವರ ಉಪದೇಶವನ್ನೇ (ಇವರಿಗೆ ತಿರುಕ್ಕೋಟಿಯೂರ್ ನಂಬಿಯವರು ಪ್ರಣತಾರ್ತಿಹರರ್ ಎಂಬ ಅಪರ ನಾಮಧೇಯವನ್ನಿತ್ತರು) **ಆಚಾರ್ಯ್ಯ ಪಕ್ಕಲಿಲೇ**-ಪರಮಾಚಾರ್ಯರಾದ ಶ್ರೀ ಭಾಷ್ಯಕಾರರ ಸನ್ನಿಧಿಯಲ್ಲಿ, **ತಾನ್ ಕೇಟ್ಟರುಳಿನಪಡಿಯೇ**-ತಾನು ಎಂದರೆ ಆಚ್ಚಾನ್‌ರವರು ಉಪದೇಶ ಹೊಂದಿ ತಮ್ಮ ಶಿಷ್ಯರಿಗೆ ಕೃಪೆ ಮಾಡಿ ಉಪದೇಶಿಸಿ ಪರಂಪರಯಾ ಬಂದ, **ಕಿಡಾಂಬಿ ಅಪ್ಪುಳಾರ್ ಅಡಿಯೇನೈ**-ನನ್ನ ಸೋದರ ಮಾವಂದಿರಾದ ಕಿಡಾಂಬಿ ಅಪ್ಪುಳ್ಳಾರವರು ದಾಸನನ್ನು, **ಕಿಳಿಯೈ ಪಳಕ್ಕವಿಕ್ಕುಮಾಪ್ಪೋಲೆ**-ಗಿಳಿಗೆ ಹೇಳಿಕೊಟ್ಟು ಅಭ್ಯಾಸ ಮಾಡಿಸಿದ ಹಾಗೆ, **ಪಳಕ್ಕುವಿಕ್ಕ**-ಅಭ್ಯಾಸಪಡಿಸಿದ ಹಾಗೆ, ಪದೇ ಪದೇ ಉಪದೇಶಿಸಿದ ಹಾಗೆ, ಅಥವಾ ಇನ್ನೊಂದು ವಿಧವಾಗಿಯೂ ಅರ್ಥಮಾಡಬಹುದು ಹೇಗೆಂದರೆ **ಆಚಾರ್ಯ್ಯ ಪಕ್ಕಲಿಲೇ**-ನಮ್ಮ ಮಾವಂದಿರಾದ ಕಿಡಾಂಬಿ ಅಪ್ಪುಳ್ಳಾರವರ ಆಚಾರ್ಯರು ತಂದೆಯೂ ಆದ ರಂಗರಾಜಸ್ವಾಮಿಗಳಿಂದ **ತಾನ್ ಕೇಟ್ಟರುಳಿನಪಡಿಯೇ**-ತಾವು ಉಪದೇಶ ಹೊಂದಿದ ಹಾಗೆ, **ಅಪ್ಪುಳ್ಳಾರ್**-ಅಪ್ಪುಳ್ಳಾರವರು, **ಅಡಿಯೇನೈ**-ಸೋದರಳಿಯನಾಗಿಯೂ ಶಿಷ್ಯನಾಗಿಯೂ ಇರುವ ದಾಸನನ್ನು ಎಂದೂ ಅರ್ಥ ಮಾಡಬಹುದು; ಎರಡರ್ಥವೂ ಸಮಂಜಸವಾದುದೇ; **ಅಡಿಯೇನೈಪಳಕ್ಕು**

**ಮುಡಿಯಾಕ ಪ್ಪೆರುಮಾಳ್‌ತೆಳಿಯ ಪ್ರಕಾಶಿಪ್ಪಿತ್ತು ಮರವಾಮಲ್ (ಪಣ್ಣಿ) ತಾತ್ತು (ಶೇರ್‌ತ್ತು) ಪಿಳ್ಳೈಯುರ ಪ್ಪೇಶುವಿತ್ತ ಪಾಶುರಙ್ಗಳ್.**

---

**ಎಕ್ಕ**-ನನಗೂ ಅಭ್ಯಾಸ ಮಾಡಿಸಲಾಗಿ, **ಅವರ್ ತಿರುವುಳ್ಳತ್ತಿಲ್**-ಆ ಆಚಾರ್ಯ ರಾದ ಕಿಡಾಂಬಿ ಅಪ್ಪುಳ್ಳಾರ್‌ರವರ ಮನಸ್ಸಿನಲ್ಲಿ, **ಇರಕ್ಕಮುಡಿಯಾಗ**-ಇರುವ ಸ್ನೇಹ, ಶಿಷ್ಯನಾದ ನನ್ನಲ್ಲಿರುವ ಪ್ರೀತಿಗೆ ಅನುಸಾರವಾಗಿ, **ಪೆರುಮಾಳ್**-ಹಯ ಗ್ರೀವರಾದ ತಮ್ಮ ಕುಲದೈವವು, **ತೆಳಿಯ ಪ್ರಕಾಶಪ್ಪಿತ್ತು**-ದೈವ ಸಹಾಯವಿಲ್ಲದೆ ಯಾವುದೂ ಪ್ರಕಾಶಿಸುವುದಿಲ್ಲವಾದುದರಿಂದ ಚನ್ನಾಗಿ ಪ್ರಕಾಶಪಡಿಸಿ, **ಮರವಾ ಮಲ್‌ಪ್ಪಣ್ಣಿ**-ಅವರ ಯಾವ ಉಪದೇಶವನ್ನೂ ಮರೆತು ಹೋಗದಿರುವ ಹಾಗೆ ಮಾಡಿ, **ಶೇರ್‌ತ್ತು**-ಸೇರಿಸಿ, **ಎಳ್ಳೈಯುರ**-ಸ್ಖಾಲಿತ್ಯವೇನೂ ಇಲ್ಲದ ಹಾಗೆ, **ಪೇಶುವಿತ್ತ**-ಅನುಗ್ರಹಿಸಿ ಉಪದೇಶಿಸಿದ, **ಪಾಶುರಙ್ಗಳ್**-ವಾಕ್ಯಗಳಾದ ಈ ಗ್ರಂಥವು. ಈ ಗ್ರಂಥವನ್ನು ಬರೆದಿಟ್ಟದ್ದು ಏಕೆಂದರೆ ಕಾರಣಗಳನ್ನು ಹೇಳಿದರು. ಈ ಗ್ರಂಥದಲ್ಲಿ ಅಡಗಿರುವ ಅಭಿಪ್ರಾಯಗಳೆಲ್ಲಾ ಸಾಕ್ಷಾತ್ತಾಗಿ ಶ್ರೀ ಯತಿವರ್ಯರಿಂದ ಮಾಡಲ್ಪಟ್ಟ ಉಪದೇಶವು. ಶ್ರೀಯತಿವರ್ಯರು ಅವರಿಗೆ ಮಹಾನಸ ಕೈಂಕರ್ಯ ಮಾಡಿ ಮಧೂಕರ ಭಿಕ್ಷೆಯನ್ನು ಸಮರ್ಪಿಸಿ ಪ್ರಿಯ ಶಿಷ್ಯರಾಗಿಯೂ ಶ್ರೀ ಭಾಷ್ಯ ಪ್ರವರ್ತನೆಯಲ್ಲಿ ಅಗ್ರೇಸರರಾಗಿದ್ದ ಕಿಡಾಂಬಿ ಆಚ್ಚಾನ್ಎಂಬುವರು. ಇವರು ತಮ್ಮ ಮಾವಂದಿರಾದ ಕಿಡಾಂಬಿ ಅಪ್ಪುಳ್ಳಾರರ ಪೂರ್ವಾಚಾರ್ಯರ ಸಂತತಿಗೆ ಸೇರಿದವರಿಗೆ ಮಂತ್ರಾರ್ಥಗಳನ್ನೆಲ್ಲಾ ಉಪದೇಶಿಸಿದರು. ಅವರಿಂದ ಅವರ ಮಕ್ಕಳಾದ ರಾಮಾ ನುಜಪ್ಪಿಳ್ಳಾನ್‌ರವರು ಉಪದೇಶಿಸಿದರು. ಈ ಪಿಳ್ಳಾನ್‌ರವರು ತಮ್ಮ ಮಕ್ಕಳಾದ ಶ್ರೀ ರಂಗರಾಜರೆಂಬುವವರಿಗೆ ಉಪದೇಶಿದರು. ಇವರು ತಮ್ಮ ಮಕ್ಕಳಾದ ಪಿತಾ ಮಹರ ನಾಮವನ್ನೇ ಧರಿಸಿದ ರಾಮಾನುಜ ಪಿಳ್ಳಾನ್ ಎಂಬುವರಿಗೆ ಅನುಗ್ರಹಿಸಿದರು. ಇವರೇ ಕಿಡಾಂಬಿ ಅಪ್ಪುಳಾರೆಂಬ ಶ್ರೀ ದೇಶಿಕರವರ ಮಾವಂದಿರು. ಆದುದರಿಂದ ಶ್ರೀ ಯತಿವರ್ಯರಿಗೆ ಮಹಾನಸ ಕೈಂಕರ್ಯ ಮಾಡುತ್ತಿದ್ದ ಕಿಡಾಂಬಿ ಆಚ್ಚಾನ್‌ರವರು, ಶ್ರೀ ದೇಶಿಕರ ಮಾವಂದಿರಾದ ಕಿಡಾಂಬಿ ಅಪ್ಪುಳ್ಳಾರ್‌ಗೆ ವೃದ್ಧಪ್ರಪಿತಾಮಹರು. ಅವರಿಂದ ಶ್ರೀ ಯತಿವರ್ಯರು ಉಪದೇಶಿಸಿದ ರಹಸ್ಯಾರ್ಥಗಳೆಲ್ಲಾ ತಮ್ಮ ಮಾವಂದಿರ ಮೂಲಕ ಲಭಿಸಿದ ಕೃತಜ್ಞತೆಯನ್ನು ಸೂಚಿಸುವುದಕ್ಕಾಗಿ, **ವೇದಾಂತೋದಯನ ಸಂಪ್ರದಾಯಮಾನ ಮಡಪ್ಪಳ್ಳಿವಾರ್‌ತ್ತೈ** ಎಂದು ಪ್ರಯೋಗಿಸುತ್ತಾರೆ. ಗುರು ಶಿಷ್ಯ ಕ್ರಮದಲ್ಲೇ ಈ ಉಪದೇಶವೆಲ್ಲಾ ನಡೆಯಲಿ ಎಂದು ಸುಮ್ಮನಿದ್ದುಬಿಟ್ಟರೆ, ಕಾಲಕ್ರಮೇಣ ಕೆಲವು ರಹಸ್ಯಾರ್ಥಗಳೆಲ್ಲಾ ಮರೆತು ಹೋಗಬಹುದು. ಅಥವಾ ಕೆಲವು ಶಿಷ್ಯರು ಸರಿಯಾಗಿ ತಮ್ಮ ಆಚಾರ್ಯರಿಂದ ಗ್ರಹಿಸದೆ ವ್ಯತ್ಯಸ್ತವಾದ ಅಭಿ ಪ್ರಾಯಗಳನ್ನು ಉಪದೇಶಿಸಬಹುದು.

ಆದುದರಿಂದ ಅವೆಲ್ಲವೂ ಮರೆಯದಿರುವುದಕ್ಕಾಗಿಯೂ ವ್ಯತ್ಯಸ್ತವನ್ನು ಹೊಂದದೇ ಇರುವುದಕ್ಕಾಗಿಯೂ ತಾವು ಈ ಗ್ರಂಥವನ್ನು ಬರೆದುದೇ ವಿನಾ, ಆಚಾರ್ಯ ಶಿಷ್ಯ ಕ್ರಮ ಸಂಪ್ರದಾಯಗಳು ವ್ಯತ್ಯಸ್ತವಾಗುವುದಕ್ಕಾಗಿ ಬರೆದುದಲ್ಲವೆಂದು ಹೇಳುತ್ತಾರೆ. ಹಾಗೆ ಮರೆಯುವುದಾಗಲಿ ವ್ಯತ್ಯಸ್ತಾಭಿಪ್ರಾಯವಾಗಲೀ ಉಂಟಾದುದುಂಟೋ ? ಎಂದರೆ ತಮ್ಮ ಕಾಲದಲ್ಲೇ ಮಹನೀಯರಾದ ಪಂಡಿತರೇ ತಮ್ಮ ಹಾಗೆ ಹಯಗ್ರೀವಾನುಗ್ರಹವಿಲ್ಲದವರು ಅಪಾರ್ಥಗಳನ್ನು ಈ ರಹಸ್ಯಗಳ ವಿಷಯದಲ್ಲೇ ಉಪದೇಶಿಸಿರುತ್ತಾರೆ. ಆದುದರಿಂದಲೇ "**ಅವರ್ ತಿರುವುಳ್ಳತ್ತಿಲ್ ಇರಕ್ಕಮುಡಿಯಾಗ ಪೆರುಮಾಳ್ ತೆಳಿಯ ಪ್ರಕಾಶಪ್ಪಿತ್ತು ಮರವಾಮಲ್ ಪ್ಪಣ್ಣಿ ಶೇರ್ತ್ತು ಪಿಳ್ಳೈಯುರ**" ಎಂಬ ಪ್ರಯೋಗವು. ಋಜುವಾದ ಅರ್ಥಗಳು ದೊರೆಯಬೇಕಾದರೆ ಎರಡು ಅನುಗ್ರಹಗಳು ಬೇಕು. (೧) ಸದಾಚಾರ್ಯ ಕಟಾಕ್ಷವು (೨) ಭಗವಂತನ ಅನುಗ್ರಹವು. ಮೊದಲನೆಯದು ಶ್ರೀ ಯತಿವರ್ಯರ ದಿವ್ಯ ಕಟಾಕ್ಷಕ್ಕೆ ಪಾತ್ರರಾದ ಮಹಾನಸಕೈಂಕರ್ಯಪರರೇ ತಮ್ಮ ಗುರುವಾದ ಕಿಡಾಂಬಿ ಅಪ್ಪುಳ್ಳಾರರ ಪ್ರಪಿತಾಮಹರು. ಆಗಿನ ಕಾಲದಲ್ಲಿ ತಂದೆಯೂ ಸದಾಚಾರರಾಗಿ ತಮ್ಮ ತಮ್ಮ ಮಕ್ಕಳಿಗೆ ಉಪದೇಶಿಕರಾಗಿದ್ದರು. ಆದುದರಿಂದ ಹಾಗೆ ಯಾವ ನ್ಯೂನತೆಗಳೂ ಇಲ್ಲದೆ ಯಥಾರ್ಥಗಳಾಗಿ ಬಂದ ಉಪದೇಶಗಳು. ಅದೂ ಅಲ್ಲದೆ ರುಜುವಾದುದೇ, ಈ ಕಿಡಾಂಬಿ ಅಪ್ಪುಳ್ಳಾರವರು ತಮಗೆ ಮಾಡಿದ ಉಪದೇಶವೆಂಬುದಕ್ಕೆ ಇನ್ನೊಂದು ವಿಶೇಷ ಕಾರಣವುಂಟು. ಕಿಡಾಂಬಿ ಅಪ್ಪುಳ್ಳಾರ್ರವರಿಗೆ ತಮ್ಮ ತಂದೆಯಿಂದ ಉಪದೇಶವಲ್ಲದೆ **ನಡಾದೂರಮ್ಮಾಳ್** ಎಂಬ ಪರಮ ಗುರುವಿನಿಂದಲೂ ಉಪದೇಶ ಹೊಂದಿದವರು. ಇವರು ಶ್ರೀಯತಿವರ್ಯರ ಇನ್ನೊಬ್ಬ ಶ್ರೀ ಭಾಷ್ಯ ಸಿಂಹಾಸನಾಧಿಪತಿ ಎಂದು ಪ್ರಖ್ಯಾತಿ ಹೊಂದಿದವರ ಶಿಷ್ಯರು. ಇವರ ಪೌತ್ರರೇ ಈ ಕಿಡಾಂಬಿ ಅಪ್ಪುಳ್ಳಾರಿಗೂ ಆಚಾರ್ಯರ್ಯರಾಗಿ ಪಿತಾಮಹರ ಹೆಸರನ್ನೇ ಧರಿಸಿರುವ ನಡಾದೂರಮ್ಮಾಳ್‌ರವರು. ಈ ನಡಾದೂರ್ ಅಮ್ಮಾಳ್‌ರವರ ಆಚಾರ್ಯರು ಎಂಗಳಾಳ್ವಾರ್ ಎಂಬ ಪ್ರಸಿದ್ಧರು. ಹೀಗೆ ಕಿಡಾಂಬಿ ಅಪ್ಪುಳ್ಳಾರ್ರರವರು ಶ್ರೀಯತಿವರ್ಯರು ದಯಪಾಲಿಸಿದ ರಹಸ್ಯಾರ್ಥಗಳನ್ನು ಎರಡು ವಿಧವಾಗಿ ಗ್ರಹಿಸಿ ಐಕ ಕಂಠ್ಯವನ್ನು ಹೊಂದಿದುದರಿಂದ, ಅವುಗಳಲ್ಲಿ ಕೆಲವು ಖಿಲವಾದವು ವ್ಯತ್ಯಸ್ತವಾದುವೆಂದು ಸಂದೇಹಪಡಲು ಕಾರಣವಿಲ್ಲವು. ಇಂತಹ ಸುಸಮಯದಲ್ಲಿ ತಾವು ತಮ್ಮ ಆಚಾರ್ಯರಿಂದ ಗ್ರಹಿಸಿದುದನ್ನು ಬರೆದಿಡದಿದ್ದರೆ, ಕೆಲವು ಮರೆತು ಹೋಗುವ ಮತ್ತು ವ್ಯತ್ಯಸ್ತವಾಗುವ ಸಂಭವ ಉಂಟಾದುದರಿಂದ ತಾವು ಹೇಗೆ ಉಪದೇಶಸಲ್ಪಟ್ಟರೋ ಹಾಗೆಯೇ ನ್ಯೂನಾಧಿಕಗಳಿಲ್ಲದೆ, ಗಿಳಿಯು ಹೇಗೆ ಕೇಳಿದುದನ್ನು ಮಾತ್ರವೇ ಉಚ್ಚರಿಸುತ್ತದೋ ಹಾಗೆಯೇ ಬರೆದಿರುತ್ತೇನೆ ಎಂದು ತಿಳಿಸಿರುತ್ತಾರೆ. (೨) ಹೀಗೆ ಆಚಾರ್ಯಕೃಪೆ ಮಾತ್ರವೇ ಸಾಲದು, ಭಗವತ್ಕೃಪೆಯೂ ಬೇಕು ಎಂದು ಹೇಳಿರುತ್ತಾರೆ. ಶ್ರೀ ಹಯಗ್ರೀವಾನುಗ್ರಹವು ತಮಗುಂಟೆಂದು ಹೇಳಿರುತ್ತಾರೆ. ಹೀಗೆ ಹಯಗ್ರೀವ ಕೃಪೆಯ ಕೃತಜ್ಞತೆಗಾಗಿಯೇ ಹಯಗ್ರೀವ

**ಏತದ್ಗ್ರಂಥನಿರ್ಮಾಣೇ ಸಾಂಪ್ರದಾಯಿಕಮಪ್ಯಸ್ತೀತಿ ಪ್ರಥಮಂಥಃ ದೃಷ್ಟಾಂತೇನ ಆಳ್ವಾರಾಣಾಂ ಪ್ರವೃತ್ತ್ಯಾ ಭಗವದನುಮತಿತ್ವಂ ದರ್ಶಯತಿ.**

---

ಸ್ತೋತ್ರವನ್ನು ಬರೆದು, ಹಯಗ್ರೀವರನ್ನು ಧ್ಯಾನಾರಾಧನೆಗಳಿಂದ ಪ್ರೀತರಾಗುವಂತೆ ಮಾಡಿರುತ್ತಾರೆಂಬ ಭಾವವು ತೋರಿ ಬರುತ್ತದೆ. ಭಗವಂತನು ತನ್ನ ಭಕ್ತರಿಗೆ ಬೇಕಾದ ಜ್ಞಾನ ದೀಪ್ತಿಯನ್ನು ಕೊಡುವನೆಂದು " **ದದಾಮಿ ಬುದ್ಧಿಯೋಗಂ ತಂ ಯೇನ ಮಾ ಮುಪಯಾನ್ತಿ ತೇ** " (ಗೀ. ೧೦. ೧೦) ಎಂಬಲ್ಲಿ ಹೇಳಿರುವ ಭಾವವು " **ಪೆರುಮಾಳ್ ತೆಳಿಯ ಪ್ರಕಾಶಪ್ಪಿತ್ತು** " ಎಂಬಲ್ಲಿ ಸೂಚಿತವು. ಆತನ ಅನುಗ್ರಹವಿಲ್ಲದಿದ್ದರೆ ಈ ಗ್ರಂಥ ತಾನೇ ಎಲ್ಲಿಯದು ? ಎಂದು ಹೇಳಿದಂತಾಯಿತು.

ಈ ಗ್ರಂಥ ರಚನೆಗೆ ಇನ್ನೊಂದು ಮುಖ್ಯ ಕಾರಣವನ್ನೂ ಸೂಚಿಸಿರುತ್ತಾರೆ- ಹೇಗೆಂದರೆ **ವೇದಾನ್ತೋದಯನ ಸಂಪ್ರದಾಯಮಾನ ಮಡಪ್ಪಳ್ಳಿವಾರ್ತ್ತೈಯೈ ಆಚಾರ್ಯ ಪಕ್ಕಲಿಲೇ ಕೇಟ್ಟು** ಎಂದು ಪ್ರಯೋಗಿಸಿರುವುದರಿಂದ ಕೆಲವರು ತಮ್ಮ ಕಾಲದಲ್ಲೇ ಈ ಸಂಪ್ರದಾಯ ಸಿದ್ಧಾನ್ತೋಕ್ತಿಗೆ ವಿರೋಧವಾಗಿ ಅರ್ಥಗಳನ್ನು ಹೇಳಿದುದು ತಮಗೆ ಸರಿಹೋಗದೆ, ಯಥಾರ್ಥಗಳ ಸ್ಥಿರೀಕರಣಕ್ಕಾಗಿಯೂ ತಾವು ಬರೆಯಬೇಕಾಗಿಯೂ ಬಂತೆಂಬ ಭಾವವೂ ಸೂಚಿತವು.

ಆದುದರಿಂದ ಸಂಪ್ರದಾಯಕ್ಕೆ ವಿರುದ್ಧವಾಗಿ ಈ ಗ್ರಂಥವು ಬರೆಯಲ್ಪಟ್ಟಿತೆಂದು ಭಾವಿಸಕೂಡದು. ದಾಸನು ಈ ಗ್ರಂಥವನ್ನು ಪರಿವರ್ತನೆ ಮಾಡಿ, ಎಲ್ಲರಿಗೂ ಈ ರಹಸ್ಯಾರ್ಥಗಳೆಲ್ಲಾ ತಿಳಿಯಲಿ ಎಂದು ಉದ್ದೇಶಿಸಿ ಬರೆದಿರುವುದು ಸಂಪ್ರದಾಯ ವಿರುದ್ಧ ಪ್ರವೃತ್ತಿ ಎಂದು ಮಹನೀಯರು ಭಾವಿಸತಕ್ಕದ್ದಲ್ಲವು. ರಾಜಗುರುಗಳಾದ ಶ್ರೀ ವರಕಾಲ ಯತೀಂದ್ರರೂ ದಾಸನನ್ನು ಆವಶ್ಯಕವಾಗಿ ಬರೆಯತಕ್ಕದ್ದೆಂದು ಹೇಳಿ ಈ ಅಭಿಪ್ರಾಯಗಳನ್ನೇ ಸೂಚಿಸಿ ಆಜ್ಞಾಪಿಸಿದುದರಿಂದಲೂ ಬರೆದಿರುತ್ತೇನೆ. ಪರಮ ನಿಶ್ಶ್ರೇಯಸ್ಸಿಗೆ ಸಾಧನಭೂತಗಳಾಗಿ ಶಾಸ್ತ್ರವಿಹಿತಗಳಾಗಿ ಸತ್ಯವಾಗಿ ಪ್ರಿಯವಾಗಿರುವ ಶ್ರೀಮದ್ಭಗವದ್ಗೀತೆಯಲ್ಲೂ ಕೆಲವರು ಶ್ರೀಮಹರ್ಷಿಯ ಗೂಢವಾದ ಅಭಿಪ್ರಾಯಗಳಿಗೂ, ಮತ್ತು ಶ್ರೀ ಯತಿರಾಜರ ಯಥಾರ್ಥವಾದ ದಿವ್ಯ ಭಾಷ್ಯಕ್ಕೂ ವಿರುದ್ಧವಾದ ಅಭಿಪ್ರಾಯಗಳನ್ನು ಹೇಳಿದುದನ್ನೆಲ್ಲಾ ಕೇಳಿ, ನಮ್ಮ ಸಿದ್ಧಾಂತ ಸ್ಥಾಪಕರ ಸಿದ್ಧಾಂತ ನಿರ್ಣಯಗಳನ್ನು ಸ್ಥಿರಪಡಿಸುವುದಕ್ಕಾಗಿ ಅವುಗಳನ್ನು ಪರಿವರ್ತನೆಯನ್ನೂ ಎಲ್ಲರಿಗೂ ವೇದ್ಯವಾಗುವ ಹಾಗೆ ಶ್ರೀನಿವಾಸಕೃಪಯಾ ಬರೆದಿರುತ್ತೇನೆ.

ಈ ಗ್ರಂಥ **ನಿರ್ಮಾಣದಲ್ಲೂ ಸಂಪ್ರದಾಯವೂ ಉಂಟು. ಏಕೆಂದರೆ ಪೂರ್ವಿಕರಾದ ಆಳ್ವಾರರು ಹೀಗೆ ಗ್ರಂಥನಿರ್ಮಾಣ ಮಾಡಿರುತ್ತಾರೆ. ಅದುದರಿಂದ ಇದಕ್ಕೆ ಭಗವದನುಮತಿಯೂ ಉಂಟು.** ಆಗಲಿ, ಪೂರ್ವಾ

**ಪಾಟ್ಟುಕ್ಕುರಿಯ ಪಳ್ಳೈಯವರ್ ಮೂವರ್ ಪ್ಪನ್ದೊರುಕಾಲ್ ।**
**ಮಾಟ್ಟುಕ್ಕರುಡರು ಮಾಯನ್ ಮಲಿನ್ದ ವರುತ್ತುದಲಾಲ್**

---

ಚಾರ್ಯರುಗಳ ಕೃಪೆಯಿಂದ ಶ್ರೀ ಹಯಗ್ರೀವರು ತಮ್ಮ ಹೃದಯ ಗುಹೆಯಲ್ಲಿ ನಿಂತು ಈ ತತ್ತ್ವಾರ್ಥಗಳನ್ನೆಲ್ಲಾ ಉಪದೇಶಿಸಿದರೆಂದು ಹೇಳಲ್ಪಟ್ಟಿತಲ್ಲಾ; ಇದರಲ್ಲಿ ವಿಶ್ವಾಸ ವನ್ನು ಇಡಬಹುದೋ? ಏನೋ ಒಂದೊಂದು ಕಾಲದಲ್ಲಿ ಮಹರ್ಷಿಗಳಾದ ವ್ಯಾಸಾದಿಗಳಲ್ಲಿ ಅನುಪ್ರವೇಶ ಮಾಡಿ ಇಂತಹ ತತ್ತ್ವಾರ್ಥಗಳನ್ನು ಉಪದೇಶಿಸಿದರೆಂಬುದನ್ನು ನಂಬಬಹುದು. ಅವುಗಳೆಲ್ಲಾ ವೇದಭಾಷೆಯಾದ ಸಂಸ್ಕೃತ ಭಾಷೆಯಲ್ಲಿರುವುದರಿಂದ ಗ್ರಾಹ್ಯವು; ತಾವು ಬರೆದಿರುವುದು ದ್ರಾವಿಡ ಭಾಷೆಯಲ್ಲಿ. ಅಂತಹ ಗ್ರಂಥವು ಹೇಗೆ ವಿಶ್ವಾಸಾರ್ಹವು? ಎಂದರೆ ಶ್ರೀನಿವಾಸನ ಘಂಟಾಭಿಮಾನ ದೇವತೆಯೇ ಶ್ರೀನಿವಾಸನ ಕೃಪೆಯಿಂದ ಶ್ರೀ ದೇಶಿಕರಾಗಿ ಅವತರಿಸಿರುವುದರಿಂದಲೂ, ಪ್ರಥಮದಲ್ಲಿ ಮೂರು ಆಳ್ವಾರುಗಳಿಗೆ ಅನುಗ್ರಹವುಂಟಾಗಿ ದ್ರಾವಿಡ ಗ್ರಂಥ ಮುಖೇನ ಉಪದೇಶಿಸಿದ ಹಾಗೆ ತಮಗೂ ಅನುಗ್ರಹ ವಿಶೇಷವುಂಟೆಂಬುದು ನಿಸ್ಸಂಸಂಶಯವೇ ಎಂದು ಹೇಳಿ ಮುಗಿಸುತ್ತಾರೆ. ಈಗಲೂ ಅಜ್ಞಾನಾಂಧಕಾರವು ತೊಲಗಲೆಂದು ಪರಮ ಕೃಪಯಾ ಶ್ರೀ ಭಗವಂತನು ಅನುಗ್ರಹಿಸಿ ಬರೆಸಿದ ದ್ರಾವಿಡ ಗ್ರಂಥವು ಇದು.

ಆದುದರಿಂದ ಸಂಪ್ರದಾಯವು ಎರಡು ವಿಧವು. ಗುರುಶಿಷ್ಯ ಕ್ರಮದಲ್ಲಿ ಸದುಪದೇಶವೂ ಸಂಪ್ರದಾಯವು ಹೇಗೋ, ಹಾಗೆಯೇ ಸದ್ಗ್ರಂಥವನ್ನು ರಚಿಸಿ, ಶ್ರದ್ಧಾನ್ವಿತರಿಗೆ ಅನುಕೂಲ ಮಾಡಿ ಸದುಪದೇಶವು ದೊರೆತು ಅಜ್ಞಾನಾಂಧಕಾರವು ತೊಲದು ಹೋಗಿ ಮೋಕ್ಷ ಪ್ರಾಪ್ತಿಗೆ ಸಹಾಯ ಮಾಡುವುದೂ ಕೂಡ ಸತ್ಸಂಪ್ರದಾಯವೇ. ಒಂದು ಇನ್ನೊಂದಕ್ಕೆ ವಿಘಾತವೆಂಬ ಭಾವನೆಯು ಕೂಡದೆಂಬುದು ಮುಂದಿನ ಪಾಶುರದ ಮುಖ್ಯಾಭಿಪ್ರಾಯವು.

**ಅರ್ಥ**- ಅಧಿಕಾರಾದಿ ಶ್ಲೋಕದಲ್ಲಿ ರೂಪಕ ಮಾಡಿ ಹೇಳಿದ **ಸಂಪ್ರದಾಯ ಪ್ರದೀಪಮ್** ಎಂದು ಹೇಳಿದ ಹಾಗೆ ಮೊದಲಿನ ಮೂರು ಆಳ್ವಾರುಗಳು ದಯಪಾಲಿಸಿದ ಮೂರು ಅಂದಾದಿಗಳೂ **ಸಂಪ್ರದಾಯ ದೀಪವೇ** ಎಂದು ರೂಪಕ ಮಾಡಿ ಹೇಳುತ್ತಾರೆ. **ಪಾಟ್ಟುಕ್ಕುರಿಯ**-ಭಗವಂತನನ್ನು ಸ್ತೋತ್ರ ಮಾಡಲು ಯೋಗ್ಯರಾದ, ಪಾಟ್ಟು ಎಂಬುದರಿಂದ ನಿರವದ್ಯಗಳಾಗಿ ದಿವ್ಯಗಳಾದ ತಮಿಳ್ ಗಾಥೆಗಳು ಸೂಚಿತವು; ಇಂತಹ ಅಂದಾದಿಗಳಾದ ಗ್ರಂಥಗಳನ್ನು ರಚಿಸಲು ಯೋಗ್ಯರು ಎಂಬ ಭಾವವು; "**ತದ್ವಿಪ್ರಾಸೋ ವಿಪನ್ಯವೋ ಜಾಗೃವಾಂಸಃ ಸಮಿಂಧತೇ**" ಎಂಬಲ್ಲಿ ಮೇಧಾವಿಗಳಾಗಿ ಯಾವಾಗಲೂ ಅಸ್ಖಲಿತ ಜ್ಞಾನವುಳ್ಳ ನಿತ್ಯಸೂರಿಗಳು ಪರಮಾತ್ಮನನ್ನು ಸ್ತುತಿಸಿ ಹೇಗೆ ಆನಂದಿಸುವರೋ, ಹಾಗೆಯೆ ಈ ಮೂರು ಆಳ್ವಾರುಗಳು ಮುದಿಲ್ ಇರಂಡು ಮೂನ್ರಾ ತಿರುವಂದಾದಿಗಳಿಂದ ಭಗವಂತನನ್ನು

**ನಾಟ್ಟುಕ್ಕಿರುಳ್ ಶೆಕ ನಾನ್ಮರೈಯನ್ದಿ ನಡೈ ವಿಳಙ್ಗ**
**ವೀಟ್ಟುಕಿಡೈಕಳಿಕ್ಕೆ ವೆಳಿಕಾಟ್ಟು ಮಮ್ಮೆಯ್ವಿಳಕ್ಕೇ || ೫೦ ||**

---

ಸ್ತುತಿಸಲು ಅರ್ಹರು ಎಂಬ ಭಾವವು; **ಅರ್ಹರು** ಎಂದು ಹೇಳಿದುದರಿಂದ ಅವರಿಂದ ಭಗವಂತನೂ ನಿತ್ಯ ಸೂರಿಗಳಿಂದ ನಿತ್ಯವಿಭೂತಿಯಲ್ಲಿ ಪ್ರೀತನಾದ ಹಾಗೆ ಈ ಲೀಲಾ ವಿಭೂತಿಯಲ್ಲೂ ಈ ಆಳ್ವಾರುಗಳ ಸ್ತೋತ್ರದಿಂದ ಪ್ರೀತನಾಗಿರುವ ಹಾಗೆ ತಮ್ಮ ಸ್ತುತಿಯಿಂದಲೂ ಪ್ರೀತನಾಗಿರುವುದೆಂಬುದು ಸೂಚಿತವು. **ಪಳ್ಳೈಯವರ್**-ಪೂರ್ವ ಕಾಲದ ಎಂದರೆ ದ್ವಾಪರಯುಗದಲ್ಲಿ ಒಂದೊಂದು ದಿನ ವ್ಯತ್ಯಾಸದಿಂದ ಅಯೋನಿಜ ರಾಗಿ ಶ್ರಿಯಃಪತಿಯ ಶಂಖ, ಗದಾ, ಖಡ್ಗಾಭಿಮಾನನಿತ್ಯ ಸೂರಿಗಳು, ಕಮಲ, ಮಾಧವಿ, ಕನ್ನೈದಿಲೆ ಹೂವುಗಳಲ್ಲಿ ಅವತರಿಸಿದ ಪ್ರಥಮ ಆಳ್ವಾರ್‌ಗಳು ಎಂಬ **ಪಳ್ಳೈಯವರ್** ಎಂಬ ಪ್ರಯೋಗವು, "**ಯತ್ರಪೂರ್ವೇಸಾಧ್ಯಾಸ್ಸಂತಿದೇವಾಃ**" ಎಂಬಲ್ಲಿ ಹೇಳಿರುವ ಹಾಗೆ ನಿತ್ಯಸೂರಿಗಳ ಹಾಗೆ ಇರುವವರು ಅಥವಾ ನಿತ್ಯಸೂರಿಗಳ ಅವತಾರಿಗಳು ಈ ಮೂವರು ಆಳ್ವಾರುಗಳು ಎಂಬುದು ಹೇಳಲ್ಪಟ್ಟಿತು. ಇಂತಹ **ಮೂವರೈ ಪೊಯ್‌ಗೈಯಾಳ್ವಾರ್, ಪೂದತ್ತಾಳ್ವಾರ್, ಪೇಯಾಳ್ವಾರ್** ಎಂಬ ಮೂವರು, **ಪಣ್ಡೊರುಕಾಲ್**-ಹಿಂದಿನ ಯುಗದ ಒಂದು ಕಾಲದಲ್ಲಿ, **ಮಾಟ್ಟುಕ್ಕು**-ಮಾಟ್ಟು ಎಂದರೆ ಧನವು, ಸರ್ವೇಶ್ವರನಿಗೆ ಆತನ ವಿಭೂತಿಗೆ ಸೇರಿದ ದಿವ್ಯಚೇತನರೇ ಧನವಾದುದರಿಂದ ಅಂತಹ ಚೇತನರಿಗೆ **ಅರುಡರುಂ-ಅರುಳ್ ತರುಂ,** ವಿಶೇಷ ಕೃಪೆಯನ್ನೆಸಗುವ, **ಮಾಯನ್**-ಆಶ್ಚರ್ಯಚೇಷ್ಟಿತನಾದ ಶ್ರೀಕೃಷ್ಣನು, ಈ ಮೂರು ಆಳ್ವಾರ್‌ಗಳಿಗೂ ತಿರುಕ್ಕೋವಿಲೂರ್‌ನಲ್ಲಿ ಶ್ರೀಕೃಷ್ಣ ಭಗವಾನರವರು ಪ್ರತ್ಯಕ್ಷರಾದರೆಂಬ ಪ್ರತೀತಿಯುಂಟು, **ಮಲಿನ್ದು**-ಅಧಿಕವಾಗಿ, **ವರುತ್ತುದಲಾಲ್**-ಮನಸ್ಸಿಗೆ ಪ್ರಯಾಸವನ್ನು ಎಂದರೆ ಪರಿತಾಪವನ್ನುಂಟು ಮಾಡಿದುದರಿಂದ, ಈ ಹೇಯ ಸಂಸಾರದಲ್ಲಿ ಬಿದ್ದು ನರಳುತ್ತಾರೆಯೇ, ಇವರ ಜ್ಞಾನಾಂಧಕಾರವನ್ನು ಹೋಗಲಾಡಿಸಿ ಸಂಸಾರದಿಂದ ಬಿಡಿಸಿ ಮೋಕ್ಷವನ್ನು ಹೊಂದುವ ಹಾಗೆ ಮಾಡಬೇಕೆಂಬ ಪರಿತಾಪವನ್ನು ಹೊಂದಿ ಎಂಬರ್ಥವು. ಅಂತಹ ಪರಿತಾಪವು ಯಾವುದೆಂಬುದನ್ನು ತಿಳಿಸುತ್ತಾರೆ: **ನಾಟ್ಟುಕ್ಕಿರುಳ**-ದೇಶದಲ್ಲಿರುವ ಅಜ್ಞಾನವು, ನಶ್ವರವಾದ ಐಹಿಕವೇ ಸಮಸ್ತವು ಎಂಬ ಅಜ್ಞಾನವು, **ಶೆಕ**-ನಾಶವಾಗುವ ಹಾಗೆ, **ನಾನ್ಮರೈಯನ್ದಿ**-ನಾಲ್ಕು ವೇದಗಳ ಕೊನೆಯಲ್ಲಿ ಹೇಳಲ್ಪಟ್ಟು ವೇದಾಂತವೆನಿಸುವ ಉಪನಿಷತ್ತುಗಳಲ್ಲಿ ಉಪಪಾದಿಸಲ್ಪಟ್ಟ, **ನಡೈ**-ಮಾರ್ಗಗಳು, ಸಾಧ್ಯೋಪಾಯಗಳಾದ, ಭಕ್ತಿಪ್ರಪತ್ತಿ ಮಾರ್ಗಗಳು, **ವಿಳಙ್ಗ**-ಪ್ರಕಾಶಿಸುವ ಹಾಗೆ, **ವೀಟ್ಟುಕ್ಕು ಇಡೈಕಳಿಕ್ಕೇ**-ಒಂದು ಮನೆಯ ಅಂಗಳದಲ್ಲಿ ಉಂಟಾದ, ಎಂದರೆ ತಿರುಕ್ಕೋವಿಲೂರೆಂಬ ಊರಿನ ಒಂದು ಗೃಹದ ಅಂಗಳದಲ್ಲಿ ಮೂವರೂ ಸೇರಿ ಸ್ತೋತ್ರ ಮಾಡಿದುದರಿಂದ ಪ್ರೀತನಾದ ಪರಮಪುರುಷನು ಅವರ ಮಧ್ಯದಲ್ಲಿ ಬಂದು ನಿಂತದ್ದರಿಂದ ಉಂಟಾದ

ಎಂಬರ್ಥವು, **ವೆಳಿಕ್ಕಾಟ್ಟುಂ**-ಪರಮ ಶ್ರೇಯಸ್ಸಿನ ರಾಜಮಾರ್ಗವನ್ನು ವ್ಯಕ್ತವಾಗಿ ತೋರಿಸುವ, **ಇವ್ಮೈಯುಳ್ ವಿಳಕ್ಕೇ**-ಈ ಮಹತ್ತಾದ ಸಂಪ್ರದಾಯ ದೀಪವೇ ಎಂದರೆ ಪರಮಪುರುಷನು ಅವರನ್ನು ಪ್ರೇರಿಸಿ ಮಹತ್ತಾದ ಕರುಣೆಯಿಂದ ರಚಿಸಿದ ಮುದಲ್‌ತಿರುವಂದಾದಿ, ಇರಂಡಾಂತಿರುವಂದಾದಿ, ಮೂನ್ರಾಂತಿರುವಂದಾದಿ ಎಂಬ ಹೆಸರಿನಲ್ಲಿ ಮಹತ್ತಾಗಿ ಬೆಳಗುವ ಸಂಪ್ರದಾಯ ದೀಪವೇ, ಎಂಬ ಭಾವವು. ಈ ಮೂರು ಆಳ್ವಾರುಗಳ ಸಂಗ್ರಹಚರಿತ್ರೆಯಾಗಿ ದಾಸನು ಬರೆದ ಗುರುಪರಂಪರಾಸಾರದ ೧೯ನೆಯ ಪುಟವನ್ನು ಪರಾಂಬರಿಸಿ.

ಮುಖ್ಯ ತಾತ್ಪರ್ಯವೇನೆಂದರೆ ಈ ಮೂರು ಆಳ್ವಾರುಗಳೂ ತಿರುವಂದಾದಿ ಯನ್ನು ಲೋಕಕ್ಕೆಲ್ಲಾ ಹಿತವುಂಟಾಗುವ ಹಾಗೆ ದ್ರಾವಿಡ ಭಾಷೆಯಲ್ಲಿ ತನ್ನನ್ನು ಹೊಂದುವ ಮಾರ್ಗವನ್ನು ತಾನೇ ಅವರುಗಳ ಮಧ್ಯೆ ನಿಂತು ಬರೆಯುವ ಹಾಗೆ ಮಾಡಿ, ಶಿಷ್ಯಾದಿಗಳಿಗೆ ಅದನ್ನೇ ಉಪದೇಶಿಸುವ ಹಾಗೆ ಪರಮಪುರುಷನೇ ಮಾಡಿಸಿ ದುದರಿಂದ ಈ ಪರಿಯ ದ್ರಾವಿಡ ಗ್ರಂಥ ಮೂಲಕ ಉಪದೇಶವೂ ಪರಮಪುರುಷನಿಗೆ ಇಷ್ಟವಾದ ಸಂಪ್ರದಾಯವೇ. ಇದನ್ನನುಸರಿಸಿಯೇ ತಾವೂ ಕೂಡ ನಾಥಮುನಿ, ಯಾಮುನ ಮುನಿ, ರಾಮಾನುಜ ಮುನಿಗಳಿಂದ ಸಾಂಪ್ರದಾಯಕವಾಗಿಯೂ ಗ್ರಂಥ ಮೂಲಕವಾಗಿಯೂ ಬಂದುದನ್ನು ಖಿಲವಾಗದ ಹಾಗೂ, ವ್ಯತ್ಯಾಸ ಹೊಂದದ ಹಾಗೂ, ಹಯಗ್ರೀವ ಪ್ರೇರಣಯಾ ರಚಿಸಿರುವುದು ಸಾಂಪ್ರದಾಯಕವೇ. ಉಪದೇಶ ರೂಪವಾಗಿಯಾಗಲೀ ಗ್ರಂಥಮೂಲಕವಾಗಲಿ ಶಾಸ್ತ್ರಸಮ್ಮತವಾದ ತತ್ವಹಿತ ಪುರು ಷಾರ್ಥ ಜ್ಞಾನರೂಪ ಬೆಳಕಿನಿಂದ ಶಿಷ್ಯವರ್ಗದ ಅಜ್ಞಾನಾಂಧಕಾರವನ್ನು ಹೋಗಲಾ ಡಿಸುವುದು ಸತ್ಸಂಪ್ರದಾಯವೇ. ಇದರಿಂದ ಪರಸ್ಪರ ವ್ಯಾಘಾತವೇನೂ ಇಲ್ಲವೆಂ ಬುದು. ಸ್ವಾಮಿ ದೇಶಿಕರವರು ಈ ಮಹತ್ತಾದ ಉಪದೇಶವನ್ನೆಲ್ಲಾ ತಮಿಳ್ ಭಾಷೆಯಲ್ಲಿ ಮಾಡಿದರು. ಇದು ಏತಕ್ಕೆಂದರೆ ಅಲ್ಲಿನ ಶ್ರೀವೈಷ್ಣವರೆಲ್ಲಾ ತಮಿಳ್ ಭಾಷೆಯನ್ನು ತಿಳಿದವರಾದುದರಿಂದ. ಹಾಗೆಯೇ ಇಲ್ಲಿನವರೆಲ್ಲಾ ಕನ್ನಡ ಭಾಷೆ ಯನ್ನು ತಿಳಿದವರಾದುದರಿಂದ ಅಂತಹ ಸಂಪ್ರದಾಯ ರೀತ್ಯಾ ಬಂದ ಅಮೋಘೋ ಪದೇಶವೆಂಬ ಬೆಳಕನ್ನು ದಾಸನೂ ಇಲ್ಲಿಗೆ ಕನ್ನಡಿಗರಿಗೆ ಅನುಕೂಲವಾಗುವಂತೆ ತಂದು ಚೆನ್ನಾಗಿ ಪ್ರಕಾಶಿಸುವಂತೆ ಮಾಡಿ ಅಜ್ಞಾನಾಂಧಕಾರವು ತೊಲಗುವ ಹಾಗೆ ಮಾಡಿರುತ್ತೇನಾದುದರಿಂದ ಇದೂ ಸಹ ಸಂಪ್ರದಾಯಕ್ಕೆ ಅನುಕೂಲವೆಂದೇ ಭಾವಿಸ ತಕ್ಕದ್ದು.

ಉಪದೇಶಕ್ಕೆ ಸಚ್ಛಿಷ್ಯರುಗಳು ಸಿಕ್ಕಿದರೆ ಅವರುಗಳಿಗೆ ಶ್ರೀನಾಥ ಮುನಿ, ಯಾಮುನ ಮುನಿ, ಶ್ರೀರಾಮಾನುಜ ಮುನಿಗಳ ಮೂಲಕ ಬಂದ ಸತ್ಸಂಪ್ರದಾಯಾ ರ್ಥಗಳನ್ನು ಪ್ರತ್ಯಕ್ಷದಲ್ಲಿ ಉಪದೇಶಿಸತಕ್ಕದ್ದು ಸತ್ಸಂಪ್ರದಾಯವೇ. ಹಾಗೆ ಉಪ ದೇಶಕ್ಕೆ ಪ್ರತ್ಯಕ್ಷದಲ್ಲಿ ಶಿಷ್ಯರು ಒದಗದಿದ್ದರೆ, ಹಿಂದಿನ ಆಳ್ವಾರ್‌ಗಳು ಅನುಷ್ಠಿಸಿದ

## ಸಂಪ್ರದಾಯ ರೀತ್ಯಾ ಸಚ್ಛಿಷ್ಯ ಶಿಕ್ಷಣಂ ನ ಕೇವಲಂ ತದ್ರಕ್ಷಣಮ್ ಅಪಿತು ಆಚಾರ್ಯಸ್ಯ ಸ್ವರಕ್ಷಣ ಮಪೀತ್ಯಾಹ

**ನಿರವಧಿದಯಾ ದಿವ್ಯೋದನ್ವತ್ತರಂಗ ನಿರಙ್ಕುಶೈ**
**ರ್ನಿಯಮಯತಿ ಯಃ ಶಿಷ್ಯಾನ್ ಶಿಕ್ಷಾಕ್ರಮೈರ್ಗುಣಸಂಕ್ರಮೈಃ ।**

---

ಸಂಪತ್ತು, **ಪೆರುಗಿ**–ಅಭಿವೃದ್ಧಿಯಾಗಿ, ಇದು **ಅನಘಗುಣದಶಾಯಾಂ** ಎಂಬುದರ ಅರ್ಥವು. **ಶಿರಸ್ಥಸರ್ ಪಾಲ್**-ಶಮದಮಾದಿ ಗುಣಗಳಿಂದ ಪ್ರಸಿದ್ಧರಾದ ಶಿಷ್ಯರುಗಳ ಪಕ್ಷದಲ್ಲಿ, ಹೀಗೆ ಸಚ್ಛಿಷ್ಯರು ಸ್ಥಾಪಿಸಲ್ಪಟ್ಟಿರುವುದರಿಂದ, "**ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸಾ।**" ಎಂಬ ಗೀತಾ (೩-೩೦) ಶ್ಲೋಕಾರ್ಥವು ಇಲ್ಲಿ ಸೂಚಿತವು. ಇಲ್ಲಿ ನಿತ್ಯನೈಮಿತ್ತಿಕ ಕರ್ಮಗಳ ಅನುಷ್ಠಾನದಲ್ಲಿ, ಸೂರ್ಯಾಗ್ನಿ ಮೊದಲಾದವರು ಆರಾಧಿಸಲ್ಪಡುವದಿಲ್ಲವು. "**ಸರ್ವಭೂತಾಂತರಾತ್ಮಾನಂ ವಿಷ್ಣುಮೇವ ಯಜಂತಿ ತೇ**" (ಗೀ ) "**ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ**" ಎಂಬ ಭಗವದ್ವಾಕ್ಯದ ಹಾಗೆ ಭಗವಂತನೇ ಆರಾಧಿಸಲ್ಪಡುವನಾದುದರಿಂದ ಆತನನ್ನೇ ಸರ್ವ ಕರ್ಮಗಳ ಕರ್ತೃತ್ವ ಮಮತಾ ಫಲಗಳನ್ನೆಲ್ಲಾ ಸಮರ್ಪಿಸಿ ತ್ಯಾಗವನ್ನು ಮಾಡುವವರು ಈ **ಶಿರಸ್ಥಸರ್** ಎಂದು ಹೇಳಿದಂತಾಯಿತು. **ಅರಳುತ್ತ** ವಿಸ್ತೃತಯಿನಾಲ್-ಕೃಪೆಯಿಂದ ಕೂಡಿದ ಪ್ರೀತಿಯಿಂದ ಇದು **ಆಹಿತಸ್ನೇಹಂ** ಎಂಬುದರರ್ಥವು. ಇದರಿಂದ "**ಕೃಪಯಾ ನಿಸ್ಪೃಹೋವದೇತ್**" ಎಂಬುದು ಸ್ಮೃತವು. **ಅಳಿಯಾವಿಳಕ್ಕು**-ಶಾಶ್ವತವಾಗಿರುವ ದೀಪವನ್ನು, **ಏತ್ತಿನರ್**-ಹಚ್ಚಿದವರಲ್ಲವೇ ಎಂದರೆ ಜ್ಞಾನಪ್ರವರ್ತನೆಯನ್ನು ಮಾಡಿದವರಲ್ಲವೇ. (ಇದು **ಪ್ರದಿಶತಿ ಸಂಪ್ರದಾಯ ಪ್ರದೀಪಂ**; ಎಂಬುದರರ್ಥವು ಹೀಗೆ ಈ ಪಾಶುರವು ಪ್ರಥಮ ಶ್ಲೋಕಾರ್ಥವನ್ನೇ ಉಪಪಾದಿಸುತ್ತದೆಯಾದುದರಿಂದ ಇದಕ್ಕೆ ಬೇರೆ ಉಪಪಾದನೆಯು ಅನಾವಶ್ಯಕವು. **ಮುರುಳತ್ತದೇಶಿಕರೇ** ಆಚಾರ್ಯಸ್ಥಾನದಲ್ಲಿದ್ದು ಉಪದೇಶಿಸಲು ಯೋಗ್ಯರೇ ವಿನಾ, ಉಪದೇಶಿಸುತ್ತೇನೆಂದು ಏನೂ ಶಾಸ್ತ್ರಜ್ಞಾನವಿಲ್ಲದೆ ಅಕ್ಷರ ಕೊಡುತ್ತೇನೆಂದು ಬಂದವರೆಲ್ಲಾ ಆಚಾರ್ಯಸ್ಥಾನಕ್ಕೆ ಯೋಗ್ಯರೆಂದು ಭಾವಿಸತಕ್ಕದ್ದಲ್ಲವು. ಅವರುಗಳ ಅಭಿಪ್ರಾಯವು ಸರಿಯಾದುದಲ್ಲವು; ಅವರು ಎಂತಹವರೆಂದರೆ ಮರುಳತ್ತು ದೇಶಿಕರಲ್ಲವು, ಅವರು ಮರುಳ್ ಯುಕ್ತ ದೇಶಿಕರು-ಅಜ್ಞಾನದಿಂದ ಕೂಡಿದ ದೇಶಿಕರು. ಆಚಾರ್ಯರು ಎಂತಹವರಿಗೆ ಈ ಜ್ಞಾನದೀಪವನ್ನು ಪ್ರದರ್ಶಿಸಬೇಕೆಂದರೆ, **ಶಿರಸ್ಥರ್ ಪಾಲ್**-ಪ್ರಸಿದ್ಧರಾದ ಶಿಷ್ಯರಿಗೇನೇ ವಿನಾ ಎಲ್ಲರಿಗೂ ಕೊಡಕೂಡದೆಂಬ ಭಾವವು, ಹೀಗೆ ಪ್ರಸಿದ್ಧರಾದವರು ಎಂದರೆ ಭಗವದಾರಾಧನ ರೂಪ ನಿತ್ಯನೈಮಿತ್ತಿಕಾಜ್ಞಾನುಜ್ಞಾ ಕೈಂಕರ್ಯಗಳನ್ನೂ ಭಾಗವತಾರಾಧನರೂಪದಲ್ಲಿ ಆಚರಿಸುವ ಶ್ರೇಷ್ಠ ಗುಣಗಳನ್ನುಳ್ಳ ಸಚ್ಛಿಷ್ಯರು ಎಂದು ಹೇಳಲ್ಪಟ್ಟಿತು.

**ಅಚರಮಗುರೋ ರಾಜ್ಞಾಪಾರಂಪರೀ ಪರಮಾನಸೌ**
**ನ ಪರಮಿಹತಾನ್ತಲ್ಲಕ್ಷೇಣ ಸ್ವಮುಷ್ಯ ಭಿರಕ್ಷತಿ || ೭೨ ||**

---

ಹೀಗೆ ಆಚಾರ್ಯನಿಗೆ **ಸಾಂಪ್ರದಾಯಿಕವಾಗಿ ಸಚ್ಛಿಷ್ಯ ಶಿಕ್ಷಣವು ಕೇವಲ ಶಿಷ್ಯ ರಕ್ಷಣೆಯೇ ಎಂಬುದಲ್ಲವು; ಅದು ಆಚಾರ್ಯ ರಕ್ಷಣವೂ ಹೌದು ಎಂದು ಹೇಳುತ್ತಾರೆ :–**

ಈಗ ಹೇಳಿದ ಉಪದೇಶದಿಂದ ಸದಾಚಾರ್ಯನು ಸಚ್ಛಿಷ್ಯನನ್ನು ಪರೀಕ್ಷಿಸಿ ಪರಮಕೃಪೆಯಿಂದ ಯಾವ ಆಪೋಕ್ಷರಗಳೂ ಇಲ್ಲದ ಹಾಗೆ ಉಪದೇಶಿಸತಕ್ಕದ್ದು ಕರ್ತವ್ಯವೆಂದು ಹೇಳಿದರು. ಅಂತಹ ಸರಿಯಾದ ಪಾತ್ರನು ಸಿಕ್ಕುವದು ಕಷ್ಟವೆಂದು ಭಾವಿಸಿ ಸುಮ್ಮನೆ ತಟಸ್ಥನಾಗಿರಬಹುದೋ ? ಎಂದರೆ ಹಾಗಿರುವದು ಆಚಾರ್ಯನಿಗೆ ಪ್ರತ್ಯವಾಯವು ಎಂದು ಹೇಳುತ್ತಾರೆ. ಭಗವತ್ಸಂಕಲ್ಪವು ಈ ಆಚಾರ್ಯನನ್ನು ಅಂತಹ ಸ್ಥಾನದಲ್ಲಿಟ್ಟಿರುವುದು ಪ್ರತ್ಯುಪಕಾರದ ಕಾಂಕ್ಷೆಯಿಲ್ಲದೆ ಸದಾಚಾರನಿಷ್ಠನಾದ ಸಚ್ಛಿಷ್ಯನಿಗೆ ಉಪದೇಶಿಸತಕ್ಕದ್ದೆಂದಿರುವಾಗ, ಅಂತಹ ಸಂಕಲ್ಪಕ್ಕೆ ವಿರೋಧವಾಗಿ ನಡೆಯುವದು, ಆಚಾರ್ಯನ ಸ್ವರೂಪಕ್ಕೂ ಹಾನಿ ಎಂದೂ, ಭಗವತ್ಪ್ರೀಣನವನ್ನು ಸಂಪಾದಿಸಿಕೊಳ್ಳುವುದಕ್ಕೆ ಬದಲಾಗಿ ಭಗವಂತನ ಕೋಪಕ್ಕೆ ಪಾತ್ರನಾಗುವನೆಂದೂ, ಆದುದರಿಂದ ಆಚಾರ್ಯರು ಹೇಗಾದರೂ ನೋಡಿ ಸಚ್ಛಿಷ್ಯರನ್ನು ಹುಡುಕಿ, ಕೆಲವರಿಗಾದರೂ ಉಪದೇಶಿಸತಕ್ಕ ತನ್ನ ಇತಿಕರ್ತವ್ಯತಾ ರೂಪ ಸಂಪ್ರದಾಯ ಕಾಪಾಡಿ ಕೊಳ್ಳತಕ್ಕದ್ದೆಂದು ಹೇಳಿ, ಆಚಾರ್ಯಕೃತ್ಯಧಿಕಾರವನ್ನು ಸಿಗಮನ ಮಾಡುತ್ತಾರೆ. "ಪ್ರಯೋಜನಮನುದ್ದಿಶ್ಯ ನಮಂದೋಪಿ ಪ್ರವರ್ತತೇ" ಎಂದಿರುವಾಗ ಯಾವ ಆಶೋತ್ತರವನ್ನೂ ಇಡದೆ "**ಕೃಪಯಾ ನಿಸ್ಪೃಹೋವದೇತ್**" ಎಂಬ ಉಪದೇಶವು ಲೋಕದಲ್ಲಿ ನಿರರ್ಥಕವಾದುದಲ್ಲವೋ ? ಎಂದರೆ ಸಮಾಧಾನವು ಹೇಳಲ್ಪಡುತ್ತದೆ. **ಯಃ**-ಯಾವ ಆಚಾರ್ಯರು, **ನಿರವಧಿ.... ನಿರಙ್ಕುಶೈಃ, ನಿರವಧಿ**-ಅವಧಿ ಎಂದರೆ ಎಲ್ಲೆ, ಎಲ್ಲೆ ಇಲ್ಲದ, **ದಯಾ**–ಕರುಣೆಯೆಂಬ **ದಿವ್ಯೋದನ್ವತ್**-ಸರ್ವೋತ್ಕೃಷ್ಟ ಸಮುದ್ರದ, **ತರಂಗ**-ಅಲೆಗಳ ಹಾಗೆ, **ನಿರಙ್ಕುಶೈಃ**-ಯಾವ ತಡೆಗಳೂ ಇಲ್ಲದಿರುವ, **ಗುಣಸಂಕ್ರಮೈಃ**-ತತ್ವತ್ರಯ ಜ್ಞಾನ, ಅರ್ಥಪಂಚಕ ಜ್ಞಾನ, ಪರದೇವತಾ ಪಾರಮಾರ್ಥ್ಯ ಜ್ಞಾನ, ಉಪಾಯಾನುಷ್ಠಾನ ಜ್ಞಾನಗಳನ್ನು ಗ್ರಹಿಸುವುದಕ್ಕೆ ಬೇಕಾದ, "**ಅಭಯಂ ಸತ್ವಸಂಶುದ್ಧಿಃ**" (ಗೀ ) ಎಂದಾರಂಭಿಸಿ ಹೇಳಿದ ೨೬ ಆತ್ಮಗುಣಗಳನ್ನುಂಟು ಮಾಡುವುದಕ್ಕೆ, **ಸಂಕ್ರಮೈಃ-ಸಂಕ್ರಾಮತ್ಯನೇನ** ಎಂಬ ವ್ಯುತ್ಪತ್ತಿಯ ಮೂಲಕ ನೀರಿನ ಮೇಲೆ ಸಂಚಾರಕ್ಕನುಕೂಲವಾಗಿ ನಿರ್ಮಿಸಿರುವ ಸೇತುವೆ, ತೆಪ್ಪ ಮೊದಲಾದವು, ಸಮುದ್ರದಲ್ಲಿ ಕಟ್ಟಿದ ಸೇತುವಿಗೆ ಸಂಕ್ರಮವೆಂದು ಹೆಸರು, ಅನುಕೂಲ ಮಾರ್ಗಗಳಿಂದ, **ಶಿಕ್ಷಾಕ್ರಮೈಃ**–ಹೀಗೆ ನಡೆಯತಕ್ಕದ್ದು, ಹೀಗೆ ನಡೆಯಕೂಡದೆಂಬ ಶಾಸ್ತ್ರದ ವಿಧಿ ನಿಷೇಧ ಕ್ರಮಗಳಿಂದ, **ಶಿಷ್ಯಾನ್**–ಸಚ್ಛಿಷ್ಯರನ್ನು

**ನಿಯಮಯತಿ**-ಕಂಡು ಹಿಡಿದು ನಿಯಮಿಸುತ್ತಾನೋ; **ಅಸೌ**-ಅಂತಹ ಆಚಾರ್ಯರು, **ಅಚರಮಗುರೋಃ**-ಪ್ರಥಮಪರಮಾಚಾರ್ಯರಾದ ಶ್ರೀಮನ್ನಾರಾಯಣನ, **ಆಜ್ಞಾಪಾರಂಪರೀ ಪರವಾನ್ ಸನ್**-ಆಜ್ಞಾಪರಂಪರೆಗಳಿಗೆ ಪರವಶರಾಗಿಕ್ಕೊಂಡು, **ಇಹ**-ಈ ಭೂಲೋಕದಲ್ಲಿ, **ತಾನ್**-ಆ ಸಚ್ಛಿಷ್ಯರನ್ನು **ಪರಂ**-ಮಾತ್ರವೇ **ನಾಭಿರಕ್ಷತಿ**-ಕಾಪಾಡುವುದಿಲ್ಲವು; ಅವರನ್ನು ಕಾಪಾಡುವುದಲ್ಲದೆ, ಆಚಾರ್ಯರು ತಮ್ಮನ್ನು ಕಾಪಾಡಿಕೊಳ್ಳುತ್ತಾರೆಂದು ಹೇಳುತ್ತಾರೆ. **ತಲ್ಲಕ್ಷೇಣ**-ಆ ವ್ಯಾಜಮೂಲಕವಾಗಿ, **ಸ್ವಮಪಿ**-ತಮ್ಮನ್ನೂ ಕೂಡ, **ಅಭಿರಕ್ಷತಿ**-ಕಾಪಾಡಿಕೊಳ್ಳುತ್ತಾರೆ. ಅದು ಹೇಗೆ? ಎಂದರೆ ಶ್ರುತಿಯಲ್ಲಿ, ಲೋಕಗಳಿಗೆಲ್ಲಾ ಕ್ಷೇಮವನ್ನುಂಟು ಮಾಡುವ ಬ್ರಹ್ಮವಿದ್ಯೆಯು ತನ್ನೊಡನೆ ಹೋಗಕೂಡದೆಂದು ವಿಧಿಸಲ್ಪಟ್ಟಿರುತ್ತದೆ. ಸಚ್ಛಿಷ್ಯರು ಸಿಕ್ಕುವುದಿಲ್ಲವೆಂದು ಭಾವಿಸಿ, ನಮ್ಮಿಷ್ಟಕ್ಕೆ ನಾವು ಇದ್ದುಬಿಡೋಣವೆಂದು ಹೇಳಿ, ಈ ಸದುಪದೇಶವನ್ನು ಸತ್ಪಾತ್ರದಲ್ಲಿ ವಿನಿಯೋಗಿಸದೇ ಹೋದರೆ, ತಮ್ಮ ಇತಿಕರ್ತವ್ಯತೆಯನ್ನು ತ್ಯಾಗ ಮಾಡಿದುದಕ್ಕಾಗಿ ಆಚಾರ್ಯರು ಭಗವನ್ನಿಗ್ರಹಕ್ಕೆ ಗುರಿಯಾಗುವರು, ಎಂಬ ಭಾವವು.

**ಉಪಪಾದನೆಯು**-ಸದಾಚಾರ್ಯರ ದಯೆಗೂ ಇತರರ ದಯೆಗೂ ವೈಲಕ್ಷಣ್ಯ ಉಂಟೆಂದು **ನಿರವಧಿದಯಾ**-ಎಂದು ಹೇಳಲ್ಪಟ್ಟಿತು. ಸರ್ವೇಶ್ವರನ ದಯೆಯೂ ನಿರವಧಿಕವಾದುದು. ಆದುದರಿಂದ ಆಚಾರ್ಯರು ಪರಮ ಪುರುಷನಿಗೆ ಸಮವೆಂದು ಹೇಳಲ್ಪಟ್ಟಿರುತ್ತದೆ. ಅದು ಹೇಗೆ? ಹತ್ತು ವಿಧ ಉಪಕಾರಗಳನ್ನೂ ಆಚಾರ್ಯರೂ ಪರಮ ಪುರುಷನ ಹಾಗೆ ಎಸಗುವರೆಂದು ನ್ಯಾಸವಿಂಶತಿಯಲ್ಲಿ ಕೊಂಡಾಡಿರುತ್ತಾರೆ. ಈ ಗ್ರಂಥದ ೪೬ನೆಯ ಪುಟದಲ್ಲಿರುವ "**ಅಜ್ಞಾನಧ್ವಾಂತರೋಧಾತ್**" ಎಂಬ ಶ್ಲೋಕವನ್ನು ಪರಾಂಬರಿಸಿ. ಈ ದಯೆಯನ್ನು ಒಂದು ದಿವ್ಯ ಸಮುದ್ರಕ್ಕೆ ಹೋಲಿಸಿರುತ್ತಾರೆ. ಹೇಗೆ ದಿವ್ಯವೆಂದರೆ ಸಾಧಾರಣ ಸಮುದ್ರದ ತರಂಗಗಳು ತೀರದವರೆಗೂ ಬಂದು ಉಪಹತಿಯನ್ನು ಹೊಂದುತ್ತವೆ. ಇದಾದರೋ ಹಾಗಲ್ಲವು; ಪರಮ ಪುರುಷನ ದಯೆಯ ಹಾಗೆ ಯಾವ ಅಡ್ಡಿಯೂ ಇಲ್ಲವು ಎಂದು ಹೇಳಿ, ಆ ಕಾರಣದಿಂದಲೇ ಅವರ ಶಿಕ್ಷಾಕ್ರಮಗಳು ಅಪ್ರತಿಹತವಾದುವೆಂದು **ನಿರಙ್ಕುಶೈಃ** ಎಂದು ಪ್ರಯೋಗಿಸಿರುತ್ತಾರೆ. ಆಚಾರ್ಯರ ಶಿಕ್ಷಾಕ್ರಮಗಳು ಅಪ್ರತಿಹತವಾದರೂ, ಇವುಗಳು ಶಿಷ್ಯರುಗಳ ಮನಸ್ಸನ್ನು ಪ್ರವೇಶಿಸಿ, ಅವರುಗಳಲ್ಲಿ ಆತ್ಮ ಗುಣಗಳು ಉಂಟಾಗುವದು ದುಸ್ತರವೆಂದೂ, ಹಾಗೆ ದುರ್ಗಮಾರ್ಗದ ಹಾಗೆ ಕಷ್ಟವಾದರೂ, ಅವರುಗಳಲ್ಲಿ ಆ ಶಿಕ್ಷಾಕ್ರಮಗಳು ವ್ಯಾಪಿಸುವುವೆಂದೂ, ಹೇಳುವುದಕ್ಕಾಗಿ, **ಗುಣಸಂಕ್ರಮೈಃ**-ಎಂಬ ಪ್ರಯೋಗವು, ಆತ್ಮ ಗುಣಗಳುಂಟಾಗುವುದಕ್ಕೆ **ಸಂಕ್ರಮಗಳು** ಎಂದರೆ "**ಸಂಕ್ರಮೋ ದುರ್ಗ ಸಂಚಾರಃ**" ಎಂಬ ಅಮರ ನಿಘಂಟು ರೀತ್ಯಾ ಕಠಿಣವಾದ ಪ್ರದೇಶಗಳಾದರೂ ಸಂಚಾರ ಮಾರ್ಗಗಳು ಆ ಶಿಕ್ಷಾಕ್ರಮಗಳೆಂದು ಹೇಳಲ್ಪಟ್ಟವು. ಆಳವಾದ ನೀರಿನ ಮೂಲಕ ಸಂಚಾರವು ಕಷ್ಟವಾದರೂ, ಅನುಕೂಲವಾಗುವ ಹಾಗೆ

ಸೇತುವಿನ ರೂಪದಲ್ಲಿರುವುವು ಈ ಗುಣಗಳು ಎಂಬ ಭಾವವು. ಇಲ್ಲಿನ **ಗುಣ** ಶಬ್ದದಿಂದ ಗೀತೆಯಲ್ಲಿ ೧೬-೧೧ರಿಂದ ಹಿಡಿದು ಹೇಳಲ್ಪಟ್ಟ ದೈವೀ ಸಂಪತ್ತಿಗೆ ಬೇಕಾದ ೨೬ ಗುಣಗಳು ಬೋಧಿತವು. ಈ ಆತ್ಮಗುಣಗಳ ವಿಷಯವಾಗಿ ಆಚಾರ್ಯರು ತಮ್ಮ ಶಿಷ್ಯರಿಗೆ ಉಪದೇಶಿಸುವರೆಂದೂ, ಇವುಗಳು ಶಿಷ್ಯರಲ್ಲಿ ಉಂಟಾಗುವುದು ಸ್ವಲ್ಪ ಕಷ್ಟವಾದರೂ ಕೊನೆಗೆ ಶಿಷ್ಯರಲ್ಲಿ ಅನ್ವಯಿಸುವುವು ಎಂದೂ ತಿಳಿಸುವದಕ್ಕಾಗಿ ದುರ್ಗ ಸಂಚಾರ ಮಾರ್ಗವಾದ ಸಂಕ್ರಮಗಳನ್ನುಳ್ಳವು ಎಂದು **ಸಂಕ್ರಮ** ಶಬ್ದ ಪ್ರಯೋಗವು.

ಹೀಗೆ ಸಚ್ಛಿಷ್ಯರನ್ನು ಕಂಡುಹಿಡಿದು ತತ್ವಹಿತ ಪುರುಷಾರ್ಥಗಳನ್ನೆಲ್ಲಾ ಸಾಂಪ್ರದಾಯಕವಾಗಿ ಅವರಿಗೆ ಪರಮಕೃಪಯಾ ಪ್ರತಿಫಲಾಶಾರಹಿತರಾಗಿ ಉಪದೇಶಿಸತಕ್ಕದ್ದೆಂದೂ ಅದು ಪರಂಪರೆಯಾಗಿ ಗುರು ಶಿಷ್ಯ ಕ್ರಮದಿಂದ ಬಂದಿರುವದು ಭಗವದಾಜ್ಞೆಯು; ಅದನ್ನು ಪರಿಪಾಲಿಸುವುದು ದಾಸಭೂತನಾದ ತನಗೆ ಇತಿಕರ್ತವ್ಯವೆಂದು ಭಾವಿಸಿ ನಡೆಸತಕ್ಕದ್ದೆಂದು ಉತ್ತರಾರ್ಧದಿಂದ ಹೇಳಿರುತ್ತಾರೆ. ತಾನೇ ಪ್ರಥಮ ಗುರುವಾಗಿ, ಚತುರ್ಮುಖಾದಿಗಳಿಗೆ ಉಪದೇಶಿಸಿ ಮೇಲುಪಙ್ಕ್ತಿಯನ್ನು ಹಾಕಿರುವುದರಿಂದ ಇದನ್ನೇ ಸಮಸ್ತರಾದ ಆಚಾರ್ಯರೂ ಅನುಷ್ಠಿಸತಕ್ಕದ್ದೆಂಬುದು ಏರ್ಪಡುತ್ತದೆ. ಆದುದರಿಂದಲೇ **ಅಚರಮಗುರು**ವೆಂಬ ಪ್ರಯೋಗವು (೨ನೆಯ ಪುಟ ನೋಡಿ) ಆತನು ಹೇಗೆ ಪ್ರಥಮ ಲೋಕ ಗುರುವೆಂಬುದು ಅಲ್ಲಿ ಉಪಪಾದಿತವು. ಇಲ್ಲಿ **ಪರವಾನಸೌ** ಎಂಬ ಪ್ರಯೋಗವು "**ಪರವಾನಸ್ಮಿ ಕಾಕುತ್ಸ್ಥ ತ್ವಯಿ ವರ್ಷ ಶತಂ ಸ್ಥಿತೇ। ಸ್ವಯಂತು ರುಚಿರೇ ದೇಶೇ ಕ್ರಿಯತಾಂ ಇತಿಮಾಂ ವದ**" ಎಂಬ ಲಕ್ಷ್ಮಣೋಕ್ತಿಗಳನ್ನು ಸ್ಮರಿಸುತ್ತವೆ (ರಾಮಾ ಅರ ೧೫. ೭) ಈ ಪ್ರಯೋಗಗಳು ಈ ಚೇತನನಿಗೆ ಭಗವತ್ಪಾರತಂತ್ರ್ಯವೇ ಸ್ವರೂಪವೆಂಬುದನ್ನು ಪ್ರಕಟಿಸುತ್ತವೆ. ನೀನು ಎಷ್ಟು ಕಾಲವಿರುವೆಯೋ ಅಷ್ಟು ಕಾಲವೂ ನಿನಗೆ ಪರತಂತ್ರನಾಗಿರುವುದೇ ತನಗೆ ಸ್ವರೂಪವೆಂದು ಲಕ್ಷ್ಮಣನು ಹೇಳಿಕೊಳ್ಳುತ್ತಾನೆ. ಇಲ್ಲಿ **ಶತವರ್ಷ**ವೆಂದು ಹೇಳಿರುವುದು ಅನಂತ್ಯಾರ್ಥದಲ್ಲಿಯಾದುದರಿಂದ ಸಾರ್ವಕಾಲಿಕವೆಂಬ ಭಾವವು.

ಈ ಭಗವದಾಜ್ಞೆಯು ಪಾರಂಪರ್ಯೇಣ ಬಂದುದು. ಆದುದರಿಂದ ತಾನೂ ಸಹ ತನ್ನ ಆಚಾರ್ಯನಿಗೂ **ಪರವಾನ್** ಆಗಿ ನಡೆಸತಕ್ಕದ್ದೆಂಬ ಭಾವವು ತೋರಿಬರುತ್ತಿದೆ. ಆಚಾರ್ಯನಿಗೆ ಭಗವದಾಜ್ಞೆಯು ಏನು? ಎಂದರೆ "**ಪಾತ್ರಸ್ಥಂ ಆತ್ಮ ಜ್ಞಾನಂ ಚಕೃತ್ವಾ ಪಿಂಡಂ ಸಮುತ್ಸೃಜೇತ್। ನಾಂತರ್ಧಾನಂ ಯಥಾ ಯಾತಿ ಜಗದ್ಬೀಜ ಮಬೀಜಕೃತ್**" ತಾನು ತನ್ನ ಆಚಾರ್ಯರಿಂದ ಪಡೆದ ಆತ್ಮವಿಷಯಕವಾದ ಜ್ಞಾನವನ್ನು ಸಚ್ಛಿಷ್ಯನಾದ ಸತ್ಪಾತ್ರದಲ್ಲಿಟ್ಟು, ಜಗತ್ತಿಗೆ ಬೀಜರೂಪವಾದ ಸಂಸಾರವು ಪುನಃ ಹುಟ್ಟದ ಹಾಗೆ ಮಾಡಿ, ಆ ಜ್ಞಾನವು ತನ್ನಲ್ಲೇ ಲಯವಾಗುವ ಹಾಗೆ ಮಾಡತಕ್ಕದ್ದಲ್ಲವೆಂಬುದು ಭಗವದಾಜ್ಞೆಯು. ಅಥವಾ ಆಚಾರ್ಯ ಶಿಷ್ಯ ಕ್ರಮದಲ್ಲಿ ನಮಗೆ ಬಂದವು ಶ್ರುತಿ ಸ್ಮೃತಿ ರೂಪ ಶಾಸ್ತ್ರಗಳಲ್ಲಿರುವ ಆಜ್ಞಾ

ಪರಂಪರೆಗಳೇನು ಅರ್ಥಪಂಚಕಗಳ ಉಪದೇಶವೇನು ಇಂತಹ **ಆಜ್ಞಾಪಾರಂಪರೀ** ಎಂದೂ ಅರ್ಥವನ್ನು ಹೇಳಬಹುದು. ಈ ಅಜ್ಞೆಯನ್ನು ಪರಿಪಾಲಿಸುವುದರಿಂದ ಆ ಸಚ್ಛಿಷ್ಯನು ಸಂರಕ್ಷಿಸಲ್ಪಡುವುದು ಮಾತ್ರವೇ ಅಲ್ಲದೆ, ಆ ಮೂಲಕವಾಗಿ **ಸ್ವಮಪ್ಯೈಭಿರಕ್ಷತಿ**-ತಾನೂ ರಕ್ಷಿಸಲ್ಪಡುವನು. ಹೇಗೆಂದರೆ ಹಾಗೆ ಮಾಡದಿದ್ದರೆ ಆಚಾರ್ಯನು ಭಗವದಾಜ್ಞಾತಿಲಂಘನದಿಂದ ನಿಗ್ರಹಕ್ಕೆ ಗುರಿಯಾಗುವನು ಎಂಬ ಭಾವವು.

ಇಂತು **ಶ್ರೀಮದ್ರಹಸ್ಯತ್ರಯಸಾರದ ಮೂವತ್ತನೆಯ** ಅಧಿಕಾರಕ್ಕೆ
ತಿರುನಾರಾಯಣಪುರಂ ವಿಜಯರಾಘವಶರ್ಮನ

**ಆಚಾರ್ಯಹೃದಯಾನ್ವೇಷಿಣೀ**

ಎಂಬ ಕನ್ನಡ ಅರ್ಥ ತಾತ್ಪರ್ಯಗಳು ಸಮಾಪ್ತವಾದವು.

**ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯನಮಃ**

---

ಶ್ರಿಯೈ ನಮಃ
ಶ್ರೀಮತೇ ರಾಮಾನುಜಾಯ ನಮಃ
ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ



# ಅಥ ಶಿಷ್ಯ ಕೃತ್ಯಾಧಿಕಾರಃ ೨೧

**ಅಶಿಥಿಲ ಗುರುಭಕ್ತಿಸ್ತತ್ಪ್ರಶಂಸಾದಿ ಶೀಲಃ। ಪ್ರಚುರ ಬಹುಮತಿ ಸ್ತದ್ವಸ್ತು ವಾಸ್ತ್ರಾದಿಕೇಽಪಿ। ಗುಣವತಿ ವಿನಿಯೋಕ್ತುಂ ಗೋಪಯೇದ್ ಸಂಪ್ರದಾಯಂ। ಕೃತವಿದನಘವೃತ್ತಿಃ ಕಿನ್ನವಿಂದೇನ್ನಿಧಾನಮ್॥೨೭॥**

---

ಆಚಾರ್ಯಕೃತ್ಯವನ್ನು ಹಿಂದೆ ನಿರೂಪಣ ಮಾಡಿ ಈಗ ಶಿಷ್ಯಕೃತ್ಯವು ಯಾವುದೆಂಬುದನ್ನು ಶಿಕ್ಷಿಸುತ್ತಾರೆ. ಸಚ್ಛಿಷ್ಯನು ಯಾವ ಗುಣಗಳನ್ನು ಹೊಂದಿರಬೇಕೆಂದು ತಿಳಿಸುತ್ತಾರೆ :-

ಅರ್ಥವು :- **ಅಶಿಥಿಲ ಗುರುಭಕ್ತಿಃ**-ಈ ಶಿಷ್ಯನಿಗೆ ತನ್ನ ಆಚಾರ್ಯರಲ್ಲಿ ಕಮ್ಮಿಯಾಗದ ಭಕ್ತಿಯುಳ್ಳವನಾಗಿಯೂ, ಇದು ಮುಖ್ಯವಾದುದರಿಂದ ಮೊದಲು ಹೇಳಲ್ಪಟ್ಟಿತು, **ತತ್ಪ್ರಶಂಸಾದಿಶೀಲಃ**-ಹಾಗೆ ಭಕ್ತಿಯಿರುವುದರಿಂದ, "**ಗುರುಂ ಪ್ರಕಾಶಯೇತ್**" ಎಂಬ ಶಾಸ್ತ್ರವಿಧಿಗನುಸಾರವಾಗಿ ಆ ಗುರುವನ್ನು ಕೊಂಡಾಡುವ ಸ್ವಭಾವವುಳ್ಳವನಾಗಿಯೂ, ಇಲ್ಲಿನ **ಆದಿ** ಪದದಿಂದ ಆಚಾರ್ಯನಿಗೆ ಕೈಂಕರ್ಯ ಶುಶ್ರೂಷಾದಿಗಳು ಹೇಳಲ್ಪಟ್ಟುವು; **ತದ್ವಸ್ತುವಾಸ್ತ್ರಾದಿಕೇಽಪಿ**-ಆಚಾರ್ಯರ ವಸ್ತುಗಳಾದ ಶ್ರೀಕೋಶ, ಅವರು ಧರಿಸಿದ ಬಟ್ಟೆ, ಪಾದುಕೆ, ಪವಿತ್ರಹಾರ ಗೃಹ ಅಥವಾ ಆಶ್ರಮ, ಅವರು ಹುಟ್ಟಿದ ಮತ್ತು ವಾಸ ಮಾಡಿದ ಸ್ಥಳ, ಆದಿಶಬ್ದದಿಂದ ಅವರಿಗೆ ಅಭಿಮತವಾದ ಕ್ಷೇತ್ರ, ಅವರು ವಾಸ ಮಾಡಿದ ಗ್ರಾಮ ಮುಂತಾದುವುಗಳಲ್ಲೂ ಸಹ, **ಪ್ರಚುರಬಹುಮತಿಃ**-ಪ್ರಚುರಪಡಿಸುವ ಉದಾರ ಮನಸ್ಸು ಬುದ್ಧಿಗಳನ್ನುಳ್ಳವನಾಗಿ **ಗುಣವತಿ ವಿನಿಯೋಕ್ತುಂ**-ತಾನು ತನ್ನ ಆಚಾರ್ಯರಿಂದ ಸಂಗ್ರಹಿಸಿದ ರಹಸ್ಯಾರ್ಥಗಳನ್ನು ಸದ್ಗುಣಗಳುಳ್ಳ ಸತ್ಪಾತ್ರನಲ್ಲಿ ವಿನಿಯೋಗಿಸುವುದಕ್ಕಾಗಿ, **ಸಂಪ್ರದಾಯಂ**-ಆಚಾರ್ಯಶಿಷ್ಯಕ್ರಮವಾಗಿ ಉಪದೇಶವನ್ನು ಹೊಂದುವ ಸಂಪ್ರದಾಯ

ವನ್ನು, **ಗೋಪಯೇತ್**-ಗೋಪ್ಯವಾಗಿಟ್ಟು ರಕ್ಷಿಸುವವನಾಗಿ, **ಕೃತವಿತ್**-ಆಚಾರ್ಯರು ತನಗೆ ಮಾಡಿದ ಮಹದುಪಕಾರವನ್ನು ಸದಾ ಜ್ಞಾಪಿಸಿಕೊಂಡು ಅವರಲ್ಲಿ ಕೃತಜ್ಞತೆ ಯುಳ್ಳವನಾಗಿ, **ಅನಘವೃತ್ತಿಃ**-ತದುತ್ತರ ಕಾಲದಲ್ಲಿ ಏನೊಂದೂ ಅಪರಾಧಗಳನ್ನೂ ಎಸಗದೆ ಪರಿಶುದ್ಧವಾದ ಪ್ರವೃತ್ತಿಗಳನ್ನುಳ್ಳವನಾಗಿ ನಿತ್ಯನೈಮಿತ್ತಿಕಾನುಷ್ಠಾನಗಳೇನು ಭಗವದ್ಭಾಗವತಕೈಂಕರ್ಯಗಳೇನು ಇವುಗಳಲ್ಲಿ ಪ್ರವೃತ್ತಿಗಳನ್ನುಳ್ಳ, ಇಂತಹ **ಅಮೋಘ** ಗುಣಗಳನ್ನುಳ್ಳ ಶಿಷ್ಯನು, **ನಿಧಾನಂ**-ಪರಮ ನಿಧಿಯೆಂದೂ "**ಹಿರಣ್ಯನಿಧಿ**" ಎಂದೂ, ಹೇಳಿಸಿಕೊಳ್ಳುವ ಪರಮಪ್ರಾಪ್ಯವನ್ನು, **ಕಿಂ ನವಿಂದೇತ್**-ಏತಕ್ಕೆ ಹೊಂದದೇ ಇರುವನು? ಹೊಂದಿಯೇ ಹೊಂದುವನೆಂಬುದು ಸಿದ್ಧವು **ಎಂಬ** ತಾತ್ಪರ್ಯವು.

**ಉಪಪಾದನೆಯು**-ಶಿಷ್ಯನು ಎಂತಹವನಾಗಿರಬೇಕು, ಎಂತಹ ಶ್ಲಾಘ್ಯ ಗುಣಗಳನ್ನು ಹೊಂದಿರಬೇಕೆಂದೂ, ಆತನ ಇತಿಕರ್ತವ್ಯಗಳು ಯಾವುವು ಎಂಬುದನ್ನು ಸಙ್ಗ್ರಹ ವಾಗಿ ಹೇಳುತ್ತಾರೆ. (೧) ಪ್ರಥಮತಃ ಮುಖ್ಯವಾಗಿ ಆತನಲ್ಲಿರತಕ್ಕದ್ದು **ಅಶಿಥಿಲ ಗುರುಭಕ್ತಿಃ**-ಅವರಿಂದ ರಹಸ್ಯಾರ್ಥಗಳನ್ನು ಸಂಗ್ರಹಿಸುವ ಕಾಲದಲ್ಲಿ ಮಾತ್ರ ಗುರು ಭಕ್ತಿಯನ್ನು ಪ್ರದರ್ಶಿಸಿದರೆ ಸಾಲದು; ಅವರು ಮಾಡಿದ ಮಹದುಪಕಾರ ಕ್ಕಾಗಿ ಆ ಭಕ್ತಿಯು ವೃದ್ಧಿಯಾಗುತ್ತಾ ಹೋಗಬೇಕೆಂಬ ಅಭಿಪ್ರಾಯದಿಂದ **ಅಶಿಥಿಲ ಗುರುಭಕ್ತಿಃ** ಎಂದು ಹೇಳಿದರು. ಇದಕ್ಕೆ ಕಾರಣವೇನು ಎಂಬುದನ್ನು ಹಿಂದೆಯೇ ಗುರುಪರಂಪರಾಸಾರದಲ್ಲಿ ಚನ್ನಾಗಿ ಉಪಪಾದಿಸಿ, ನ್ಯಾಸವಿಂಶತಿಯ ಶ್ಲೋಕವಾದ "**ಅಜ್ಞಾನಧ್ವಾಂತರೋಧಾತ್**" ಎಂಬಲ್ಲಿ ೧೦ ಕಾರಣಗಳಿಂದ ಆಚಾರ್ಯನು "**ದೇವವತ್ಸ್ಯಾದುಪಾಸ್ಯಃ**" ಸರ್ವೇಶ್ವರನನ್ನು ಹೇಗೆ ಭಕ್ತಿಯಿಂದ ಧ್ಯಾನಿಸುವೆವೋ ಹಾಗೆಯೇ ಧ್ಯಾನಿಸಲು ಯೋಗ್ಯನೆಂದು ಹೇಳಲ್ಪಟ್ಟಿರುತ್ತದೆ. ಅಂತಹ ಆಚಾರ್ಯ ಮಹಾಭಕ್ತಿ ಇರುವುದರಿಂದಲೇ ಶ್ರೀನಿಗಮಾನ್ತ ಮಹಾದೇಶಿಕರವರು ಇನ್ನೊಂದು **ಕಡೆ** ಯಲ್ಲಿ "**ಆಚಾರ್ಯಾದಿಹ ದೇವತಾಂ ಸಮಧಿಕಾ ಮನ್ಯಾಂ ನಮನ್ಯಾಮಹೇ** ಎಂದು ಹೇಳಿಬಿಟ್ಟರು. ೪೭ನೆಯ ಪುಟ ನೋಡಿ. (೨) **ತತ್ಪ್ರಶಂಸಾದಿಶೀಲಃ**- ಅವರು ತನಗೆ ಮಾಡಿದ ಮಹದುಪಕಾರ ಸ್ಮರಣೆಯಿಂದ "**ಗುರುಂಪ್ರಕಾಶ ಯೇದ್ಧೀಮಾನ್**" ಎಂಬಲ್ಲಿ ಹೇಳಿರುವ ಹಾಗೆ ಅವರುಗಳ ಗುಣಕಥನ, **ಉಪದೇಶ** ಕ್ರಮ, ನಿಷ್ಠಾಕ್ರಮ ಮೊದಲಾದುವುಗಳನ್ನೆಲ್ಲಾ ಕೊಂಡಾಡುವ ಭಾವವುಳ್ಳವನಾಗಿ ರಬೇಕು. ಅವರುಗಳ ಸಂಭಾವನೆಯನ್ನು ದ್ವಾದಶಿ ಮೊದಲಾದ ಪರ್ವ **ಕಾಲಗಳಲ್ಲಿ** ಎತ್ತಬೇಕು. ಅದಲ್ಲದೆ ಅವರಿಗೆ ಬೇಕಾದ ಶುಶ್ರೂಷಾದಿಗಳಲ್ಲೂ ನಿರತನಾಗಿರಬೇಕು. ತಿರುನಕ್ಷತ್ರಾದಿ ಕಾಲಗಳಲ್ಲಿ ಅವರನ್ನು ಆರಾಧಿಸಿ, ಅವರ ಚರಿತ್ರೆಯನ್ನು **ಕೊಂಡಾಡ** ತಕ್ಕದ್ದು. (೩) **ತದ್ವಸ್ತು ವಾಸ್ತ್ವಾದಿಕೇಪಿ ಪ್ರಚುರ ಬಹುಮತಿಃ**-ಅವರು ಉಪಯೋಗಿಸಿದ ಪದಾರ್ಥಗಳಿಂದ ಅವರು ಉಟ್ಟ ವಸ್ತ್ರಗಳನ್ನೂ ಶಿರಸಾ **ಧರಿಸ** **ಬೇಕು**; ಅವರು ಹಾಕಿಕೊಂಡಿದ್ದ ಪಾದುಕೆಗಳನ್ನು ಶಿರಸಾಧರಿಸಿ, ಪ್ರತಿ **ದಿನವೂ**

ಆರಾಧಿಸತಕ್ಕದ್ದು ಅವರು ಹಾಕಿಕೊಂಡಿದ್ದ ಪವಿತ್ರಹಾರವನ್ನು ಜಪಕಾಲಗಳಲ್ಲಿ ಧರಿಸ ತಕ್ಕದ್ದು. ಇವುಗಳನ್ನೆಲ್ಲಾ ಸರ್ವೇಶ್ವರನೇ ಮಾನುಷಾವತಾರಿಯಾಗಿ ಆಚಾರ್ಯರನ್ನು ವರಿಸಿ ತಾನೇ ಶಿಷ್ಯಕ್ರಮವನ್ನು ಸ್ಥಾಪಿಸಿರುತ್ತಾರೆ. "ಭರತಾಗ್ರಜಃ| ಪಾದಾ ವಾಸಾದ್ಯಜಗ್ರಾಹ ವಸಿಷ್ಠಸ್ಯ ರಾಘವಃ" (ಅಯೋಧ್ಯಾ ೧೦೩-೨೭) ಎಂದು ಹೇಳ ಲ್ಪಟ್ಟಿರುತ್ತದೆ. ವಿಶ್ವಾಮಿತ್ರ ಋಷಿಗಳು ಶ್ರೀರಾಮಪ್ರಭುವಿಗೆ ಆಚಾರ್ಯರಾದುದರಿಂದ **"ಇಮೌಸ್ಮ ಮುನಿಶಾರ್ದೂಲ ಕಿಂಕರೌ ಸಮುಪಸ್ಥಿತೌ| ಆಜ್ಞಾಪಯ ಯಥೇಷ್ಟಂವೈ ಶಾಸನಂ ಕರವಾವಕಿಂ"** (ರಾಮಾ. ಬಾಲ ) ಎಂದು ಹೇಳಿ ಅವರಿಗೆ ಸರ್ವವಿಧ ಕೈಂಕರ್ಯಗಳನ್ನೂ ನಡೆಸಿರುತ್ತಾರೆ. ಕೃಷ್ಣಾವತಾರಿಯಾಗಿ ಸಾಂದೀಪಿನ್ಯಾಚಾರ್ಯರಿಗೂ ನಾನಾ ವಿಧ ಕೈಂಕರ್ಯಗಳನ್ನು ನಡೆಸಿರುತ್ತಾರೆ. ಅದ ನ್ನೆಲ್ಲಾ ಜ್ಞಾಪಿಸಿಕೊಂಡು ತಮ್ಮ ಸಹಾಧ್ಯಾಯಿಯಾದ ಕುಚೇಲರಲ್ಲಿ ಕೊಂಡಾಡಿರು ತ್ತಾರೆ. ಹೀಗೆ ಸ್ವಾಮಿಯೇ ಶಿಷ್ಯಕೃತ್ಯವನ್ನು ತೋರಿಸಿರುತ್ತಾರೆ. ಶ್ರೀ ಭಾಷ್ಯ ಕಾರರು ಅವತರಿಸಿದ ಶ್ರೀ ಪೆರಂಬೂದೂರು, ಅವರು ಕೆಲವು ಕಾಲ ವಸಿಸಿದ ಶ್ರೀರಂಗ ಮೇಲುಕೋಟೆ, ಸಾಲಿಗ್ರಾಮಾದಿ ದಿವ್ಯ ದೇಶಗಳಿದ್ದ ಸ್ಥಳಗಳೂ, ಹಾಗೆಯೇ ಶ್ರೀ ನಿಗಮಾನ್ತ ದೇಶಿಕರಿದ್ದ ಸ್ಥಳಗಳಾದ ಕಾಂಚೀಪುರ, ತಿರುಮಹೇಂದ್ರಪುರ, ಕೊಳ್ಳೀ ಗಾಲ, ಮತ್ತು ಶ್ರೀನಿವಾಸ ಮಹಾದೇಶಿಕರು ಇದ್ದ ಹೆಮ್ಮಿಗೆ ಇತ್ಯಾದಿ ಸ್ಥಳಗಳು ಪುಣ್ಯ ಕ್ಷೇತ್ರಗಳು. ಇವುಗಳು ಸರ್ವೇಶ್ವರನು ಬಿಜ ಮಾಡಿಸಿರುವ ದಿವ್ಯ ಸ್ಥಳಗಳಿ ಗಿಂತ ಶ್ರೇಷ್ಠಗಳಾದ ಪ್ರದೇಶಗಳೆಂಬ ಭಾವನೆಯು ಇರತಕ್ಕದ್ದು. ಹೀಗೆಯೇ ತಮ್ಮ ಸ್ವಾಚಾರ್ಯರ ಅವತಾರ ಸ್ಥಳ ಆಶ್ರಮಾದಿಗಳು ಪುಣ್ಯ ಸ್ಥಳಗಳು. **(೪) ಗುಣವತಿ ವಿನಿಯೋಕ್ತುಂ ಗೋಪಯೇತ್ ಸಂಪ್ರದಾಯಂ**- ತಾನು ಹೇಗೆ ಶಿಷ್ಯಗುಣಪೂರ್ತಿ ಯನ್ನು ಹೊಂದಿ ಆಚಾರ್ಯಕೃಪೆಗೆ ಪಾತ್ರನಾಗಿ ಅವರಿಂದ ಬ್ರಹ್ಮವಿದ್ಯೆ ರಹಸ್ಯಾರ್ಥ ಮೊದಲಾದುವುಗಳನ್ನು ಅಧಿಕರಿಸಿದನೋ, ಹಾಗೆಯೇ ಅಂತಹ ಶ್ಲಾಘ್ಯ ಗುಣಗಳ ನ್ನುಳ್ಳ ಸಚ್ಛಿಷ್ಯನಿಗೆ ಮಾತ್ರವೇ ಉಪದೇಶಿಸಿ, ಆಚಾರ್ಯಋಣಮುಕ್ತನಾಗತಕ್ಕದ್ದು. ಆದುದರಿಂದ ತನ್ನ ಶಿಷ್ಯನು "ಸದ್ಬುದ್ಧಿ ಸಾಧುಸೇವೀ" ಎಂಬ ನ್ಯಾಸವಿಂಶತಿ ಶ್ಲೋಕ ದಲ್ಲಿ ಹೇಳಿರುವ ಹಾಗೆ ಶಿಷ್ಯಗುಣಪೂರ್ತಿಗನ್ನುಳ್ಳವನಿಗೆ ಉಪದೇಶಿಸತಕ್ಕದ್ದೆಂದು ತಿಳಿಸುವುದಕ್ಕಾಗಿ **"ಗುಣವತಿ ವಿನಿಯೋಕ್ತುಂ"** ಎಂಬ ಪ್ರಯೋಗವು. ಅಂತಹ ಗುಣಪೂರ್ತಿಯಿಲ್ಲದವನಿಗೆ ಬಂದು ಆಶ್ರಯಿದನೇ ಎಂದು ದುಡುಕಿ ಈ ಶಿಷ್ಯನೂ ಉಪದೇಶಿಸಕೂಡದು ಎಂದು ತಿಳಿಸುವುದಕ್ಕಾಗಿಯೇ **ಗೋಪಯೇತ್ ಸಂಪ್ರ ದಾಯಂ** ಎಂದು ಹೇಳಲ್ಪಟ್ಟಿತು. ಆಚಾರ್ಯೋಪದಿಷ್ಟನಾದ ಪ್ರತಿಯೊಬ್ಬನಿಗೂ ಇತಿಕರ್ತವ್ಯತೆ ಏನೆಂದರೆ? ಸತ್ಪಾತ್ರನಾದ ಶಿಷ್ಯನನ್ನು ವಿಮರ್ಶಿಸಿ ತಿಳಿದು ಆತನಿಗೆ ತಾನು ಗ್ರಹಿಸಿದ ರಹಸ್ಯಾರ್ಥಗಳನ್ನೆಲ್ಲಾ ಉಪದೇಶಿಸತಕ್ಕದ್ದು. ಸತ್ಪಾತ್ರನಲ್ಲದಿದ್ದರೆ ಉಪದೇಶಿಸಕೂಡದು. ಹೀಗೆ ಸತ್ಸಂಪ್ರದಾಯವು ರಕ್ಷಿಸಲ್ಪಡತಕ್ಕದ್ದೆಂಬ ಭಾವವು. (೫) ಇನ್ನೂ ಈತನ ಕೃತ್ಯವೆಂಥಾದ್ದೆಂದರೆ **ಕೃತವಿತ್**-ಆಚಾರ್ಯರು ತನಗೆ ಮಾಡಿದ

ಮಹತ್ತಾದ ಉಪಕಾರವನ್ನು ಸ್ಮರಿಸುವವನಾಗಿ ಕೃತಜ್ಞತಾ ಭಾವದಿಂದಿರಬೇಕು. ಇಂತಹ ಉಪಕಾರ ಸ್ಮರಣೆಯಿಲ್ಲದಿದ್ದರೆ ಕೃತಘ್ನನೆನಿಸುವನು. ಗುರುಪರಾಯಣ ನಾಗಿರತಕ್ಕದ್ದು. ಅದಕ್ಕಾಗಿ ಈತನು ಇನ್ನೇನನ್ನೂ ಮಾಡತಕ್ಕದ್ದಿಲ್ಲವು. ಗುರುವು ಸದಾ ಪೂಜ್ಯನು; ಆತನು ಕೃಪಯಾ ನಿಸ್ಪೃಹನಾಗಿ ಉಪದೇಶಿಸುತ್ತಾನಾದುದರಿಂದ ಆತನು ಆರಾಧಿಸಲ್ಪಡಲು ಅರ್ಹನು. (೬) ಇನ್ನೂ ಹೇಗಿರತಕ್ಕದ್ದೆಂದರೆ **ಅನಘ ವೃತ್ತಿಃ**-ಆಚಾರ್ಯರಲ್ಲಿ ಭರನ್ಯಾಸಾ ನಂತರ ದೋಷವಿಲ್ಲದ ಪ್ರವೃತ್ತಿಯುಳ್ಳವನಾಗಿರ ಬೇಕು. ಆಜ್ಞಾನುಜ್ಞಾ ಕೈಂಕರ್ಯಗಳನ್ನು ಮಾಡತಕ್ಕದ್ದು. ಭಗವನ್ನಿವೇದಿತಾನ್ನ ವನ್ನು ಸ್ವೀಕರಿಸತಕ್ಕದ್ದು. ಅದು ಸಾತ್ವಿಕಾಹಾರವಾಗಿ ಆರು ವಿಧ ದೋಷಗಳಿಲ್ಲದೇ ಇರಬೇಕು. ಆಚಾರರಹಿತರ ಮನೆಯಲ್ಲೂ ಅಧರ್ಮಾರ್ಜಿತ ಹಣವನ್ನು ಗಳಿಸಿದವರ ಮನೆಯಲ್ಲೂ, ಆಚಾರಶೀಲರಲ್ಲದವರ ಪಂಙ್ತ್ತಿಯಲ್ಲೂ ಊಟ ಮಾಡಬಾರದು. ತನ್ನ ಉದರಕ್ಕಾಗಿ ತಾನೇ ಅಡಿಗೆಯನ್ನು ಮಾಡಿ ಊಟ ಮಾಡಬಾರದು. ಇತ್ಯಾದಿ ನಿಯಮಗಳಿಂದ **ಅನಘವೃತ್ತಿಯುಳ್ಳವ**ನಾಗಿರತಕ್ಕದ್ದು.

ಅದೂ ಅಲ್ಲದೆ ಶಾಸ್ತ್ರನಿಂದ್ಯವಾದ ಯಾವ ಕರ್ಮಗಳನ್ನೂ ಮಾಡಬಾರದು. ವಾಕ್ಕು ಮನಸ್ಸು ಶರೀರಾದಿಗಳಿಂದ ಯಾರಿಗೂ ನೋವು ಉಂಟಾಗುವ ಪ್ರವೃತ್ತಿ ಯಿಂದ ನಿವೃತ್ತನಾಗಿರತಕ್ಕದ್ದು. ಹೀಗೆಲ್ಲಾ ಇದ್ದರೆ **ಅನಘವೃತ್ತಿಃ**-ಎನಿಸುವನು. ಹೀಗೆಲ್ಲಾ ಒಬ್ಬನು ಇದ್ದುದಾದರೆ ಅಂತವನಿಗೆ ಪರಿಪೂರ್ಣ ಬ್ರಹ್ಮಾನುಭವವೆಂಬ ಸಂಸಿದ್ಧಿಪ್ರಾಪ್ತಿಯು ಎಂದಿಗೆ ತಪ್ಪೀತು? ಆ ವಿಷಯದಲ್ಲಿ ಸಂಶಯವೇನಿರುತ್ತೆ ಎಂದು **ಕಿನ್ನವಿಂದೇತ್ ನಿಧಾನವಮ್** ಎಂದು ಹೇಳಿರುತ್ತಾರೆ. **ನಿಧಾನ**-ಶಬ್ದಕ್ಕೆ "**ಪ್ರತಿ ನಿಯತ ರಮಾ ಸನ್ನಿಧಾನವೆಂದು**" ಅರ್ಥ ಮಾಡಲ್ಪಟ್ಟಿರುತ್ತದೆ. ಅಂತವನಿಗೆ ಮುಕ್ತೈಶ್ವರ್ಯವು ಉಂಟು. ಇಹದಲ್ಲೂ ಭಗವತ್ಕೃಪಾರೂಪ ಐಶ್ವರ್ಯವು ಉಂಟು. ದೇಹಾವಸಾನಾನಂತರವು ಮುಕ್ತೈಶ್ವವು ಉಂಟು. ಪರಮ ಪುರುಷನು "**ಪರೇಣನಾಕಂ ನಿಹಿತಂ ಗುಹಾಯಾಂ**" ಎಂಬಲ್ಲೂ, "**ತಂ ದುರ್ದರ್ಶಂ ಗೂಢಮನುಪ್ರವಿಷ್ಟಮ್**" ಎಂಬಲ್ಲೂ ಹೇಳಿರುವ ಹಾಗೆ, ಹಿರಣ್ಯನಿಧಿಯು; ಆತನೊಂದಿಗೆ ಸಾಯುಜ್ಯವೇ ಪರಮ ಧನವು. ಆದುದರಿಂದ **ನಿಧಾನಂ** ಎಂಬ ಪ್ರಯೋಗವು. ಇದೂ **ವಿಂದೇತ್** ಎಂಬ ಪ್ರಯೋಗವೂ, ಇವೆರಡೂ "**ತದ್ಯಥಾ ಹಿರಣ್ಯನಿಧಿಂ ನಿಹಿತೆ ಮಕ್ಷೇತ್ರಜ್ಞಾ ಉಪರ್ಯುಪರಿ ಸಂಚರನ್ತೋ ನವಿಂ ದೇಯುಃ ರೇವಮೇವೇಮಾ ಸ್ಸರ್ವಾಃ ಪ್ರಜಾ ಅಹರಹರ್ಗಚ್ಛನ್ತ್ಯ ಏತಂ ಬ್ರಹ್ಮಲೋಕ ನವಿಂದಂತ್ಯನೃತೇನಹಿ ಪ್ರತ್ಯೂಢಾಃ**" ಎಂಬ ಛಾಂದೋಗ್ಯ ವಾಕ್ಯವನ್ನು (೮. ३. ೨.) ಸ್ಮರಿಸುತ್ತದೆ. ಇಲ್ಲಿ ದಹರಾಕಾಶ ಶಬ್ದದಿಂದ ಬೋಧಿತ ಪರಮಪುರುಷನು **ನಿಧಿ**-ಶಬ್ದದಿಂದ ಹೇಳಲ್ಪಟ್ಟಿರುವುದರಿಂದ **ನಿಧಾನಂ** ಎಂಬ ಪ್ರಯೋಗವು **ಅಕ್ಷೇತ್ರಜ್ಞರು**ಕ್ಷೇತ್ರ, ಕ್ಷೇತ್ರಜ್ಞ, ಪರಮಪುರುಷ ಸ್ವರೂಪ, **ಸ್ವ**ಭಾವಗಳನ್ನರಿಯದವರು, **ನವಿಂದೇಯುಃ**-ತಿಳಿಯಲಾರದು. ಇಬ್ಬರೂ **ಸದಾ**

ದಹರ ಗುಹೆಯಲ್ಲಿ ಒಟ್ಟಿಗೇ ಇರುತ್ತಾರೆ. ಸುಷುಪ್ತಿಯಲ್ಲೂ ಒಟ್ಟಿಗೇ ಇರುತ್ತಾರೆ. ಹೀಗಿದ್ದರೂ ಅಂತಹ ಅಜ್ಞರು ತಿಳಿಯಲಾರರು. ಆದರೆ ಆಚಾರ್ಯ ಸದುಪದೇಶದಿಂದ ಪ್ರಾಜ್ಞತೆಯನ್ನು ಹೊಂದಿರುವರಾದರೋ ಆತನನ್ನು ತಿಳಿದೇ ತಿಳಿಯುವುದರಲ್ಲೂ, ಆತನನ್ನೇ ಹೋಗಿ ಸೇರುವುದರಲ್ಲೂ ಸಂದೇಹವೇನಿರುತ್ತದೆ ? ಎಂದು **ಕಿನ್ನವಿಂದೇನ್ನಿಧಾನಂ** ಎಂದು ಈ ಶ್ರುತಿ ವಾಕ್ಯವನ್ನೇ ಮನಸ್ಸಿನಲ್ಲಿಟ್ಟು ಪ್ರಯೋಗಿಸಿರುತ್ತಾರೆಂಬುದು ಸಿದ್ಧವು. ಶ್ರುತಿಯಲ್ಲಿ ಅಕ್ಷೇತ್ರಜ್ಞರಾಗಿರುವವರು **ನವಿಂದೇಯುಃ** ಎಂದು ಹೇಳಲ್ಪಟ್ಟರು. ಇಂತಹ ಶಿಷ್ಯನು ಅಕ್ಷೇತ್ರಜ್ಞನಲ್ಲವು. ಆದುದರಿಂದಲೇ ಇಂತಹ ಶಿಷ್ಯನು ಹೊಂದದೇ ಇರುವನೇ ? ಎಂದು ಕಿನ್ನವಿಂದೇನ್ನಿಧಾನಮ್ ಎಂಬ ಪ್ರಯೋಗವು. ಪರಮಪುರುಷ ಸಾನ್ನಿಧ್ಯವೆಂಬ ನಿಧಿಯನ್ನು, ಮುಕ್ತೈಶ್ವರ್ಯವನ್ನು ಹೊಂದಿ ಪರಿಪೂರ್ಣ ಬ್ರಹ್ಮಾನುಭವವನ್ನು ಹೊಂದುವುದಕ್ಕಾಗಿ ಪರಮಾತ್ಮ ಸಾಯುಜ್ಯವನ್ನು ಅರ್ಚಿರಾದಿಗತಿ ಮೂಲಕ ಹೊಂದುವನೆಂಬ ಭಾವವು. **ಗತಿಶಬ್ದಾಭ್ಯಾಂ ತಥಾಹಿದೃಷ್ಟಮ್ ಲಿಂಗಂಚ** ಎಂಬ ಬ್ರಹ್ಮಸೂತ್ರದಲ್ಲಿ (೧- ೩. ೧೪) ಇವೆಲ್ಲಾ ಉಪಪಾದಿತವು. ಅಲ್ಲಿ **ಗತಿ, ನಿಧಿ, ವಿಂದೇಯು** ಎಂಬ ಪ್ರಯೋಗಗಳನ್ನೆಲ್ಲಾ ಅಲ್ಲಿ ಕಾಣಬಹುದು.

ಈ ಶ್ಲೋಕದಲ್ಲಿ ಹೇಳಿರುವ ಅರ್ಥಗಳನ್ನೆಲ್ಲಾ ಭೃಗುವು ಶೌನಕರಿಗೆ ಮಾಡಿದ ಉಪದೇಶದಲ್ಲಿ ಕಾಣಬಹುದು:-

**ಶೃಣು ಶೌನಕ ತತ್ತ್ವೇನ ಗುರುಶಿಷ್ಯಕ್ರಮಂ ಪರಮ್। ಗುರುಪೂಜಾಂ ಚ ವಕ್ಷ್ಯಾಮಿ ಮಾಹಾತ್ಮ್ಯಮಪಿ ತದ್ದ್ವಿಜ॥ ಶಿಷ್ಯೋಗುರು ಸಮೀಪಸ್ಥೋಯತವಾಕ್ಕಾಯ ಮಾನಸಃ। ಶುಶ್ರೂಷಯಾ ಗುರೋಸ್ತುಷ್ಟಿಂ ಕುರ್ಯಾನ್ನಿರ್ಧೂತ ಮತ್ಸರಃ । ಆಸನಂ ಶಯನಂ ಯಾನಂ ಪರಿಹಾಸಂಚ ಶೌನಕ। ಪ್ರತಿಪ್ರಲಾಪಾದ್ಯತ್ನ್ಯೈಶ್ಚ ವರ್ಜಯೇದ್ಗುರುಸನ್ನಿಧೌ। ಗುರೌ ತಿಷ್ಠತಿ ಸಂತಿಷ್ಠೇಚ್ಛಯಿತೇಚ ಸ್ವಪೇದ್ದ್ವಿಜ। ಆಸ್ಥಿತೇ ಸ್ವಯಮಾಸೀತ ಶಿಷ್ಯೋ ಗುರು ಪರಾಯಣಃ। ಗುರುನಿಂದಾಪರಾ ಯೇಚ ದೂರತಸ್ತಾನ್ ವಿವರ್ಜಯೇತ್। ಶ್ರೋತ್ರೇ ಪಿಧಾಯವಾತಿಷ್ಠೇ ದ್ದಂಡವಾಪಾತಯೇ ದ್ವಿಜಃ। ಯಥಾತ್ಮನಿ ಯಥಾದೇವೇ ಭಕ್ತಿರವ್ಯಭಿಚಾರಿಣೀ। ತಥಾ ಗುರೌ ಪರಾಭಕ್ತಿಃ ಕರ್ತವ್ಯಾ ಸಿದ್ಧಿಮಿಚ್ಛತಾ। ಗುರಾವತುಷ್ಟೇऽತುಷ್ಟಾಸ್ಸ್ಯುಸ್ಸರ್ವೇ ದೇವಾ ದ್ವಿಜೋತ್ತಮ। ತುಷ್ಟೇ ತುಷ್ಟಾಯತಸ್ತಸ್ಮಾತ್ಸರ್ವದೇವಮಯೋ ಗುರುಃ। ವಿನಾಗುರೋಃ ಪ್ರಸಾದೇನ ಸಂಸಿದ್ಧಿರ್ನಭವೇದ್ದ್ವಿಜ। ತಸ್ಮಾದ್ಗುರುಸ್ಸದಾಪೂಜ್ಯಃ ಜ್ಞಾನ ಸಂಸಿದ್ಧಿ ಮಿಚ್ಛತಾ॥"**

ಇದರ ತಾತ್ಪರ್ಯವೇನೆಂದರೆ:- ಓ ಶೌನಕರೇ ಶ್ರೇಷ್ಠವಾದ ಗುರುಶಿಷ್ಯಕ್ರಮವನ್ನು ಬೋಧಿಸುವೆನು ಸಾವಧಾನದಿಂದ ಕೇಳಿ, ಓ ಬ್ರಾಹ್ಮಣ ಶ್ರೇಷ್ಠರೇ, ಗುರುಪೂಜೆ

**ಆಚಾರ್ಯವಿಷಯೇ ಪ್ರತ್ಯುಪಕಾರಾಭಾವಮುಪಪಾದಯಿತಿ**

ಯನ್ನು ಅದರ ಮಹಾತ್ಮ್ಯೆಯನ್ನೂ ಹೇಳುವೆನು. ಗುರು ಸಮೀಪದಲ್ಲಿದ್ದರೆ, ಶಿಷ್ಯನು, ವಾಕ್ಕು ಶರೀರ ಮನಸ್ಸನ್ನೂ ನಿಗ್ರಹಿಸುವನಾಗಿ, ಮಾತ್ಸರ್ಯವನ್ನು ಬಿಟ್ಟವನಾಗಿ ಶುಶ್ರೂಷೆಯಿಂದ ಗುರುವನ್ನು ಸಂತೋಷಪಡಿಸತಕ್ಕದ್ದು. ಗುರುಸನ್ನಿಧಿಯಲ್ಲಿ ಆಸನದಲ್ಲಿ ಕೂತುಕೊಳ್ಳುವುದು, ಮಲಗುವದು, ಯಾನವನ್ನು ಹತ್ತಿರುವುದು, ಪರಿಹಾಸ ಮಾಡುವುದು, ಪ್ರತಿಯಾಗಿ ಹೇಳುವುದು, ಇವುಗಳನ್ನೆಲ್ಲಾ ತ್ಯಜಿಸತಕ್ಕದ್ದು. ಗುರುವು ನಿಂತರೆ ಶಿಷ್ಯನಾದವನೂ ನಿಲ್ಲತಕ್ಕದ್ದು. ಆತನು ಮಲಗಿದರೆ ತಾನೂ ಬೇರೆ ಕಡೆಯಲ್ಲಿ ನಿದ್ರಿಸಬಹುದು. ಅವರು ಕೂತರೆ ತಾನೂ ಕೂಡಬಹುದು. ಹೀಗೆ ಗುರುವೇ ತನಗೆ ಪರಮಗತಿ ಎಂದು ಭಾವಿಸಿ, ಅವರಿಗೆ ಅನುಗುಣವಾಗಿ ವರ್ತಿಸತಕ್ಕದ್ದು. ಯಾರಾದರೂ ತನ್ನ ಗುರುವನ್ನು ನಿಂದಿಸುವುದರಲ್ಲಿ ಇಚ್ಛೆಯುಳ್ಳವರಾದರೆ ಅವರುಗಳಿಂದ ತಾನು ದೂರವಾಗಿರತಕ್ಕದ್ದು, ಅಥವಾ ಕಿವಿಗಳನ್ನು ಬೆರಳಿನಿಂದ ಮುಚ್ಚಿಕೊಂಡಿರತಕ್ಕದ್ದು; ಅಥವಾ ಅವರನ್ನು ಶಿಕ್ಷಿಸತಕ್ಕದ್ದು. ತನ್ನ ಪರಿಶುದ್ಧಾತ್ಮಸ್ವರೂಪದಲ್ಲೂ ಮತ್ತು ಪರಮಪುರುಷನಲ್ಲೂ ಹೇಗೆ ಅವ್ಯಭಿಚರಿತವಾದ ಭಕ್ತಿಯೋ, ಹಾಗೆಯೇ ತನ್ನ ಶ್ರೇಯಸ್ಸನ್ನು ಅಪೇಕ್ಷಿಸುವವನು ಗುರುವಿನಲ್ಲೂ ಶ್ರೇಷ್ಠವಾದ ಭಕ್ತಿಯನ್ನು ಮಾಡತಕ್ಕದ್ದು. ಓ ಬ್ರಾಹ್ಮಣಶ್ರೇಷ್ಠರಾದ ಶೌನಕರೇ, ಗುರುವು ಶಿಷ್ಯನ ವಿಷಯದಲ್ಲಿ ಅಸಂತುಷ್ಟರಾದರೆ, ಈ ಶಿಷ್ಯನ ವಿಷಯದಲ್ಲಿ ಸಮಸ್ತ ದೇವತೆಗಳೂ ಅಸಂತುಷ್ಟರಾಗುವರು. ಗುರುವು ಸಂತುಷ್ಟರಾದರೆ ದೇವತೆಗಳೆಲ್ಲಾ ಸಂತುಷ್ಟರಾಗುವರು. ಆದುದರಿಂದ ಗುರುವು ಸಮಸ್ತ ದೇವತೆಗಳ ಸ್ವರೂಪಿಯು. ಗುರುಪ್ರಸಾದವಿಲ್ಲದೆ ಮೋಕ್ಷ ಸಿದ್ಧಿಯಿಲ್ಲವು. ಆದುದರಿಂದ ತತ್ವಹಿತಪುರುಷಾರ್ಥ ಜ್ಞಾನವನ್ನು ಅಪೇಕ್ಷಿಸುವ ಶಿಷ್ಯನಿಂದ ಗುರುವು ಪೂಜಿಸಲ್ಪಡಲು ಅರ್ಹನು" ಎಂಬುದು. **"ದೇವಮಿವಾಚಾರ್ಯಮುಪಾಸೀತ" "ಯಸ್ಯದೇವೇ ಪರಾಭಕ್ತಿಃ ಯಥಾದೇವೇ ತಥಾಗುರೌ"** ಇತ್ಯಾದಿ ಪ್ರಮಾಣಗಳೂ ಉಂಟು.

**ಆಚಾರ್ಯರ ವಿಷಯದಲ್ಲಿ ಪ್ರತ್ಯುಪಕಾರ ರೂಪದಲ್ಲಿ ಯಾವುದೂ ಬೇಕಿಲ್ಲವೆಂದು ಉಪಪಾದಿಸುತ್ತಾರೆ**

ಹಿಂದೆ ಸಙ್ಗ್ರಹ ಶ್ಲೋಕದಲ್ಲಿ ಹೇಳಿದುದು, ಆಚಾರ್ಯನ ವಿಷಯದಲ್ಲಿ ಅಸ್ಖಲಿತ ಭಕ್ತಿಯಿರಬೇಕೆಂದೂ, ಗುರುವನ್ನು ಪ್ರಕಾಶಪಡಿಸತಕ್ಕದ್ದೆಂದೂ, ಅವರಿಗೆ ಸಂಬಂಧಪಟ್ಟ ಸಮಸ್ತ ವಸ್ತುಗಳಲ್ಲೂ ಪೂಜ್ಯ ಭಾವವಿರಬೇಕೆಂದೂ, ತಾನು ಹೊಂದಿದ ಉಪದೇಶವನ್ನು ಸತ್ಪಾತ್ರನಲ್ಲಿ ವಿನಿಯೋಗಿಸಿ ಸತ್ಸಂಪ್ರದಾಯ ಕ್ರಮವನ್ನು ಕಾಪಾಡಬೇಕೆಂದೂ, ಆಚಾರ್ಯನಲ್ಲಿ ಸಂಪೂರ್ಣ ಕೃತಜ್ಞತಾ ಭಾವವಿರಬೇಕೆಂದೂ, ನಿರ್ದುಷ್ಟವಾದ ಪ್ರವೃತ್ತಿಗಳನ್ನುಳ್ಳವನಾಗಿರಬೇಕೆಂದೂ ಹೇಳಿ, ಅಂತವನಿಗೆ ಮುಕ್ತೈಶ್ವರ್ಯದಲ್ಲಿ ಸಂದೇಹವಿಲ್ಲವೆಂದು ಹೇಳಿದರು. ಆದರೆ ಆಚಾರ್ಯರಿಗೆ ಗುರುದಕ್ಷಿಣೆ ಮೊದಲಾ

**ಇವ್ವರ್ಥಙ್ಗಳೈ ಯೆಲ್ಲಾಮ್ ಮಿಡಿಯನುಕ್ಕು ಅಕತ್ತುಕ್ಕುಳ್ಳೇ ಮಹಾನಿಧಿಯೈ ಕ್ಕಾಟ್ಟಿಕೊಡುಕ್ಕುಮಾಪ್ಪೋಲೇ ವೆಳಿಯಿಡುಗೈ ಯಾಲೇ ಮಹೋಪಕಾರನಾನ ವಾಚಾರ್ಯತಿರತ್ತಿಲ್, ಶಿಷ್ಯನ್ ಕೃತಜ್ಞನಾಯಿರುಕ್ಕವೇಣುಮೆನ್ರುಮ್, ದ್ರೋಹಮ್ ಪಣ್ಣಾದೊ ಳಿಯ ವೇಣುಮೆನ್ರುಮ್,**

---

ದುವುಗಳನ್ನು ಸಲ್ಲಿಸಬೇಡವೋ? ಅವರ ಶುಶ್ರೂಷಾದಿಗಳಲ್ಲೇ ನಿರತನಾಗಿರಬೇಡವೋ? ಎಂಬ ಸಂದರ್ಭವಲ್ಲಿ, ಇವು ಯಾವುದನ್ನೂ ಪ್ರತ್ಯುಪಕಾರ ಭಾವದಿಂದ ಮಾಡತಕ್ಕದ್ದಲ್ಲವೆಂದು ತಿಳಿಸುತ್ತಾರೆ.

**ಇವ್ವರ್ಥಙ್ಗಳೈಯೆಲ್ಲಾಮ್** ಈ ತತ್ವಹಿತ ಪುರುಷಾರ್ಥ ವಿಷಯವಾದ ಉಪದೇಶಗಳೆಲ್ಲವನ್ನೂ **ಮಿಡಿಯನುಕ್ಕು**-ಮಹಾ ದರಿದ್ರನಿಗೆ, ಅಂತಹ ಶಿಷ್ಯನಿಗೆ, **ಅಕತ್ತುಕ್ಕುಳ್ಳೇ**ಅವನು ವಾಸ ಮಾಡುವ ಗೃಹದಲ್ಲೇ, **ಮಹಾನಿಧಿಯೈಕಾಟ್ಟಿ ಕ್ಕೊಡುಮಾಪ್ಪೋಲೆ**-ಆತನ ಮನೆಯಲ್ಲೇ ಮಹತ್ತಾದ ನಿಧಿ ಇದ್ದರೂ ಅದು ತಿಳಿಯದೇ ಇರುವವನಿಗೆ **ವೆಳಿಯಿಡುಹೈಯಾಲೇ**-ಪ್ರಕಾಶವಾಗಿ ತೋರ್ಪಡಿಸಿ ಉಪದೇಶಿಸಿದುದರಿಂದ, **ಮಹೋಪಕಾರಕನಾನ**-ಇಂತಹ ಮಹತ್ತಾದ ಉಪಕಾರವನ್ನು ಮಾಡಿದ, **ಆಚಾರ್ಯ ತಿರತ್ತಿಲ್**-ಆಚಾರ್ಯರ ವಿಷಯದಲ್ಲಿ, **ಶಿಷ್ಯನು ಕೃತಜ್ಞನಾಗಿರಬೇಕೆಂದೂ, ದ್ರೋಹಮ್ ಪಣ್ಣಾದೊಳಿಯವೇಣುಮೆನ್ರುಮ್**-ದ್ರೋಹವನ್ನು ಮಾಡದೇ ಇರಬೇಕೆಂದೂ, ಇಲ್ಲಿ ದ್ರೋಹವು ಯಾವುದು ಎಂದರೆ ಅವರು ಮಾಡಿದ ಮಹದುಪಕಾರ ಸ್ಮರಿಸದೆ, ಅವರನ್ನು ಪೂಜಿಸದೆ- ಅವರು ಮಾಡಿದುದನ್ನು ಪ್ರಕಾಶಪಡಿಸದೆ ಅವರಿಂದ ಉಪದಿಷ್ಟ ಜ್ಞಾನವನ್ನು ಸತ್ಪಾತ್ರದಲ್ಲಿ ವಿನಿಯೋಗಿಸದೇ, ಹೀಗೆಲ್ಲಾ ಇರುವುದೇ ದ್ರೋಹವು; ಇನ್ನು ಅಂತವರನ್ನು ಕುರಿತು ಅವರಿಗೇನು ತಿಳಿಯುವುದು ಎಂದು ಹೇಳಿ, ಅವರ ವೃತ್ತಿಗಳನ್ನು ಖಂಡಿಸುವುದು ಇವೇ ಮೊದಲಾದುವು ಪರಮ ದ್ರೋಹವು; ಹೀಗೆ ಇವೆರಡನ್ನೂ, **ಶಾಸ್ತ್ರಙ್ಗಳ್ ಶೊನ್ನವಿಡಮ್**-ಶಾಸ್ತ್ರಗಳು ಹೇಳಿದ ಸಂದರ್ಭವು ಏನೆಂದರೆ ಹೇಳುತ್ತಾರೆ- **ಇರಣ್ಡು ವಿಭೂತಿಯುಮ್**–ನಿತ್ಯ ವಿಭೂತಿಯಲ್ಲಿರುವ ನಿತ್ಯ ಮುಕ್ತರುಗಳೂ, ಮತ್ತು ಲೀಲಾವಿಭೂತಿಯಾದ ಸ್ವರ್ಗಾದಿ ಲೋಕಗಳಲ್ಲಿರುವ ದೇವತೆಗಳೂ, ಇಹ ಲೋಕದ ಮಹಾಭಾಗವತರೂ, ಮತ್ತು **ವಿಭೂತಿಮಾನುಮ್**–ಈ ಎರಡು ವಿಭೂತಿಗಳಿಗೂ ನಿಯಾಮಕನಾದ ಸರ್ವೇಶ್ವರನೂ, **ಇವನೈ**-ಇಂತಹ ಕೃತಜ್ಞತೆಯಿಲ್ಲದ ಮತ್ತು ದ್ರೋಹಯುಕ್ತನಾದ ಶಿಷ್ಯನನ್ನು, **ಛೀ ಛೀಯೆನ್ನುಮ್ ಪಡಿಯುಮಾಯ್**-ಛೀ ಛೀ ಎಂದು ಧಿಕ್ಕರಿಸುವ ಹಾಗೆ ಆಗಿ, **ಹಿತಮ್ ಶೊನ್ನ**-ಹಿತವನ್ನು ಬೋಧಿಸಿದ **ಪ್ರಹ್ಲಾದ ವಿಭೀಷಣಾದಿಗಳಿಗೆ, ಪ್ರತಿಕೂಲರಾನ**-ವಿರೋಧಿಗಳಾದ,

**ಶಾಸ್ತ್ರಜ್ಞಗಳ್ ಶೊನ್ನವಡವುಮ್ ಇರಣ್ಡು ವಿಭೂತಿಯುಮುಮ್, ವಿಭೂತಿ ಮಾನುಮ್ ಇವನ್ಕೈ ಚ್ಚೀ ಚ್ಚೀಯೆನ್ನುಮ್ ಪಡಿಯುವಾಯ್, ಹಿತಂ ಶೊನ್ನ ಪ್ರಹ್ಲಾದ ವಿಭೀಷಣಾದಿಗಳುಕ್ಕು ಪ್ರತಿಕೂಲರಾನ ಹಿರಣ್ಯರಾವಣಾದಿಗಳೋಡು ತುಲ್ಯವಾಯ್ (೧) "ವಿದ್ಯಾಚೋರೋ ಗುರುದ್ರೋಹೀ ವೇದೇಶ್ವರ ವಿದೂಷಕಃ। ತ ಏತೇ ಬಹುಪಾಪ್ಮಾನಃ ಸದ್ಯೋದಂಡ್ಯಾ ಇತಿಶ್ರುತಿಃ" ಎಙ್ಗಿರಪಡಿಯೇ**

---

**ಹಿರಣ್ಯರಾವಣಾದಿಗಳಕ್ಕು ತುಲ್ಯವಾಯ್**-ಹಿರಣ್ಯಕಶಿಪು ಆತನ ಮಂತ್ರಿ ಮೊದಲಾದವರಿಗೂ, ರಾವಣ ಅವನ ತಮ್ಮ ಕುಂಭಕರ್ಣ, ಮಗನಾದ ಇಂದ್ರಜಿತ್ತು ಇವರುಗಳಿಗೆ ಸಮನಾಗಿ, ಎಂದರೆ ನಮಗೆಲ್ಲಾ ರಕ್ಷಕನು ಮಹಾವಿಷ್ಣುವು, ಅವನ ಶರಣವನ್ನು ಹೊಂದತಕ್ಕದ್ದೆಂದು ಹಿತವನ್ನು ದೈತ್ಯಬಾಲರಿಗೆ ಉಪದೇಶಿಸಿದ್ದು ಹಿರಣ್ಯಕಶಿಪುವಿಗೆ ಸರಿಹೋಗಲಿಲ್ಲವು ಹಾಗೆಯೇ ವಿಭೀಷನು ರಾವಣಾದಿಗಳಿಗೆ ಸೀತೆಯನ್ನು ಶ್ರೀರಾಮನಲ್ಲಿ ಒಪ್ಪಿಸಿ, ಆತನಿಗೆ ಶರಣಾಗತರಾಗಿ ಬಾಳೋಣವೆಂಬ ಹಿತೋಪದೇಶವೂ ಇಷ್ಟವಾಗಲಿಲ್ಲವು. ಶ್ರೀಮದ್ಭಾಗವತದಲ್ಲಿ ಪ್ರಹ್ಲಾದನು ತನ್ನ ತಂದೆಗೆ ಹೇಳುತ್ತಾನೇನೆಂದರೆ- "**ತತ್ಸಾಧುಮನ್ಯೇಽಸುರವರ್ಯದೇಹಿನಾಂ ಸದಾ ಸಮುದ್ವಿಗ್ನಧಿಯಾಮಸದ್ಗ್ರಹಾತ್। ಹಿತ್ವಾತ್ಮಪಾತಂ ಗೃಹಮನ್ಧಕೂಪಂ ವನಂ ಗತೋ ಯದ್ಧರಿಮಾಶ್ರಯೇತ ॥** (೭.೫.೫.) ಪ್ರಹ್ಲಾದನು ತಂದೆಗೆ ಹಿತವನ್ನು ಹೇಳುತ್ತಾನೆ. ಏನೆಂದರೆ ಓ ಅಸುರಶ್ರೇಷ್ಠನೇ, ದೇಹಾತ್ಮಭ್ರಮೆ ಸ್ವತಂತ್ರಾತ್ಮಭ್ರಮೆಗಳ ಮೂಲಕವಾಗಿ ಅಸತ್ತುಗಳಾದ ಶಬ್ದಾದಿ ವಿಷಯೋಪಭೋಗಗಳಿಂದ ಯಾವಾಗಲೂ ಕ್ಲೇಶಗಳನ್ನು ಹೊಂದಿರುವ ಬುದ್ಧಿಯುಳ್ಳ ಕುತ್ಸಿತವಾದ ದೇಹವುಳ್ಳವರಿಗೆ, ಈ ಪರಿಶುದ್ಧನಾದ ಆತ್ಮನು ಬಿದ್ದು ನಷ್ಟವಾಗುವ, ತಳವೇ ಕಾಣವ ಕತ್ತಲಾದ ಭಾವಿಗೆ ಸದೃಶವಾದ ಸಾಂಸಾರಿಕ ಮನೆಯನ್ನು ಬಿಟ್ಟು, ಏಕಾಂತವಾಗಿರುವ ಅರಣ್ಯವನ್ನು ಸೇರಿ, ಸಂಸಾರಬಂಧವನ್ನು ಅಪಹರಿಸುವ ಶ್ರೀಹರಿಯನ್ನು ಆಶ್ರಯಿಸೋಣವೆಂಬುದು ನನಗೆ ಉಚಿತವಾಗಿ ತೋರುತ್ತದೆ ಎಂದು ಹೇಳಿರುತ್ತಾನೆ. ಶ್ರೀ ವಿಷ್ಣುಪುರಾಣದಲ್ಲೂ ಹಿರಣ್ಯಕಶಿಪುವು ಪುತ್ರನನ್ನು ಕುರಿತು, ಗುರುಗಳಲ್ಲಿ ಏನನ್ನು ಕಲಿತೆ ಹೇಳು ಎಂದು ಪ್ರಥಮತಃ ಪ್ರಶ್ನಿಸುತ್ತಾನೆ. ಅದಕ್ಕೆ ಪ್ರಹ್ಲಾದನು "**ಶ್ರೂಯತಾಂತಾತವಕ್ಷ್ಯಾಮಿ ಸಾರ ಭೂತಮ್**" ಎಂಬ ಪೀಠಿಕೆಯೊಂದಿಗೆ ಹೇಳುತ್ತಾನೆ. "**ಅನಾದಿಮಧ್ಯಾಂತ ಮಜಮವೃದ್ಧಿಕ್ಷಯಮಚ್ಯುತಮ್ । ಪ್ರಣತೋಸ್ಮ್ಯಂತಸಂತಾನಂ ಸರ್ವ ಕಾರಣ ಕಾರಣಮ್**" ಹೀಗೆ ಆರಂಭಿಸಿ ಹಿತವನ್ನು ಹೇಳುತ್ತಾ ಹೋದುದ್ದು ತಂದೆಗೆ ಕೋಪಕ್ಕೆ ಕಾರಣವಾಯಿತು. ಹಾಗೆಯೇ ರಾವಣನಿಗೂ ವಿಭೀಷಣನು ಹಿತವನ್ನು ಬೋಧಿಸುತ್ತಾನೆ. ಹೇಗೆಂದರೆ "**ತ್ವಜಸ್ವಕೋಪಂ ಸುಖ**

ದಂಡ್ಯನುಮಾಗಾನ್ನೈಕ್ಕಾಕವತ್ತನ್ನೈ; (ಅಲ್ಲದು) ಪ್ರತ್ಯುಪಕಾರಮ್ ಶೊನ್ನಪಡಿಯುನ್ನು. ೨) “ಶರೀರಮರ್ಥಂ ಪ್ರಾಣಂಚ ಸದ್ಗುರುಭ್ಯೋನಿವೇದಯೇತ್” ಎನ್ರುಮ್ ೩) “ಸರ್ವಸ್ವಂವಾ ತದರ್ಧಂವಾ ತದರ್ಧಾರ್ಧಮೇವವಾ। ಗುರವೇ ದಕ್ಷಿಣಾಂ ದದ್ಯಾದ್ಯಥಾಶಕ್ತ್ಯಾಪಿ ವಾ ಪುನಃ” ಎನ್ರುಮ್ ಇಪ್ಪಡೈಗಳಿಲ್ ಶೊಲ್ಲುಗಿರನ್ನೈಯುಮ್

---

**ಧರ್ಮನಾಶನಂ ಭಜಸ್ವಧರ್ಮಂ ರತಿ ಕೀರ್ತಿವರ್ಧನಮ್। ಪ್ರಸೀದ ಜೀವೇಮ ಸಪುತ್ರ ಬಾಂಧವಾಃ ಪ್ರದೀಯತಾಂ ದಾಶರಥಾಯ ಮೈಥಿಲೀ** (ರಾ. ಯುದ್ಧ. ೯. ೨೨) ಸುಖವನ್ನೂ ಧರ್ಮವನ್ನೂ ನಾಶ ಮಾಡುವ ಕೋಪವನ್ನು ತ್ಯಜಿಸು; ಆನಂದವನ್ನೂ ಕೀರ್ತಿಯನ್ನೂ ವೃದ್ಧಿಗೊಳಿಸುವ ಧರ್ಮವನ್ನು ಆಶ್ರಯಿಸು. ಓ ಅಣ್ಣನೇ ಪ್ರಸನ್ನನಾಗು; ಪುತ್ರಬಂಧುಗಳೊಡನೆ ಬಾಳಬೇಕಾದರೆ, ಸೀತೆಯು ದಶರಥ ಪುತ್ರನಾದ ಶ್ರೀರಾಮಚಂದ್ರ ಪ್ರಭುವಿಗೆ ಸಮರ್ಪಿಸಲ್ಪಡಲಿ ಎಂದು ಪರಮ ಹಿತೋಕ್ತಿಯನ್ನು ಹೇಳಿರುತ್ತಾನೆ. ಆದುದರಿಂದ ಈ ಶಿಷ್ಯನೂ ಅವರುಗಳಿಗೆ ಸಮನಾಗಿ, (೧) **ವಿದ್ಯಾಚೋರಃ**-ಶಿಷ್ಯನು ವಿದ್ಯೆಯನ್ನು ಸದಾಚಾರ್ಯರಿಂದ ಸಂಪಾದಿಸಿಕೊಂಡು, ಅದನ್ನು ಸತ್ಪಾತ್ರನಿಗೆ ಕೊಡದೇ ತನ್ನಲ್ಲೇ ಇಟ್ಟುಕೊಂಡುದುದರಿಂದ ಬ್ರಹ್ಮವಿದ್ಯಾ ಕಳ್ಳನಾಗಿ, ಆ ಕಾರಣದಿಂದಲೇ **ಗುರುದ್ರೋಹಿಯಾಗಿರುವವನು,** ಅಥವಾ ಮುಂದೆ **ಏತೇತೇ** ಎಂದಿರುವುದರಿಂದ ಬೇರೆ ಬೇರೆಯಾಗಿ ಭಾವಿಸಿ, ಗುರುವಿಗೆ ದ್ರೋಹಮಾಡುವವನೆಂದೂ ಅರ್ಥಮಾಡಬಹುದು; **ವೇದೇಶ್ವರ ವಿದೂಷಿಕಃ**-ವೇದವನ್ನೂ ಈಶ್ವರನನ್ನೂ ದೂಷಿಸುವವನಾಗಿ, **ಏತೇತೇ**-ಇವರೆಲ್ಲರೂ, **ಬಹು ಪಾಪ್ಮಾನಃ**-ತುಂಬಾ ಪಾಪಿಗಳು, **ಸದ್ಯಃ**-ತಕ್ಷಣದಲ್ಲೇ, **ಸದ್ಯಃಸಪದಿ ತತ್ಕ್ಷಣೇ ಎಂಬ ನಿಘಂಟು** ಇರುತ್ತದೆ, **ದಂಡ್ಯಾಃ**-ಶಿಕ್ಷಿಸಲ್ಪಡಲು ಅರ್ಹರು. **ಇತಿಶ್ರುತಿಃ**-ಎಂದು ಶ್ರುತಿಯಲ್ಲಿ ಹೇಳಲ್ಪಟ್ಟಿರುತ್ತದೆ” ಎಞ್ಗಿ **ರಪಡಿಯೇ**-ಎಂದು ಹೇಳಿರುವ ಹಾಗೆ **ದಂಡ್ಯನುಮಾಗಾನ್ನೈಕ್ಕಾಕ**-ಹಾಗೆ ದಂಡಿಸಲ್ಪಡತಕ್ಕವನು ಆಗದ ಹಾಗೆ, **ಅತ್ತನ್ನೈ**-ಅದಕ್ಕಾಗಿಯೇ ಹೇಳಿದುದು **ಅಲ್ಲದು**-ಹಾಗಲ್ಲದೆ, **ಪ್ರತ್ಯುಪಕಾರಮ್ ಶೊನ್ನಪಡಿಯುನ್ನು**-ಆಚಾರ್ಯರಿಗೆ ಪ್ರತ್ಯುಪಕಾರವಾಗಿ ಮಾಡತಕ್ಕದ್ದೆಂದು ಹೇಳಿದುದಲ್ಲವು. ಆಚಾರ್ಯರ ವಿಷಯದಲ್ಲಿ ಹೀಗೆಲ್ಲಾ ನಡೆದುಕೊಳ್ಳಬೇಕೆಂದು ಹೇಳಿದುದು ಪ್ರತ್ಯುಪಕಾರ ಭಾವನೆಯಿಂದ ಹಾಗೆ ಹೇಳಲ್ಪಟ್ಟಿತೆಂದು ಊಹಿಸತಕ್ಕದ್ದಲ್ಲವು. ಆಚಾರ್ಯರ ವಿಷಯದಲ್ಲಿ ಕೃತಜ್ಞನಾಗಿರಬೇಕೆಂದೂ ದ್ರೋಹ ಮಾಡಕೂಡದೆಂದೂ ಹೀಗೆಲ್ಲಾ ಹಿಂದೆ ಹೇಳಿರುವುದು ಶಿಷ್ಯನ ಹಿತಕ್ಕಾಗಿಯೆಂದು ಮಾತ್ರ ಭಾವಿಸತಕ್ಕದ್ದು. ಭಗವನ್ನಿಗ್ರಹವುಂಟಾಗದಿರುವುದಕ್ಕಾಗಿ ಎಂದು ಭಾವಿಸತಕ್ಕದ್ದೆಂಬ ಭಾವವು. “**ತಸ್ಮೈ**

---

೨) ವಿಹಗೇಂದ್ರಸಂಹಿತೆ ೩)

**ನದ್ರುಹ್ಯೇತ್, ಕೃತಮಸ್ಯ ಜಾನೀಹಿ** ಎಂಬ ಪ್ರಮಾಣವಿದೆ. ಆಗಲಿ, ಕೆಲವು ಕಡೆಗಳಲ್ಲಿ ಆಚಾರ್ಯರಿಗೆ ಗುರುದಕ್ಷಿಣೆ ಮೊದಲಾದುವುಗಳನ್ನು ಕೊಡಬೇಕೆಂಬ ಪ್ರಮಾಣಗಳಿವೆಯಲ್ಲಾ, ಅವು ಪ್ರತ್ಯುಪಕಾರ ಭಾವನೆಯಿಂದ ಹೇಳಿದವಲ್ಲವೋ? ಎಂದರೆ, ಅವುಗಳೂ ಪ್ರತ್ಯುಪಕಾರ ಭಾವನೆಯಿಂದಲ್ಲವು, ಶಿಷ್ಯನ ಕೆಲವು ಇತಿಕರ್ತವ್ಯತೆಗಳು ಹೇಳಲ್ಪಟ್ಟವೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. ಪ್ರತ್ಯುಪಕಾರವೆಂದು ತೋರುವ ಒಂದೆರಡು ಪ್ರಮಾಣಗಳನ್ನು ಉದಾಹರಿಸುತ್ತಾರೆ.

(೨) **ಶರೀರಂ**-ಶಿಷ್ಯನು ಶುಶ್ರೂಷಾರೂಪದಲ್ಲಿ ತನ್ನ ಶರೀರವನ್ನು ಅಥವಾ **ಅರ್ಥಂ**-ತನ್ನ ದ್ರವ್ಯವನ್ನೂ, **ಪ್ರಾಣಂಚ**-ತನ್ನ ಪ್ರಾಣವನ್ನೂ ಸಹ **ಸದ್ಗುರುಭ್ಯಃ**-ತನ್ನ ಸದಾಚಾರ್ಯರಿಗೋಸ್ಕರವಾಗಿ, **ನಿವೇದಯೇತ್**-ಸಮರ್ಪಿಸತಕ್ಕದ್ದು; ಎಂದರೆ ಆಚಾರ್ಯರಿಗೆ ಬೇಕಾಗಿ ಅವಕಾಶ ದೊರೆತರೆ ತಾನು ಅಗತ್ಯ ಶುಶ್ರೂಷೆಯನ್ನು ಮಾಡತಕ್ಕದ್ದು; ಅನ್ನವಸ್ತ್ರಾದಿಗಳಿಗೆ ಅನುಕೂಲವಿಲ್ಲವೆಂದು ತೋರಿದರೆ ತನ್ನ ದ್ರವ್ಯವನ್ನು ಅವರಿಗಾಗಿ ಉಪಯೋಗಿಸತಕ್ಕದ್ದು; ತನ್ನ ಪ್ರಾಣವನ್ನೂ ಕೂಡ ಲಕ್ಷಿಸದೆ ಅವರಿಗೆ ಸಹಾಯ ಮಾಡಬೇಕಾದ ಅವಸರ ಒದಗಿದರೆ ಹಾಗೆಯೂ ಮಾಡತಕ್ಕದ್ದು ಎಂಬ ಭಾವವು. ಎಲ್ಲವನ್ನೂ ಒಡನೆಯೇ ಒಪ್ಪಿಸೇ ಬಿಡತಕ್ಕದ್ದೆಂಬ ತಾತ್ಪರ್ಯವಲ್ಲವು. ಅವರು ಶಿಷ್ಯನಿಗೆ ಮಾಡಿರುವ ಉಪಕಾರವು ಅಷ್ಟು ಮಹತ್ತಾದುದರಿಂದ ಹಾಗೆಲ್ಲಾ ನಡೆದುಕೊಳ್ಳತಕ್ಕದ್ದೆಂಬುದು ಸಂಚಿತತಾತ್ಪರ್ಯವು. **ಎನ್ರುವನ್**-ಎಂಬುದಾಗಿಯೂ **ಸರ್ವಸ್ವಂವಾ**-ಸಮಸ್ತವನ್ನೇಯಾಗಲಿ, **ತದರ್ಧಂವಾ**-ಅದರಲ್ಲಿ ಅರ್ಧವನ್ನಾಗಲಿ, **ತದರ್ಧಾದರ್ಧಮೇವ**-ಅರ್ಧದಲ್ಲಿ ಅರ್ಧವೆಂದರೆ ಕಾಲುಭಾಗವನ್ನಾಗಲಿ, ಹೀಗೆ **ವಾ** ಎಂದು ವಿಕಲ್ಪಿಸಿ ಹೇಳಿದುದರಿಂದ ನಿರ್ಬಂಧವೇನೂ ಇಲ್ಲವು. ಯಥಾಶಕ್ತಿ ತನ್ನ ವೈರಾಗ್ಯಭಾವಕ್ಕನುಗುಣವಾಗಿ ಸಮರ್ಪಿಸಬಹುದೆಂದಾಯಿತು; ಇದೇ ಮುಂದೆ ಹೇಳಲ್ಪಡುತ್ತದೆ. **ಗುರವೇ**-ಆಚಾರ್ಯರಿಗೆ, **ಯಥಾಶಕ್ತ್ಯಪಿವಾಪುನಃ**-ತನ್ನ ಶಕ್ತ್ಯನುಸಾರವಾಗಿ **ದಕ್ಷಿಣಾಂದದ್ಯಾತ್** – ದಕ್ಷಿಣೆಯನ್ನು ಕೊಡತಕ್ಕದ್ದು. **ಅಪಿವಾ ಪುನಃ** – ತನ್ನ ಕೈಲಾದಮಟ್ಟಿಗೆ ಪುನಃಪುನಃ ಸಮರ್ಪಿಸತಕ್ಕದ್ದು. ಸಮಯಗಳಲ್ಲಿ, ಪ್ರಾಚಾರ್ಯೈಂಕರ್ಯ ಅವರ ತಿರುನಕ್ಷತ್ರ ಮೊದಲಾದ ಸಮಯಗಳಲ್ಲಿ ಪದೇಪದೇ ಯಥಾಶಕ್ತಿ ಸಮರ್ಪಿಸಬಹುದು ಎಂಬ ಭಾವವು. ಕೃತಜ್ಞತಾಭಾವವಿರುವುದರಿಂದ ತನಗೆ ಎಷ್ಟು ಶಕ್ತಿಯೋ ತದನುಗುಣವಾಗಿ ಸಮರ್ಪಿಸಬಹುದು. ಇದರಿಂದ ಆಚಾರ್ಯರೂ ಕೂಡ ಇಷ್ಟೇ ಕೊಡು ಎಂದು ನಿರ್ಬಂಧಿಸುವದೂ ನ್ಯಾಯವಲ್ಲವೆಂಬುದೂ ತೋರಿಬರುತ್ತದೆ. ಇದನ್ನೇ ಮುಂದೆ ಹೇಳುತ್ತಾರೆ. ಕೆಲವರು ಆಚಾರ್ಯರು ಬಂದರೆ ಶಿಷ್ಯನು ತನಗೆ ಬರುವ ಒಂದು ತಿಂಗಳ ವರಮಾನವನ್ನು ಅವರಿಗೆ ಕೊಟ್ಟುಬಿಡಬೇಕೆಂದು ಅವರ ಪರಿಚರ್ಯದಲ್ಲಿರುವವರು ನಿರ್ಬಂಧಿಸುವರು. ಇದು ಶಾಸ್ತ್ರಜ್ಞಾನಶೂನ್ಯತೆಯ ವಿಜೃಂಭಣೆಯು. **ಇಪ್ಪಡೈಗಳಿಲ್**-ಈ ಪ್ರಕಾರಗಳಲ್ಲಿ **ಚೊಲ್ಲುಗಿರವೈಯುಮ್** – ಹೇಳಿರುವುದೂ, **ಪ್ರಣಿಪಾತಾಭಿವಾದನಾದಿಗಳೈ**

**ಪ್ರಣಿಪಾತಾಭಿವಾದನಾದಿಗಳೈಪ್ಪೋಲೆ ಇವನುಕ್ಕು ಚ್ಚಿಲ ಕರ್ತ್ತವ್ಯ ಙ್ಗಳೈ ಚೊಲ್ಲವಿತ್ತತ್ತನೈಪ್ಪೋಕ್ಕಿ, ೫) "ಕೃಪಯಾನಿಸ್ಪೃಹೋವ ದೇತ್" ಎನ್ನುಮ್ಪಡಿ ಇರುಕ್ಕಿರ ಅನನ್ಯ ಪ್ರಯೋಜನನಾನ ಆಚಾರ್ಯನುಕ್ಕು ಪ್ರತ್ಯುಪಕಾರಮ್ ಚೊನ್ನಪಡಿಯನ್ರು. ಭಗವಾನ್ಪ**

---

**ಪ್ಪೋಲೆ**-ಆಚಾರ್ಯರಿಗೆ ಮಾಡುವ ನಮಸ್ಕಾರ ಅಭಿವಾದನ ಮೊದಲಾದವುಗಳಹಾಗೆ **ಇವನುಕ್ಕು**- ಈ ಸಚ್ಛಿಷ್ಯನಿಗೆ, **ಶಿಲಕರ್ತ್ತವ್ಯಙ್ಗಳೈಶೊಲ್ಲಿತ್ತತ್ತನೈಪ್ಪೋಕ್ಕಿ**— ಶಿಷ್ಯಕ್ರಮ ಸ್ವರೂಪಪ್ರಾಪ್ತಗಳಾದ ಇತಿಕರ್ತ್ತವ್ಯತೆಗಳನ್ನು ಹೇಳಿದುದಷ್ಟೇ ವಿನಾ ಇನ್ನೇನೂ ಪ್ರತ್ಯುಪಕಾರ ಭಾವದಿಂದ ಮಾಡತಕ್ಕದೆಂಬ ಭಾವನೆಯಿಂದಲ್ಲವೆಂಬ ತಾತ್ಪರ್ಯವು ; ಇದನ್ನೇ ಮುಂದೆ ಹೇಳುತ್ತಾರೆ.

(೫) **"ಕೃಪಯಾ ನಿಸ್ಪೃಹೋವದೇತ್"**-ಆಚಾರ್ಯನು ತನ್ನ ಸಚ್ಛಿಷ್ಯನಿಗೆ ಪರಮ ಕೃಪೆಯಿಂದ ಏನೊಂದೂ ಆಶೋತ್ತರಗಳನ್ನಿಟ್ಟುಕೊಳ್ಳದೆ ಎಂದರೆ ಪ್ರತ್ಯುಪ ಕಾರವನ್ನು ಬಯಿಸದೆ, ಉಪದೇಶಿಸತಕ್ಕದು, **ಎನ್ನುಮ್ಪಡಿ** - ಎಂದು ಸ್ಮೃತಿಯಲ್ಲಿ ಹೇಳಿರುವಹಾಗೆ, ಇರುಕ್ಕಿರ–ಇರುವ, **ಅನನ್ಯ ಪ್ರಯೋಜನನಾನ ಆಚಾರ್ಯ ನುಕ್ಕು**-ಬೇರೆ ಇನ್ನು ಯಾವ ಪ್ರಯೋಜನವನ್ನೂ ಬಯಿಸದೇ ಇರುವ ಆಚಾರ್ಯನಿಗೆ, **ಪ್ರತ್ಯುಪಕಾರಂ ಶೊನ್ನಪಡಿಯನ್ರು** – ಪ್ರತ್ಯುಪಕಾರರೂಪದಲ್ಲಿ ಅವುಗಳನ್ನು ಕೊಡತಕ್ಕದ್ದೆಂದು ಹೇಳಿದುದಲ್ಲವು. **ಕೃಪಯಾ ನಿಸ್ಪೃಹೋವದೇತ್** ಎಂಬ ಶಾಂಡಿಲ್ಯಸ್ಮೃತಿ ವಾಕ್ಯವು ಆಚಾರ್ಯಕೃತ್ಯಧಿಕಾರದಲ್ಲಿ ಉದಾಹೃತವು. ಅದನ್ನು ಪರಾಂಬರಿಸತಕ್ಕದ್ದು. ಅಲ್ಲಿ ಆಚಾರ್ಯರು ಶಿಷ್ಯನನ್ನು ಚನ್ನಾಗಿ ಪರೀಕ್ಷಿಸಿ ಸತ್ಪಾತ್ರ ನೆಂದು ಕಂಡರೆ, ಪ್ರತಿಫಲವನ್ನಪೇಕ್ಷಿಸದೆ ಕೃಪೆಯಿಂದ ಉಪದೇಶಿಸತಕ್ಕದ್ದೆಂದು ಹೇಳ ಲ್ಪಟ್ಟಿರುತ್ತದೆ. ಆದುದರಿಂದ ಆಚಾರ್ಯರು ಏನನ್ನೂ ಅಪೇಕ್ಷಿಸುವುದಿಲ್ಲವು. ಶಿಷ್ಯನು ತನ್ನ ಕೃತಜ್ಞತಾಭಾವದಿಂದ ಶುಶ್ರೂಷೆ ದ್ರವ್ಯಸಹಾಯ ಮೊದಲಾದವುಗಳನ್ನು ಮಾಡ ಬಹುದು. ಆದರೆ ಪ್ರತ್ಯುಪಕಾರ ಭಾವದಿಂದಲ್ಲವು ; ಏಕೆಂದರೆ ಅವರು ಪ್ರತ್ಯುಪಕಾರ ವನ್ನು ಅಪೇಕ್ಷಿಸುವರಲ್ಲವಾದುದರಿಂದ.

ಆಚಾರ್ಯನ ವಿಷಯದಲ್ಲಿ ಶಿಷ್ಯನು ಹೇಗೆ ನಡೆದುಕೊಳ್ಳಬೇಕೆಂದು ಹೇಳುವ ಶಾಂಡಿಲ್ಯಸ್ಮೃತಿ ಆಪಸ್ತಂಬ ವಾಕ್ಯಗಳನ್ನು ಉದಾಹರಿಸಿ, ಅವೂ ಸಹ ಕೃತಜ್ಞತಾ ಭಾವವನ್ನು ಬೋಧಿಸಿದವೇ ವಿನಾ ಪ್ರತ್ಯುಪಕಾರರೂಪದಲ್ಲಿ ಮಾಡತಕ್ಕದ್ದೆಂದು ವಿಧಿಸಲಿಲ್ಲವೆಂದು ಹೇಳುತ್ತಾರೆ.

**ಭಗವಾನ್ಪಕ್ಕಲಿಲ್ ಪೋಲೆ** - ಭಗವಂತನ ವಿಷಯದಲ್ಲಿ ಹೇಗೋ ಹಾಗೆ, **ಆಚಾರ್ಯನ್ಪಕ್ಕಲಿಲೇ ವರ್ತ್ತಿಪ್ಪಾನೆನ್ರು** - ಶಿಷ್ಯನೂ ತನ್ನ ಆಚಾರ್ಯರ

---

**೫) ಶಾಣ್ಡಿಲ್ಯ. ೧.೧೧೬**

**ಕ್ಕಲಿಲ್ ಪೋಲೇ ಆಚಾರ್ಯನ್ಪಕ್ಕಲಿಲೇ ವರ್ತಿಪ್ಪನೆನ್ಱುಮ್, ಅವನುಕ್ಕು ನಲ್ಲಾನಾನಾರ್ಪ್ಪೋಲೆ, ಆಚಾರ್ಯನುಕ್ಕುಂ, ನಲ್ಲಾನಾಯ್‌ಯಿರುಪ್ಪಾನೆನ್ಱುಮ್, ವೇದಾಂತಙ್ಗಳಿಲ್ ಶೊನ್ನದವುಮ್ ೧) "ನ ಪ್ರಮಾದ್ಯೇದ್ಗುರೌ ಶಿಷ್ಯೋ ವಾಙ್ಮನಃ ಕಾಯಕರ್ಮಭಿಃ। ಅವಿಭಜ್ಯಾತ್ಮನಾಚಾರ್ಯಂ ವರ್ತೇತಾಸ್ಮಿನ್ ಯಥಾಚ್ಯುತೇ" ೨) "ದೇವಮಿವ ಆಚಾರ್ಯಮುಪಾಸೀತ" ಎನ್ಱುಮ್ ಶಾಂಡಿಲ್ಯ ಆಪಸ್ತಂಬಾದಿಗಳ್ ಶೊನ್ನದುವುಮ್ ಆಚಾರ್ಯನುಕ್ಕು ಪ್ರತ್ಯುಪಕಾರಮ್ ಶೊನ್ನಪಡಿಯುನ್ಱು**

---

ವಿಷಯದಲ್ಲೂ ನಡೆಯತಕ್ಕದ್ದೆಂದು, **ಅವನುಕ್ಕು ನಲ್ಲಾನಾನಾರ್ಪ್ಪೋಲೇ** - ಭಗವಂತನಿಗೆ ಭಕ್ತಿ ವಿಶ್ವಾಸವುಳ್ಳವನಾಗಿ ಪ್ರಿಯನಾಗುವ ಹಾಗೆ, **ಆಚಾರ್ಯನುಕ್ಕುಂ ನಲ್ಲಾನಾನಾಯಿರುಪ್ಪನೆನ್ಱುಮ್** - ತನ್ನ ಆಚಾರ್ಯನಲ್ಲೂ ಭಕ್ತಿ ವಿಶ್ವಾಸ ಮೂಲಕ ಪ್ರಿಯನಾಗಿರುವವನೆಂದು, **ವೇದಾಂತಙ್ಗಳಿಲ್** - ಉಪನಿಷತ್ತುಗಳಲ್ಲಿ, **ಶೊನ್ನದವುಮ್**- **"ಯಸ್ಯದೇವೇ ಪರಾಭಕ್ತಿಃ ಯಥಾದೇವೇ ತಥಾಗುರೌ"** **ಸರ್ವೇಶ್ವರ**ನಲ್ಲಿ ಪರಭಕ್ತಿಯನ್ನು ಮಾಡುವ ಹಾಗೆ ಆಚಾರ್ಯನಲ್ಲೂ ಮಾಡತಕ್ಕದ್ದೆಂದು ಹೇಳಿರುವದೂ, ಮತ್ತು "**ಶಿಷ್ಯಃ** - ಶಿಷ್ಯನು, **ಗುರೌ** - ಆಚಾರ್ಯನಲ್ಲಿ, **ವಾಙ್ಮನಃ ಕಾಯಕರ್ಮಭಿಃ** - ವಾಕ್ಕಿನ, ಮನಸ್ಸಿನ, ಮತ್ತು ಶರೀರದ ಪ್ರವೃತ್ತಿಗಳಿಂದ, **ಅವಿಭಜ್ಯ ಆತ್ಮನಾ** - ತನ್ನಿಂದ ಬೇಧವಂದೆಣಿಸದೆ, ತಾನು ಬೇರೆ ಆಚಾರ್ಯರು ಬೇರೆ ಎಂಬ ಭಾವನೆಯಿಲ್ಲದೆ, **ನಪ್ರಮಾದ್ಯೇತ್** - ಅಜಾಗರೂಕತೆಯನ್ನು ಮಾಡತಕ್ಕದ್ದಲ್ಲವು, ಅವರ ವಿಷಯದಲ್ಲಿ ಜಾಗರೂಕನಾಗಿರತಕ್ಕದ್ದು ; ಅಪರಾಧಾದಿಗಳುಂಟಾಗದ ಹಾಗೆ ನಡೆದುಕೊಳ್ಳತಕ್ಕದ್ದು. **ಅಸ್ಮಿನ್**-ಈ ಆಚಾರ್ಯರಲ್ಲಿ **ಅಚ್ಯುತೇ** – ಶ್ರೀ ಮಹಾವಿಷ್ಣುವಿನಲ್ಲಿ **ಯಥಾವರ್ತೇತ್** - ಹೇಗೆ ಭಕ್ತಿ ವಿಶ್ವಾಸಗಳಿಂದ ನಡೆದುಕೊಳ್ಳಬೇಕೋ, ಹಾಗೆಯೇ ನಡೆದುಕೊಳ್ಳತಕ್ಕದ್ದು. **ಅಚ್ಯುತ** ಶಬ್ದಕ್ಕೆ ಸಹಸ್ರನಾಮದಲ್ಲಿ ಮೂರು ವಿಧವಾಗಿ ಅರ್ಥ ಮಾಡಲ್ಪಟ್ಟಿರುತ್ತದೆ.

೧) **" ಆಶ್ರಿತಾನಾಂ ಚ್ಯುತಿರ್ಯಸ್ಮಾನ್ನಾಸ್ತಿ ಸೋಽಚ್ಯುತ ಈರಿತಃ "** ಆಶ್ರಿತರಿಗೆ ಯಾವನಿಂದ ಏನೊಂದು ಚ್ಯುತಿ ಇಲ್ಲವೋ ಆತನು ಅಚ್ಯುತನು.

೨) ಬ್ರಹ್ಮರುದ್ರೇಂದ್ರಾದಿಗಳ ಹಾಗೆ ತನ್ನ ಸ್ಥಾನದಿಂದ ಜಾರದವನು ಅಚ್ಯುತನು. "ಯಸ್ಮಾನ್ನಚ್ಯವತೇಸ್ಥಾನಾತ್ತಸ್ಮಾತ್ಸಂಕೀರ್ತ್ಯತೇಽಚ್ಯುತಃ.

೩) ಪ್ರಳಯದಲ್ಲಿ ಲೀಲಾ ವಿಭೂತಿಯ ತತ್ವಗಳಿಗೆ ಅವಸ್ಥಾಚ್ಯುತಿಯುಂಟೇ ವಿನಾ ತನಗೆ ಯಾವ ಚ್ಯುತಿಯೂ ಇಲ್ಲದವನು.

---

೧) ಶಾಂಡಿಲ್ಯ ಸ್ಮೃತಿ. ೧.೧೧೮. ೨) ಆಪಸ್ತಂಬ ೧.೨.೬.

**ಶಾಸ್ತ್ರಚಕ್ಷುಸ್ಸಾನ ಇವರ್ ವಿಳಿಕಣ್ ಕುರುಡನಾ ಕಾನ್ಯೈಕ್ಕುವುಮ್, ಭಗವದನುಭವಮ್ ಪೋಲೆ ವಿಲಕ್ಷಣಮಾನ ವಿವ್ವನುಭವತ್ತೈ ಜನ್ಮಭಿಕ್ಷುವಾನ ಇವರ್ ಇಳವಾನ್ಯೈಕ್ಕುಮ್ ಶೊಲ್ಲಿತ್ತಿತ್ತನ್ನೈ ಇಪ್ಪಡಿ**

---

"ಮಂತ್ರೇ ತದ್ದೇವತಾಯಾಂಚ ತಥಾ ಮನ್ತ್ರಪ್ರದೇಗುರೌ। **ತ್ರಿಷು ಭಕ್ತಿ ಸ್ಸದಾಕಾರ್ಯಾಸಾಹಿ ಪ್ರಥಮಸಾಧನಮ್**" ಎಂಬುದೂ ಇಲ್ಲಿ ಅನುಸಂಧೇಯವು; ಮತ್ತು "**ದೇವಮಿವ**-ಭಗವಂತನನ್ನು ಹೇಗೋ ಹಾಗೆ, **ಆಚಾರ್ಯಂ**-ಆಚಾರ್ಯನನ್ನು, **ಉಪಾಸೀತ**-ಭಕ್ತಿಯಿಂದ ಧ್ಯಾನಿಸತಕ್ಕದ್ದು. ಇಲ್ಲಿ ಉಪಾಸೀತ ಎಂಬುದು ಪದೇ ಪದೇ ಕೃತಜ್ಞತಾಭಾವದಿಂದ ಸ್ಮರಿಸತಕ್ಕದ್ದೆಂಬರ್ಥದಲ್ಲಿ ಪ್ರಯೋಗಿಸಲ್ಪಟ್ಟಿರುತ್ತದೆ. ಇದು ಆಪಸ್ತಂಬನವಚನವು **ಎನ್ರುಮ್**-ಎಂದು ಶಾಂಡಿಲ್ಯ ಆಪಸ್ತಂಬ ಸ್ಮೃತಿ ಮೊದಲಾದವುಗಳು, **ಶೊನ್ನದುವುಮ್**-ಹೇಳಿರುವುದೂ ಕೂಡ, **ಆಚಾರ್ಯನುಕ್ಕು ಪ್ರತ್ಯುಪಕಾರಮ್ ಶೊನ್ನಪಡಿಯನ್ರು** – ಆಚಾರ್ಯನಿಗೆ ಪ್ರತ್ಯುಪಕಾರರೂಪವಲ್ಲಿ ಮಾಡತಕ್ಕದ್ದೆಂದು ಹೇಳಿದಹಾಗೆ ಅಲ್ಲವು. ಹಾಗಾದರೆ, ಯಾವ ಅಭಿಪ್ರಾಯದಿಂದ ಹೇಳಿದುದು ಎಂದರೆ ತಿಳಿಸುತ್ತಾರೆ. **ಶಾಸ್ತ್ರ ಚಕ್ಷುಸ್ಸಾನ** - ಶಾಸ್ತ್ರವೇ ಕಣ್ಣಾಗಿವುಳ್ಳ, ಇವರ್ – ಈ ಪ್ರಪನ್ನನು, **ವಿಳಿಕಣ್ ಕುರುಡನಾಕಾನ್ಯೈಕ್ಕುಮ್** – ತನ್ನ ಬಾಹ್ಯಚಕ್ಷಸ್ಸು ತೆರದಿದ್ದರೂ ಪ್ರವೃತ್ತಿಯಲ್ಲಿ ಶಾಸ್ತ್ರಾನುಗುಣವಾಗಿ ನಡೆಯದೆ ಕುರುಡನೋಪಾದಿಯಲ್ಲಿ ಅಜ್ಞಾನಪ್ರವೃತ್ತಿ ಇಲ್ಲದಿರುವಂತಕ್ಕಾಗಿಯೂ **ಭಗವದನುಭವಂಪೋಲೆ ವಿಲಕ್ಷಣಮಾನ-ಇವ್ವನುಭವತ್ತೈ**- ಗುರುವಿನಿಂದ ಜ್ಞಾನವನ್ನು ಹೊಂದಿದುದರಿಂದ ಇರಬೇಕಾದ ಭಕ್ತಿ ವಿಶ್ವಾಸ ರೂಪವಾದ ಅನುಭವವನ್ನು, **ಜನ್ಮ ಭಿಕ್ಷುವಾನ ಇವರ್** – ಪ್ರಾಯಶಃ ಜನ್ಮ ಮೊದಲುಗೊಂಡು ದರಿದ್ರನಾಗಿರುವ ಇವನು, **ಇಳವಾನ್ಯೈಕ್ಕುಮ್** – ಕೃತಜ್ಞತಾಭಾವವಿರಬೇಕೇ ವಿನಾ ತ್ಯಜಿಸದೇ ಇರುವುದಕ್ಕಾಗಿ, **ಶೊಲ್ಲಿತ್ತು ಅತ್ತನ್ನೈ** - ಗುರುದಕ್ಷಿಣೆಯನ್ನು ಕೊಡತಕ್ಕದ್ದೆಂದು ಹೇಳಿತೇ ವಿನಾ ಪ್ರತ್ಯುಪಕಾರ ಭಾವದಿಂದ ಹೇಳಲಿಲ್ಲವೆಂಬ ತಾತ್ಪರ್ಯವು. ಆಚಾರ್ಯರಿಂದ ಉಪದೇಶವಾಗಿ ಶಾಸ್ತ್ರೀಯವೇದ ಉಂಟಾದರೂ, ಅದರಿಂದ ಆಚಾರ್ಯರಲ್ಲಿ ಭಕ್ತಿ ವಿಶ್ವಾಸ ಕೃತಜ್ಞತಾಭಾವಗಳು ಉಂಟಾಗಬೇಕು, ಕೆಲವರಿಗೆ ಹಾಗೆ ಉಂಟಾಗದೇ ಇರುವುದರಿಂದ **ವಾಳಿಕ್ಕಣ್ ಕುರುಡನಾಗಾನ್ಯೈಕ್ಕುಂ** ಎಂಬ ಪ್ರಯೋಗವು. ಜನ್ಮತಃ ದರಿದ್ರನಾಗಿಯೇ ಶಿಷ್ಯನಿರಬಹುದು. ವಿಶೇಷ ಭಕ್ತಿ ವಿಶ್ವಾಸಗಳನ್ನುಳ್ಳವನಾಗಿರಬಹುದು ; ಅಂತವನನ್ನು ಗುರುದಕ್ಷಿಣೆ ಕೊಡತಕ್ಕದ್ದೆಂದು ನಿರ್ಬಂಧಿಸಿದರೆ, ಎಲ್ಲಿಂದ ದ್ರವ್ಯವನ್ನು ತಂದಾನು? ಆದುದರಿಂದ ಜನ್ಮ ಭಿಕ್ಷುವಾನ ಎಂಬ ಪ್ರಯೋಗವು.

---

೨) ಆಪಸ್ತಂಬ ೧.೨.೬.೧೩

**ಇವ್ವಿಷಯತ್ತಿಲ್ ಪ್ರತ್ಯುಪಕಾರ ಮಿಲ್ಲೈ ಎನ್ರುಮಿಡತ್ತೈ "ಬ್ರಹ್ಮವಿದ್ಯಾಪ್ರದಾನಸ್ಯ ದೇವೈರಪಿನಶಕ್ಯತೇ। ಪ್ರತಿ ಪ್ರದಾನಮಪಿ ವಾ (ಮಥವಾ) ದದ್ಯಾಚ್ಛಕ್ತಿತ ಆದರಾತ್" ಎನ್ರು ಶಾಂಡಿಲ್ಯ ಭಗವಾನ್ ಅರುಳಿ ಚೆಯ್‌ದಾನ್. ಇದಿಲ್ ಯಥಾಶಕ್ತಿ ದಾನಮ್ ಶೊನ್ನದವುಮ್ ತನ್ನಾದರತ್ತುಕ್ಕು ಪ್ಪೋಕ್ಕು ವೀಡಾಗ ಚ್ಚೊನ್ನತತ್ತನ್ರು. ಇವ್ವಳವೈಕ್ಕೊಂಡು ಪ್ರತ್ಯುಪಕಾರಂ ಪಣ್ಣಿನಾನಾಕತ್ತನ್ರು ನಿನೈತ್ತಿರುಕ್ಕಪ್ಪೇರಾನ್.**

---

ಪ್ರತ್ಯುಪಕಾರ ಭಾವನೆಯಿಂದ ಹೇಳಿದ್ದಲ್ಲವೆಂಬುದಕ್ಕೆ ಪ್ರಮಾಣವನ್ನು ಉದಾಹರಿಸುತ್ತಾರೆ. ಇಪ್ಪಡಿ ಇವ್ವಿಷಯತ್ತಿಲ್ ಪ್ರತ್ಯುಪಕಾರಮಿಲ್ಲೈ ಎನ್ರುಮಿಡತ್ತೈ-**ಬ್ರಹ್ಮವಿದ್ಯಾ ಪ್ರದಾನಸ್ಯ**-ಬ್ರಹ್ಮವಿದ್ಯೆಯನ್ನು ದಾನಮಾಡಿದ ಆಚಾರ್ಯನಿಗೆ, ಯಾವಾಗ ದಾನವಾಗಿ ಕೊಡಲ್ಪಟ್ಟಿತೋ ಆಗ ಪ್ರತಿಯಾಗಿ ಕೊಡತಕ್ಕದಿಲ್ಲವೆಂಬುದು ವ್ಯಕ್ತವು, **ಪ್ರತಿಪ್ರದಾನಮಪಿ ವಾ** - ಪ್ರತಿಯಾಗಿ ಕೊಡತಕ್ಕದ್ದು ಕೂಡ, **ದೇವೈರಪಿ**-ದೇವತೆಗಳಿಂದಲೂ ಕೂಡ, **ನಶಕ್ಯತೇ** - ಸಾಧ್ಯವಿಲ್ಲವು, ಇನ್ನು ಮನುಷ್ಯರಿಂದ ಸಾಧ್ಯವೇ ಇಲ್ಲವೆಂಬುದು ಕೈಮುತಿಕ ನ್ಯಾಯಸಿದ್ಧವು. ಹಾಗಾದರೆ ಕೃತಜ್ಞತಾಭಾವದಿಂದ ಏನನ್ನೂ ಕೊಡಕೂಡದೋ? ಎಂದರೆ **ಆದರಾತ್** – ತುಂಬಾ ವಿಶ್ವಾಸದಿಂದ, **ಶಕ್ತಿತಃ** - ತನಗೆ ಶಕ್ತಿ ಇರುವಷ್ಟು **ದದ್ಯಾತ್** - ಕೊಡತಕ್ಕದ್ದು : ಇವನ್ನೇ **ವಾ, ಅಥವಾ** – ಈ ಎರಡು ಪದಗಳಿಗೂ ಒಂದೇ ಅರ್ಥವು, ವಿಕಲ್ಪಿಸಿ ಹೇಳಿದರು ; **ಎನ್ರು** - ಎಂಬುದಾಗಿ, **ಶಾಂಡಿಲ್ಯ ಭಗವಾನ್ ಅರುಳಿಚ್ಚೆಯ್ದಾನ್** - ಪೂಜ್ಯರಾದ ಶಾಂಡಿಲ್ಯರು ಕೃಪೆಯಿಂದ ಬೋಧಿಸಿದರು. **ಭಗವಚ್ಛ**ಬ್ದಕ್ಕೆ ಮುಖ್ಯಾರ್ಥವಾದರೆ **ಹೇಯಪ್ರತ್ಯನೀಕನು ಕಲ್ಯಾಣ ಗುಣಾಕರ**ನೆಂಬ ಅರ್ಥವುಳ್ಳದ್ದಾಗಿ ಶ್ರಿಯಃಪತಿಯಲ್ಲೇ ಅನ್ವಯವು. ಇತರ ಜ್ಞಾನಸಿದ್ಧರಿಗೆ ಉಪಯೋಗಿಸಿದರೆ **ಪೂಜ್ಯರಾದ** ಎಂಬರ್ಥವು. ವಿಷ್ಣುಪುರಾಣದ ಷಷ್ಠಾಂಶ ಪಂಚಮಾಧ್ಯಾಯದ ೭೨ರಿಂದ ೭೯ನೆಯ ಶ್ಲೋಕಗಳನ್ನು ಪರಾಂಬರಿಸಿ, ಅವುಗಳಲ್ಲಿ "**ತತ್ರ ಪೂಜ್ಯ ಪದಾರ್ಥೋಕ್ತಿ ಪರಿಭಾಷಾ ಸಮನ್ವಿತಃ। ಶಬ್ದೋಯಂ ನೋಪಚಾರ್ಯೇಣ ತ್ವನ್ಯತ್ರಹ್ಯುಪಚಾರಿತಃ ॥ ಜ್ಞಾನಶಕ್ತಿ ಬಲೈಶ್ವರ್ಯ ವೀರ್ಯತೇಜಾಂಸ್ಯ ಶೇಷತಃ। ಭಗವಚ್ಛಬ್ದವಾಚ್ಯಾನಿವಿನಾ ಹೇಯೈರ್ಗುಣಾದಿಭಿಃ॥** ಎಂಬ ಶ್ಲೋಕಗಳು ಅನುಸಂಧೇಯವು. ಇದಿಲ್ ಚೊನ್ನವತ್ತನ್ರು ಹಾಗೆ ಪ್ರತ್ಯುಪಕಾರವಾಗಿ ಏನನ್ನೂ ಮಾಡಬೇಕಾದುದು ಇಲ್ಲದಿದ್ದರೆ, "**ದದ್ಯಾಚ್ಛಕ್ತಿತ ಆದರಾತ್**" ಎಂಬುದರ ತಾತ್ಪರ್ಯವೇನು ? ಎಂದರೆ ಶಿಷ್ಯನು ಆಚಾರ್ಯನಲ್ಲಿ ಭಕ್ತಿವಿಶ್ವಾಸ, ಆದರ ಇವುಗಳಿಗಾಗಿ ತನ್ನ ಕೃತಜ್ಞತೆಯನ್ನು ಯಥಾಶಕ್ತಿ ತೋರಿಸತಕ್ಕದ್ದು. **ಇವ್ವಳವೈಕೊಂಡು**- ಇಷ್ಟುಮಾತ

**ಅಥ ಶಿಷ್ಯ ಕೃತ್ಯಾನ್ಯಾಹ**

**ಇಪ್ಪಡಿ ಪ್ರತ್ಯುಪಕಾರ ರಹಿತನಾನ ಇವನುಕ್ಕು ಚೆಯ್ಯವಡುಪ್ಪದೆ ನವೆನ್ನಿಲ್, ಇವನುಪದೇಶಿಕ್ಕ ಅರ್ಥಜ್ಙ್ಗಳ್ಳೈ, ೧) "ಕಪಾಲಸ್ಥಂ ಯಥಾ ತೋಯಂ ಶ್ವದೃತೌಚ ಯಥಾಪಯಃ । ದುಷ್ಟಂಸ್ಯಾತ್ ಸ್ಥಾನದೋಷೇಣ ವೃತ್ತಹೀನೇ ತಥಾ ಶ್ರುತಮ್॥ ಎಙ್ಗಿರಪಡಿಯೇ**

---

ಹೇಳಿದುದನ್ನು ಕುರಿತು, ಪ್ರತ್ಯುಪಕಾರವನ್ನು ಮಾಡಿದವನಾಗಬೇಕೆಂದು, **ನಿನೈತ್ತಿರುಕ್ಕಪೇರ್ರ್**- ಎಣಿಸತಕ್ಕದ್ದು ಸರಿಯಲ್ಲವು.

**ಮುಂದೆ ಶಿಷ್ಯನ ಕರ್ತವ್ಯಗಳನ್ನು ಉಪದೇಶಿಸುತ್ತಾರೆ.**

ಆಚಾರ್ಯರು ಪ್ರತ್ಯುಪಕಾರವಾಗಿ ಶಿಷ್ಯರುಗಳಿಂದ ಏನನ್ನೂ ಅಪೇಕ್ಷಿಸುವುದಿಲ್ಲವೆಂದು ಉಪದೇಶಿಸಿದುದರಿಂದ ಶಿಷ್ಯನಿಗೆ ಆಚಾರ್ಯರನ್ನು ಕುರಿತು ಇತಿಕರ್ತವ್ಯತೆಗಳೇನೂ ಇಲ್ಲವೋ ಎಂದರೆ ಉಂಟು ಎಂದು ಶಿಷ್ಯಕೃತ್ಯಗಳನ್ನು ಉಪಪಾದಿಸುತ್ತಾರೆ. ಆಚಾರ್ಯರಿಗೆ ಸಮರ್ಪಿಸುವ ಗುರುದಕ್ಷಿಣೆ ಮೊದಲಾದವುಗಳು ಪ್ರತ್ಯುಪಕಾರವಲ್ಲವಾದರೂ ಕೆಲವು ಶಿಷ್ಯಕೃತ್ಯಗಳುಂಟು ; ಅವು ಯಾವುವೆಂದರೆ, **ಇಪ್ಪಡಿ**-ಮೇಲೆ ಸಪ್ರಮಾಣವಾಗಿ ಉಪದೇಶಿಸಿದ ರೀತಿಯಲ್ಲಿ, **ಪ್ರತುಪಕಾರರಹಿತನಾನಇವನುಕ್ಕು** - ಗುರುದಕ್ಷಿಣೆ ಮೊದಲಾದವನ್ನು ಪ್ರತ್ಯುಪಕಾರ ರೀತಿಯಲ್ಲಿ ಮಾಡಬೇಕಾದುದು ಏನೂ ಇಲ್ಲದ ಈ ಶಿಷ್ಯನಿಗೆ, **ಚೈಯ್ಯಪಡವುದು** – ಇತಿಕರ್ತವ್ಯತಾ ರೂಪವಲ್ಲಿ ಉಚಿತವಾದುದು **ಎನ್ನೆನ್ನಿಲ್** – ಯಾವುದು ವಿಂದರೆ ಇವನು ಸದ್‌ಶಿಕ್ಷ ಅರ್ಥಜಗಳ್ಳೈ.

೧) ಕಪಾಲವೆಂದರೆ ತಲೆಬುರುಡೆಯ ಚಿಪ್ಪು, **ಕಪಾಲಸ್ಥಂ**-ಅಂತಹ ಶಿರಸ್ಸಿನ ಚಿಪ್ಪಿನಲ್ಲಿಟ್ಟ, **ತೋಯಂ** - ಉದಕವು, **ಯಥಾ** - ಹೇಗೆ ಯೋಗ್ಯವಲ್ಲವೋ, **ಶ್ವದೃಶೌಚಪಯಃ ಯಥಾ** - ನಾಯಿಯ ಚರ್ಮದಿಂದ ಮಾಡಿದ ತಿದಿಯಲ್ಲಿಟ ಹಾಲು ಹೇಗೆ ಪರಿಶುದ್ಧವಲ್ಲವೋ, ಇಲ್ಲಿದೃತಿ ಎಂದರೆ ತಿದಿಯು ; ತಥಾ ಹಾಗೆಯೇ, **ವೃತ್ತಹೀನೇ** - ಸದಾಚಾರ ಶೂನ್ಯನಾದ ಶಿಷ್ಯನಲ್ಲಿಟ್ಟ, **ಶ್ರುತಂ** - ಶಾಸ್ತ್ರೋಪದೇಶವು, ಸ್ಥಾನದೋಷಾತ್ ದೋಷಸ್ಸ್ಯಾತ್ "**ಶ್ರುತಂ ಶಾಸ್ತ್ರಾವಧೃತಯೋಃ**" ಎಂಬ ನಿಘಂಟುವಿನ ಪ್ರಕಾರ ಶ್ರುತವೆಂಬ ಶಬ್ದಕ್ಕೆ ಕೇಳಿ ತಿಳಿದುದು ಎಂದೂ ಶಾಸ್ತ್ರವೆಂದೂ ಎರಡರ್ಥಗಳಿರುವುದರಿಂದ ಶಾಸ್ತ್ರವೆಂದೂ ಅರ್ಥಮಾಡಬಹುದು. ಕಪಾಲದಲ್ಲಿಟ್ಟ ನೀರೂ, ನಾಯಿಯ ಚರ್ಮದಿಂದ ಮಾಡಿದ ತಿದಿಯಲ್ಲಿಟ್ಟ ಹಾಲೂ, ದೋಷಯುಕ್ತಗಳಾಗಿ ಭಗವದ್ಭಾಗವತ ಕೈಂಕರ್ಯಗಳಿಗೆ ಹೇಗೆ ಅನರ್ಹವೋ, ಹಾಗೆಯೇ ಸದಾಚಾರವಿಲ್ಲದಿರುವ ಶಿಷ್ಯನಿಗೆ ಹೇಳಿದ ಉಪದೇಶವೂ ದೋಷಯುಕ್ತವಾಗಿ ಶಿಷ್ಯ ಪರಿಗ್ರಹವಾಗುವುದಿಲ್ಲವು. ಇದು ವೇದವ್ಯಾಸರು ಯುಧಿಷ್ಠಿರನಿಗೆ ಪಾತ್ರಾಪಾತ್ರ ವಿವೇಚನೆಯ ವಿಷಯವಾಗಿ ಉಪದೇಶಿಸುವ ಪ್ರಕರಣವು. **ಈಗಿನ ಪ್ರತಿ**

**ಶ್ರುತಮ್ ಎಜ್ಙರಪಡಿಯೋ ವಿಪರೀತಾನುಷ್ಠಾನಙ್ಗಳಾಲೇ ಕಪಾಲಸ್ಥ ತೋಯಾದಿಗಳ್ಪೋಲೆ ಅನುಪಜೀವ್ಯಮಾಕ್ಕಾದೊಳಿಯುವುಮ್ ;**

---

ಗಳಲ್ಲಿ ಈ ಶ್ಲೋಕವು ವ್ಯಕ್ತವಾಗಿರುತ್ತದೆ ಹೇಗೆಂದರೆ "**ಕಪಾಲೇ ಯದ್ವದಾಪಃ ಸ್ಯುಃ ಶ್ವದೃತೌಚ ಯಥಾಪಯಃ। ಆಶ್ರಯಸ್ಥಾನ ದೋಷೇಣ ವೃತ್ತಹೀನೇ ತಥಾಶ್ರುತಮ್**" ಅರ್ಥ ಬೋಧವಿಲ್ಲದಿದ್ದರೂ ಮಹರ್ಷಿ ವಾಕ್ಯಗಳನ್ನು ತಿದ್ದುವುದು ತುಂಬಾ ಹೇಯವಾದ ವಿಷಯವು" **ಎಜ್ಗಿರಪಡಿಯೋ-** ಎಂದು ಹೇಳಿರುವ ಹಾಗೆ, **ವಿಪರೀತಾನುಷ್ಠಾನಂಗಳಾಲೇ-** ಶಾಸ್ತ್ರವಿರುದ್ಧಗಳಾದ ಅನುಷ್ಠಾನಗಳಿಂದ, **ಕಪಾಲಸ್ಥತೋಯಾದಿಗಳಪ್ಪೋಲೆ-** ತಲೆಬುರುಡೆಯಲ್ಲಿಟ್ಟ ನೀರು ಮೊದಲಾದವುಗಳ ಹಾಗೆ, **ಅನುಪಜೀವ್ಯಮಾಕ್ಕಾದೊಳಿಯುವುಮ್-** ಶಿಷ್ಟರು ಪರಿಗ್ರಹಿಸಲು ಅನರ್ಹವಾದುದಾಗಿ ಮಾಡತಕ್ಕದ್ದಲ್ಲವು. ತಾನು ಶಿಷ್ಯನಾಗಿ ಪರಿಗ್ರಹಿಸಿದ ಸಮುಪದೇಶವನ್ನು ವಿದ್ಯಾಚೋರನ ಹಾಗೆ ತನ್ನಲ್ಲೇ ಇಟ್ಟುಕೊಳ್ಳಕೂಡದಾದುದರಿಂದ, ತಾನೂ ಆಚಾರ್ಯ ಸ್ಥಾನದಲ್ಲಿದ್ದುಕೊಂಡು, ತನ್ನ ಶಿಷ್ಯರಿಗೆ ಉಪದೇಶಿಸತಕ್ಕದ್ದು ಒಂದು ಇತಿಕರ್ತವ್ಯತೆ ಎಂದು ಹೇಳಿರುವದರಿಂದ ಸಿಕ್ಕಿದವರಿಗೆ ಲೆಕ್ಚರುಗಳ ಹಾಗೆ ಉಪದೇಶಿಸತಕ್ಕದ್ದಲ್ಲವು ತಾನು ಆಚಾರ್ಯನಾಗಲು ತನ್ನಲ್ಲೂ ಆಚಾರ್ಯನಿಷ್ಠೆ ಜ್ಞಾನನಿಷ್ಠೆ ಎರಡೂ ಇರಬೇಕು. ಅಂತಹ ಎರಡೂ ನಿಷ್ಠೆಗಳನ್ನೂ ಹೊಂದಿರುವ ಶಿಷ್ಯರನ್ನು ಪರೀಕ್ಷಿಸಿ ತಿಳಿದು ಉಪದೇಶಿಸತಕ್ಕದ್ದು. ಶ್ರೀ ವಿಷ್ಣುಪುರಾಣದ ಪ್ರಥಮ ಶ್ಲೋಕದಲ್ಲಿ "**ಪರಾಶರಂ ಮುನಿವರಂ ಕೃತಪೌರ್ವಾಹ್ಣಿಕಕ್ರಿಯಮ್। ಮೈತ್ರೇಯಃ ಪರಿಪಪ್ರಚ್ಛ ಪ್ರಣಿಪತ್ಯಾಭಿವಾದ್ಯಚ**" ಆಚಾರ್ಯರಾದ ಶ್ರೀ ಪರಾಶರರು **ಮುನಿವರಂ** ಎಂಬುದರಿಂದ ಜ್ಞಾನನಿಷ್ಠೆಯುಳ್ಳವರೆಂದೂ, ಕೃತಪೌರ್ವಾಹ್ಣಿಕಕ್ರಿಯಮ್ ಎಂಬುದರಿಂದ ಜ್ಞಾನನಿಷ್ಠೆಯುಳ್ಳವರೆಂದೂ ಹೇಳಲ್ಪಟ್ಟಿತು. ಹಾಗೆಯೇ ಮೈತ್ರೇಯರಾದ ಅವರ ಶಿಷ್ಯರೂ ಕೂಡ ಅವರ ಹಾಗೆಯೇ ನಡತೆಯುಳ್ಳವರೆಂಬುದು ಅವರು ಬಂದು ಪ್ರಾರ್ಥಿಸಿದ ರೀತಿಯಿಂದಲೇ ಗ್ರಾಹ್ಯವು ಹಾಗೆಯೇ ರಾಮಾಯಣದ ಆದಿಶ್ಲೋಕದಲ್ಲೂ "**ತಪಸ್ಸ್ವಾಧ್ಯಾಯ ನಿರತಂ ತಪಸ್ವೀ ವಾಗ್ಮಿದಾಂವರಂ। ನಾರದಂ ಪರಿಪಪ್ರಚ್ಛ ವಾಲ್ಮೀಕಿರ್ಮುನಿಪುಂಗವಂ**" ಇಲ್ಲಿಯೂ ಶಿಷ್ಯರಾದ ವಾಲ್ಮೀಕಿಯೂ ಆಚಾರ್ಯರಾದ ನಾರದರೂ ಸಹ ಇಬ್ಬರು ತಪಸ್ವಿಗಳು ಎಂದು ಹೇಳಿರುವದರಿಂದ ಕರ್ಮನಿಷ್ಠೆಯುಳ್ಳವರೆಂದೂ, ನಾರದರು ಮುನಿಪುಂಗವರಾದುದರಿಂದ ಜ್ಞಾನನಿಷ್ಠೆಯುಳ್ಳವರೆಂದೂ, ವಾಲ್ಮೀಕಿಯ ಪ್ರಶ್ನೆಯಿಂದಲೇ ಜ್ಞಾನೋಪದೇಶಕ್ಕೆ ಅರ್ಹತೆಯುಂಟೆಂಬುದೂ ವೇದ್ಯವು. ಹೀಗೆ ಶಿಷ್ಯನಲ್ಲಿ ಈ ಎರಡು ನಿಷ್ಠೆಗಳಿಗೂ ಅರ್ಹತೆ ತೋರಿದರೇನೇ ಉಪದೇಶವು ಉಪಜೀವ್ಯವಾಗುವುದು. ಹಾಗಿಲ್ಲದಿದ್ದರೆ ತಾನೂ

**(೨) " ಯಚ್ಛ್ರುತಂ ನವಿರಾಗಾಯ ನಧರ್ಮಾಯ ನಶಾನ್ತಯೇ। ಸುಬದ್ಧಮಪಿ ಶಬ್ದೇನ ಕಾಕವಾಶಿತಮೇವ ತತ್ " ಎಙ್ಗಿರಪಡಿಯೇ, ಕತ್ತತೇ ಪ್ರಯೋಜನಮಾಕ್ಕಾದೊಳಿಯುಮ್ ; ಇವತ್ತೈಕ್ಕೊಂಡು ವಾನ್ತಾಶಿಯಾಗಾದೊಳಿಯುಮ್ .**

---

ಸ್ವರೂಪವನ್ನು ಕಳೆದುಕೊಂಡು ನಷ್ಟವಾಗುವವಲ್ಲದೆ **ಶಿಷ್ಯಪಾಪಂ ಗುರೋರಪಿ** ಎಂದು ಹೇಳಿರುವ ಹಾಗೆ ತನಗೆ ಉಪದೇಶಿಸಿದ ಆಚಾರ್ಯನಿಗೂ ದ್ರೋಹ ಮಾಡಿದಂತಾಗುತ್ತದೆ. ಈ ಸಂದರ್ಭದಲ್ಲಿ ಗುರುಪರಂಪರಾಸಾರದ ೧೦೦-೧ನೆಯ ಪುಟಗಳನ್ನು ನೋಡಿ. ಆದುದರಿಂದ ಆಚಾರ್ಯರ ಮಹೋಪದೇಶವನ್ನು ದೋಷಯುಕ್ತವಾಗಿ ಮಾಡತಕ್ಕದ್ದಲ್ಲವು, ಎಂಬ ಭಾವವು. ಮುಂದೆ ಎರಡನೆಯ ಇತಿಕರ್ತವ್ಯತೆಯನ್ನು ಹೇಳುತ್ತಾರೆ:-

೨) ಮುಂದೆ ಶಿಷ್ಯನು ತಾನು ಹೊಂದಿದ ಶಾಸ್ತ್ರೋಪದೇಶವನ್ನು ತನಗೂ ಪ್ರಯೋಜನವಿಲ್ಲದ ಹಾಗೆ ಮಾಡಕೂಡದೆಂದು ಹೇಳುತ್ತಾರೆ. **ಯಚ್ಛ್ರುತಮ್**-ಯಾವ ಶಾಸ್ತ್ರೋಪದೇಶವು **ನವಿರಾಗಾಯ**-ತನಗೆ ವೈರಾಗ್ಯವನ್ನುಂಟು ಮಾಡುವುದಕ್ಕೆ ಆಗಲಿಲ್ಲವೋ, **ನಧರ್ಮಾಯ**-ತನಗೆ ಆಜ್ಞಾನುಜ್ಞಾ ಕೈಂಕರ್ಯಗಳಾದ ಧರ್ಮಾನುಷ್ಠಾನಕ್ಕೆ ಹೇತುವಾಗಲಿಲ್ಲವೋ, **ನಶಾನ್ತಯೇ**-ಅಂತರ್ಬಹಿರಿಂದ್ರಿಯಗಳನ್ನು ಜಯಿಸುವುದಕ್ಕೆ ಹೇತುವಾಗಲಿಲ್ಲವೋ, **ಶಬ್ದೇನ ಸುಬದ್ಧಮಪಿ**-ಆ ಶಾಸ್ತ್ರವು ಎಷ್ಟು ಉತ್ಕೃಷ್ಟವಾಗಿದ್ದರೂ ಕೂಡ, **ಕಾಕವಾಶಿತಮೇವತತ್**-ಅದು ಬರೀ ಕಾಗೆಯ ಕೂಗೇ, ಎಂದರೆ ಅದರ ಹಾಗೆ ಇತರರಿಗೆ ನಿಷ್ಫಲವಾದ ಮಾತು ಹಾಗಿರಲಿ, ತನಗೂ ಕೂಡ ಅದು ನಿಷ್ಪ್ರಯೋಜನವಾದುದು. ಕಾಗೆಯು ಕೂಗಿಕೊಂಡಿದ್ದರಿಂದ ಅದಕ್ಕೇನಾದರೂ ಜ್ಞಾನೋದಯವು ಹೇಗೆ ಇಲ್ಲವೋ ಹಾಗೆ ಎಂಬ ಭಾವವು. **ಎಙ್ಗಿರಪಡಿಯೇ**-ಎಂಬಲ್ಲಿ ಹೇಳಿರುವ ಹಾಗೆ, **ಕತ್ತತೇ**-ಶಾಸ್ತ್ರವನ್ನು ಆಚಾರ್ಯರ ಮುಖೇನ ಕೂಗಿ ಓದಿದುದೇ, ನಿಷ್ಪ್ರಯೋಜನವಾಗಿ ತಾನು ಅಭ್ಯಾಸ ಮಾಡಿದುದು ಮಾತ್ರವೇ ಆಗಿ **ಪ್ರಯೋಜನಮಾಕ್ಕಾದೊಳಿಯುಮ್**-ಪ್ರಯೋಜನವಾಗದ ಹಾಗೆ ಮಾಡಿಕೊಳ್ಳಕೂಡದು. ಅದರಿಂದ ತಾನೂ ಪ್ರಯೋಜನ ಹೊಂದತಕ್ಕದ್ದು ; ವೈರಾಗ್ಯವನ್ನು ಹೊಂದಿ, ಧರ್ಮನಿಷ್ಠನಾಗಿ, ಇಂದ್ರಿಯಗಳನ್ನು ನಿಗ್ರಹಿಸಿದವನಾಗಿ, ಒಳ್ಳೇ ನಿಷ್ಠೆಯುಳ್ಳವನಾಗಿರತಕ್ಕದ್ದೆಂಬ ಭಾವವು.

೩) ಮುಂದೆ ದ್ರವ್ಯಾಶೆಗಾಗಿ ಶಿಷ್ಯನಿಗೆ ಉಪದೇಶಿಸತಕ್ಕದ್ದಲ್ಲವೆಂದು ಹೇಳುತ್ತಾರೆ:- **ಇವತ್ತೈಕ್ಕೊಂಡು** ಈ ಆಚಾರ್ಯೋಪದೇಶವನ್ನು ಹೊಂದಿದರ ಮೂಲಕ

---

(೨) ಇತಿಹಾಸ ಸಮುಚ್ಚಯಮ್ ೧೪,೪೩

**ಇವತ್ತೈಯೆಲ್ಲಾಮ್ “ ಪಣ್ಡಿತೈರರ್ಥಕಾರ್ಪಣ್ಯಾತ್ ಪಣ್ಯಸ್ತ್ರೀಭಿರಿವ ಸ್ವಯಮ್। ಆತ್ಮಾ ಸಂಸ್ಕೃತ್ಯ ಸಂಸ್ಕೃತ್ಯ ಪರೋಪಕರಣೀಕೃತಃ” ಇತ್ಯಾದಿಗಳಿಲ್ ಪರಿಹಸಿಕ್ಕಿರಪಡಿಯೇ ಗಣಿಕಾಲಂಕಾರಮಾಕ್ಕುದಲ್, ವಿಲೈಚ್ಚಾನ್ದಾಕ್ಕುದಲ್, ಅನ್ಪಲತ್ತಿಲವರ್ ಪೋದಿಯಾಕ್ಕುದಲ್, ಕುರಙ್ಗನ್ ಕೈಯಿಲ್ ಪೂಮಾಲೈಯಾಕ್ಕುದಲ್, ಶೆಯ್ಯಾದೊಳಿಯುಮ್;**

---

ವಾಗಿ, **ವಾನ್ತಾಶಿಯಾಗಾದೊಳಿಯುಮ್**-ವಾನ್ತಿ ಮಾಡಿದುದನ್ನು ಎಂದರೆ ಉಗುಳಿದುದನ್ನು ಪುನಃ ತಿನ್ನದಿರುವವನಾಗದೇ ಇರತಕ್ಕದ್ದು. ಧನಾಶೆಯನ್ನು ಬಿಟ್ಟು ವೈರಾಗ್ಯ ಹೊಂದುವುದಕ್ಕಾಗಿ ಬಂದುದು ಉಪದೇಶವು. ಆ ಉಪದೇಶವನ್ನೇ ಇತರರಿಗೆ ಮಾಡಿ ದ್ರವ್ಯ ಸಂಪಾದಿಸುವುದು ಹೇಗಾಯಿತು ? ಎಂದರೆ ವಾಂತಿ ಮಾಡಿದುದನ್ನೇ ಪುನಃ ಭಕ್ಷಿಸುವ ರೀತಿಯಾಯಿತು. ಬ್ರಹ್ಮವಿದ್ಯೆಯನ್ನು ಇತರರಿಗೆ ದ್ರವ್ಯ ಲಾಭಕ್ಕಾಗಿ ಉಪದೇಶಿಸುವದು ಅಷ್ಟು ಹೇಯವಾದ ಕೃತ್ಯವೆಂದು ಹೇಳುವುದಕ್ಕಾಗಿ **ವಾಂತಾಶೀಯ** ದೃಷ್ಟಾಂತವು. ಈ ದೃಷ್ಟಾಂತವು ಸನತ್ಸುಜಾತೀಯದಲ್ಲಿ ಹೇಳಲ್ಪಟ್ಟಿರುತ್ತದೆ. ಇದನ್ನು ಶ್ರೀ ದೇಶಿಕರವರು ಶತದೂಷಣಿಯಲ್ಲಿ ಉದಾಹರಿಸಿರುತ್ತಾರೆ. ಆ ಪ್ರಮಾಣವು ಯಾವುದೆಂದರೆ—“**ಯೋಯಥಾವಾಂತಮಶ್ನಂತಿ ಬಾಲಾ ನಿತ್ಯಮಭಕ್ತ್ಯಯೋ। ಏವಂತೇವಾಂತ ಮಶ್ನಂತಿ ಸ್ವವೀರ್ಯಸ್ಯೋಪ ಭೋಜನಾತ್**” ಎಂಬುದು. ಯಾವಾಗಲೂ ಭೋಜನಕ್ಕೆ ಅನರ್ಹವಾಗಿರುವ ರೋಗ ಬಂದು ವಾಂತವಾದುದನ್ನು ಬಾಲರು ಜ್ಞಾನವಿಲ್ಲದೇ ಹೇಗೆ ಭಕ್ಷಿಸುವರೋ, ಹಾಗೆಯೇ ಬ್ರಹ್ಮವಿದ್ಯೆಯ ಉಪದೇಶದಿಂದ ಜೀವಿಸುವವನೂ ಎಂದು ಹೇಳಲ್ಪಟ್ಟಿರುತ್ತದೇ ಬಹಳ ಹೀನವಾದ ಉಚ್ಛಿಷ್ಟ ಸೇವನೆಯ ಹಾಗೆ ಎಂಬ ಭಾವವು.

೪) ಆಚಾರ್ಯರಿಂದ ಪರಿಗ್ರಹಿಸಿದ ಬ್ರಹ್ಮವಿದ್ಯೆಯನ್ನು ದ್ರವ್ಯಾರ್ಜನೆಗಾಗಿ ಉಪಯೋಗಿಸಬಾರದು. ಹಾಗೆ ಉಪಯೋಗಿಸಿದರೆ ಬಹುವಿಧವಾದ ಅಪಹಾಸ್ಯಕ್ಕೆ ಗುರಿಯಾಗುವನಾದುದರಿಂದ, ಅಂತಹ ವೃತ್ತಿಯು ಕೂಡದೆನ್ನುತ್ತಾರೆ:- ಪರಿಹಾಸ ಹೇಗೆ? ಎಂದರೆ, ೧)ಗಣಿಕಾಸ್ತ್ರೀಯ ಹಾಗೂ, ೨)ದ್ರವ್ಯಕ್ಕಾಗಿ ಗಂಧವನ್ನು ಮಾರುವವನ ಹಾಗೂ, ೩) ಸಂತೆಯಲ್ಲಿ ಅವಲಕ್ಕಿ ಮಾರುವವನ ಹಾಗೂ, ೪)ಒಳ್ಳೇ ಪುಷ್ಪಹಾರವನ್ನು ಪಡೆದ ಕಪಿಯ ಹಾಗೂ, ಪರಿಹಾಸಕ್ಕೆ ಕಾರಣನಾಗುವನು. ಹಾಗಾಗಕೂಡದೆಂದು ಶಿಕ್ಷಿಸುತ್ತಾರೆ. **ಇವತ್ತೈಯೆಲ್ಲಾಮ್**-ಈ ಆಚಾರ್ಯೋಪದೇಶಗಳನ್ನೆಲ್ಲಾ, **ಪಂಡಿತೈಃ**-ಶಾಸ್ತ್ರಜ್ಞಾನ ಹೊಂದಿ ಪಂಡಿತರೆಂದೆನಿಸಿರುವರಿಂದ, **ಅರ್ಥಕಾರ್ಪಣ್ಯಾತ್**-ದ್ರವ್ಯವಿಲ್ಲದ ದೈನ್ಯದಿಂದ, **ಪಣ್ಯಸ್ತ್ರೀಭಿರಿವ**-ಹಣಕ್ಕಾಗಿ ತನ್ನನ್ನೇ ಮಾರಿಕೊಳ್ಳುವ ಹೆಂಗಸು, ಆದುದರಿಂದ ವೇಶ್ಯಾಸ್ತ್ರೀ ಹಾಗೆ, **ಸ್ವಯಂಆತ್ಮ**-ತನ್ನ ಆತ್ಮವೇ, ದೇಹವೇ ಎಂದು ಇನ್ನೊಂದರ್ಥವು, **ಸಂಸ್ಕೃತ್ಯ ಸಂಸ್ಕೃತ್ಯ**-ಉಪದೇಶ ಮೂಲಕ ಅಲಂಕರಿಸಿ,

**ಪರೋಪಕರಣೀಕೃತಃ**-ಇತರರ ಉಪಕಾರಕ್ಕೆ ಆಯಿತೇ ವಿನಾ, ತನ್ನ ಸ್ವರೂಪ ವನ್ನು ರಕ್ಷಿಸಿಕೊಂಡು ಭಗವತ್ಪ್ರೀತಿಗಾಗಿ ಆಗಲಿಲ್ಲವೆಂಬ ಭಾವವು. ತನ್ನ ನಿರತಿ ಶಯ ಶ್ರೇಯಸ್ಸಿಗೆ ಸಾಧಕವಾಗಲಿಲ್ಲವೆಂಬರ್ಥವು. **ಇತ್ಯಾದಿಗಳಿಲ್**-ಇವೇ ಮೊದ ಲಾದ ಪ್ರಮಾಣಗಳಲ್ಲಿ, **ಪರಿಹಸಿಕ್ಕಿರಪಡಿಯೇ**-ಪರಿಹಾಸ ಮಾಡಿರುವ ಹಾಗೆ **ಗಣಿಕಾಲಂಕಾರವಾಕ್ಕಡಲ್**-ಸೂಳೆಯ ಅಲಂಕಾರದ ಹಾಗೆಯೂ, **ವಿಲೆ. ಚ್ಚಾನ್ದಾಲ್ಕಡಲ್**-ಬೆಲೆಗೆ ಮಾರುವ ಗಂಧ ಮೊದಲಾದ ಪರಿಮಳದ ಹಾಗೂ, **ಅಪ್ಪಲತ್ತಿಲ್ ಅವಲ್ ಪ್ರೋದಿಯಾಕ್ಕಡಲ್**-ಸಾಧಾರಣ ಪಾಮರರು ಕೂಡಿ ರುವ ಸಂತೆಯ ಗುಂಪಿನಲ್ಲಿ ಅವಲಕ್ಕಿಯ ರಾಶಿಯನ್ನು ಮಾರುವ ಹಾಗಾಗಲಿ **ಕುರಙ್ಗನ್ ಕೈಯಿಲ್ ಪೂಮಾಲೆಯಾಕ್ಕಡಲ್**-ವಾನರನ ಕೈಯ್ಯಲ್ಲಿ ಕೊಟ್ಟ ಹೂವಿನ ಹಾರದ ಹಾಗಾಗಲಿ, **ಶೆಯ್ಯಾದೊಳಿಯುವರ್**-ಮಾಡದೇ ಇರ ತಕ್ಕದ್ದು. ಆಚಾರ್ಯರ ಉಪದೇಶದಿಂದ ಬಂದ ಅನೋಘ ವಿದ್ಯೆಯನ್ನು ದ್ರವ್ಯಕ್ಕಾಗಿ ಆಶೆಪಟ್ಟು, ಪಾತ್ರಾಪಾತ್ರ ವಿವೇಚನೆಯಿಲ್ಲದೆ ಸಿಕ್ಕಿದವನಿಗೆಲ್ಲಾ ಹೇಳಕೂಡದು. ಹಾಗೆ ದ್ರವ್ಯದ ಕಾರ್ಪಣ್ಯದಿಂದ ಬಂದವನಿಗೆಲ್ಲಾ, ವಿವೇಕಿಸಿ ಪರೀಕ್ಷಿಸದೆ, ಉಪದೇಶಿ ಸುವದು ಸರಿಯಲ್ಲವೆಂದು ಹೇಳಿ, ಹಾಗೆ ದ್ರವ್ಯಕ್ಕಾಗಿ ಉಪದೇಶವನ್ನು ನಾಲ್ಕು ನೀಚೋಪಮೆಗಳಿಂದ ನಿಂದಿಸಿರುತ್ತಾರೆ. ೧) ಗಣಿಕಾಲಂ ಕಾರದ ಹಾಗೆನ್ನುತ್ತಾರೆ. ಸೂಳೆಯ ಅಲಂಕಾರವು ತನಗಾಗಿ ಅಲ್ಲವು. ವಿಟಪುರುಷನನ್ನು ಆಕರ್ಷಿಸುವದಕ್ಕಾಗಿ ಆಗಿ ಹೇಗೆ ತನಗೆ ನಿಷ್ಪ್ರಯೋಜನವೋ ಹಾಗೆ ಎಂಬ ಭಾವವು. ಆಗ ತಾನು, ಸಂಪಾದಿಸಿದ ಬ್ರಹ್ಮವಿದ್ಯೆಯು ತನಗೇನೂ ಪ್ರಯೋಜನವಾಗುವುದಿಲ್ಲವು. ಏಕೆಂದರೆ ದ್ರವ್ಯಾರ್ಥವಾಗಿ ಇತರರಿಗೇನೇ ವಿನಿಯೋಗಿಸಿದುದರಿಂದ. ಸೂಳೆಯು ತನ್ನ ಅಲಂ ಕಾರದಿಂದ ದ್ರವ್ಯ ಸಂಪಾದಿಸಿದ ಹಾಗೆ ಈತನೂ ಬ್ರಹ್ಮವಿದ್ಯೆಯಿಂದ ದ್ರವ್ಯ ಸಂಪಾದಿ ಸುತ್ತಾನೆ. ಆದುದರಿಂದ ಅಂತವನ ಬ್ರಹ್ಮವಿದ್ಯೆಯು ಗಣಿಕಾಲಂಕರಕ್ಕೆ ಸಮನಾ ಯಿತು. ಸ್ತ್ರೀಯರುಗಳ ಅಲಂಕಾರವು ಯಾವಾಗ ಸ್ವರೂಪದಾಯಕವು, ಭಗವ ತ್ಪ್ರೀತಿಕರವು? ಎಂದರೆ, ಪರಮ ಸಾಧ್ವಿಯಾಗಿ ತನ್ನ ಪತಿಯ ಮನಸ್ಸಿಗೆ ರಂಜಕ ವಾಗಿ ಪತಿಶುಶ್ರೂಷೆ ಮಾಡಿದರೆ ಭಗವತ್ಪ್ರೀಣನ ಉಂಟಾಗುತ್ತದೆ. "ಭರ್ತೃ ಶುಶ್ರೂ ಷಯಾ ನಾರೀ ಲಭತೇ ಸ್ವರ್ಗಮುತ್ತಮಮ್" ಎಂದು ಹೇಳಲ್ಪಟ್ಟಿರುತ್ತದೆ. ಪತಿ ಸಾನ್ನಿಧ್ಯವಿಲ್ಲದಿದ್ದರೆ ಸಾಧ್ವಿಯು ಅಲಂಕರಿಸಿಕೊಳ್ಳುವುದಿಲ್ಲವು. ಲಂಕೆಯಲ್ಲಿ ಬಂಧ ನಕ್ಕೆ ಸಿಕ್ಕಿದ ಸೀತೆಯನ್ನು **"ಸಮಂಕಾಮುನ ಲಂಕಾರಾಂ"** ಎಂಬಲ್ಲಿ "ಅನಲಂ ಕಾರಾಂ" ಅಲಂಕಾರರಹಿತಳಾಗಿದ್ದಳೆಂದು ಋಷಿಯು ವರ್ಣಿಸಿರುತ್ತಾರೆ.

೨) ಅಥವಾ **ವಿಲೆ ಚಾನ್ದಕ್ಕುತಲ್** ಎಂಬುದರಿಂದ ಗಂಧದ ಬಿಲ್ಲೆ ಮೊದ ಲಾದುವುಗಳನ್ನು ಮಾರುವವನ ಪರಿಮಳ ದ್ರವ್ಯದ ಹಾಗೆ, ಈ ಪರಿಮಳ ದ್ರವ್ಯ ಮಾರುವವನು ತಾನು ಏನೊಂದೂ ಪ್ರಯೋಜನ ಹೊಂದದೆ, ಇತರರಿಂದ ದುಡ್ಡು

**ಅಡಿಯಿಲೇ ವಿದ್ಯೈತ್ತಾನ್ (೨) "ಶೇವಧಿಷ್ಟೇಸ್ಮಿರಕ್ಷಮಾವಮ್" ಎನ್ರು ಬ್ರಾಹ್ಮಣನ್ನೈ ಅಪೇಕ್ಷಿತ್ತಪಡಿಯಿಲೇ ಮುಸ್ಪೇ ಅಸೂಯಾದಿಗಳೈಕ್ಕೈ ಪಿಡಿತ್ತುವೈಪ್ಪಾರ್ ಕೈಯಿಲ್‌ಕಾಟ್ಟಿಕ್ಕೊಡಾದೇ ರಕ್ಷಿತ್ತುಕೊಳ್ಳುವುಮ್;**

---

ಪಡೆಯುವುದಕ್ಕಾಗಿಯೋ ಹೇಗೆ ಆಯಿತೋ, ಹಾಗೆ ಎಂಬ ಭಾವವು. ಈ ಪರಿಮಳ ಗಂಧವನ್ನು ದೇವ ಭಾಗವತರಿಗೆ ಸಮರ್ಪಿಸಿ ತಾನೂ ಲೇಪನ ಮಾಡಿಕ್ಕೊಂಡಿದ್ದರೆ ತನಗೂ ಪ್ರಯೋಜನವಾಗಿ ತನ್ನ ಸ್ವರೂಪವನ್ನೂ ಕಾಪಾಡಿಕೊಳ್ಳುತ್ತಿದ್ದನು. ಅದು ಇಲ್ಲಮುದರಿಂದ ಪರಿಹಾಸ್ಯಕ್ಕೆ ಕಾರಣವು.

೩) **ಸಂತೆಯಲ್ಲಿ ಅವಲಕ್ಕಿ ರಾಶಿಯು ಹಾಗೆ**-ಇಲ್ಲಿ ಏನೊಂದು ವಿವೇಚನೆ ಯಿಲ್ಲವೆ ಎಲ್ಲರೂ ಪಡೆದ ಅವಲಕ್ಕಿಯು ಹಾಗೆ ಪಾತ್ರಾಪಾತ್ರ ವಿವೇಕವಿಲ್ಲದೆ ಎಲ್ಲರೂ ಬ್ರಹ್ಮವಿದ್ಯೆಯನ್ನು ಪಡೆಯುವುದು ಸರಿಯಲ್ಲವೆಂಬ ಭಾವವು. ಅದೇ ಅವಲಕ್ಕಿ ಯನ್ನೇ ಕುಚೇಲರು ಯಾರಿಗೆ ಸಮರ್ಪಿಸಬೇಕೋ ಅವರಿಗೆ ಸಮರ್ಪಿಸಿದುದರಿಂದ ಸಮಸ್ತ ಶ್ರೇಯಸ್ಸನ್ನೂ ಹೊಂದಿದರು.

೪) **ಕುರಙ್ಗನಕ್ಕೈಯಿಲ್ ಪೂಮಾಲೈ**-ಕಪಿಯು ಕೈಯ್ಯಲ್ಲಿ ಕೊಟ್ಟ ಸ್ವಾಮಿಗೆ ಭೋಗ್ಯವಾಗಿದ್ದ ತುಂಬಾ ಪರಿಮಳದಿಂದ ಕೂಡಿ ತುಂಬಾ ಕೋಮಲವಾದ ಹಾರದ ಹಾಗೆ ಆಚಾರ್ಯರಿಂದ ಬಂದ ಉಪದೇಶವು ಅಮೋಘವಾದುದು; ಅದು ತನಗೂ ಇತರ ಶಿಷ್ಯರಿಗೂ ನಿರತಿಶಯ ಪ್ರಯೋಜನವನ್ನುಂಟುಮಾಡುವುದಕ್ಕಾಗಿ ಬಂದುದು. ಕಪಿಯು ಕೈಯ್ಯಲ್ಲಿ ಕೊಟ್ಟ ಹಾರವು ಹೇಗೆ ನಿಷ್ಪ್ರಯೋಜನವಾಗುತ್ತದೋ ಹಾಗೆ ಬ್ರಹ್ಮವಿದ್ಯೆಯನ್ನು ತನಗೂ ಇತರರಿಗೂ ಸಹ ನಿಷ್ಪ್ರಯೋಜನವಾಗದ ಹಾಗೆ ಮಾಡಿ ಕೊಳ್ಳಕೂಡದೆಂಬ ತಾತ್ಪರ್ಯವು, ಹೀಗೆ ನಾಲ್ಕು ನೀಚ ದೃಷ್ಟಾಂತಗಳಿಂದ ಪ್ರವ್ಯಕ್ತಾಗಿ ಬ್ರಹ್ಮವಿದ್ಯೋಪದೇಶವನ್ನು ನಿಂದಿಸಿದರು. ಇಂದ್ರನು "ಕುರಂಗ"ಗೆ ಸಮನಾಗಿ ಬುದ್ಧಿಯಿಲ್ಲದ ಆನೆಯ ಕೊರಳಿಗೆ ದೂರ್ವಾಸ ಮಹರ್ಷಿಯು ಕೊಟ್ಟ ಹಾರವನ್ನು ಹಾಕಿದುದರಿಂದ ತುಂಬಾ ದುರವಸ್ಥೆಯನ್ನು ಹೊಂದಿದುದು ಇಲ್ಲಿ ಸ್ಮಾರಕವು.

(೫) ಐದನೆಯ ಕರ್ತವ್ಯವನ್ನು ಬೋಧಿಸುತ್ತಾರೆ:- ಅಸೂಯಾಪರರಿಂದ ಬ್ರಹ್ಮವಿದ್ಯೆಯನ್ನು ರಕ್ಷಿಸತಕ್ಕದ್ದೆಂದು ಸಪ್ರಮಾಣವಾಗಿ ಹೇಳುತ್ತಾರೆ. ಇದರ ಪೂರಾ ಶ್ಲೋಕವು ಯಾವುದೆಂದರೆ "**ನಾಸ್ತಿಕಾಯ ಶಠಾಯಾಪಿ ಮದ್ಭಕ್ತಿರಹಿತಾಯ:ವಾ । ಅಸೂಯಕಾಯ ಮಾಂ ಮಾದಾ ಶೇವಧಿಷ್ಟೇಸ್ಮಿರಕ್ಷಮಾಮ್॥**"ನಾಸ್ತಿಕನಿಗಾಗಲಿ **ಶಠಾಯ-ಗೂಢವಿಪ್ರಿಯ**

---

(೨) ಮನುಸ್ಮೃತಿ ೨.೧೧೪

**ಪಿರವಿಕ್ಕುರುಡನಾನತನ್ನೈ (೨) "ಅಯರ್ವರುಮಮರರ್ ಗಳ್" ಪರಿಷತ್ತುಕ್ಕು ಅರ್ಹನಾಮ್ಪಡಿ ತಿರುತ್ತಿನ ಮಹೋಪಕಾರನುಕ್ಕು ಚೆಯ್ಯಲಾಮ್**

---

**ಕೃಚ್ಛತ:** ಎಂದು ಹೇಳಿರುವ ಹಾಗೆ, ಗೂಢವಾಗಿ ಅಪ್ರಿಯವನ್ನು ಮಾಡುವ ಕಪಟಿಗೂ, ನನ್ನಲ್ಲಿ ಭಕ್ತಿ ಇಲ್ಲದಿರುವವರಿಗಾಗಲಿ, ಓ ಬ್ರಾಹ್ಮಣನೇ, **ಅಹಂ**-ನಾನು **ಶೇವಧಿಷ್ಟೇಸ್ಮಿ**-ನಿನಗೆ ನಿರತಿಶಯ ಶ್ರೇಯಸ್ಸನ್ನುಂಟು ಮಾಡುವವನಾಗಿದ್ದೇನೆ. **ಮಾಂಮಾದಾ**-ಇಂತವರ ಕೈಗೆ ಕೊಡದೆ, **ರಕ್ಷಮಾಮ್**-ನನ್ನನ್ನು ರಕ್ಷಿಸು ಎಂದು ಬ್ರಹ್ಮವಿದ್ಯೆಯು ಈ ಉಪದೇಶವನ್ನು ಹೊಂದಿದ ಬ್ರಾಹ್ಮಣನನ್ನು ಕುರಿತು ಪ್ರಾರ್ಥಿಸುವ ವಾಕ್ಯವು" **ಎನ್ರು ಬ್ರಾಹ್ಮಣನನ್ನು, ಅಡಿಯಿಲೇ ವಿದ್ಯೈತ್ತಾನ್ ಅಪೇಕ್ಷಿತ್ತಪಡಿಯಿಲೇ**-ಪ್ರಾರ್ಥಿಸುವ, ಹಾಗೆ **ಮುನ್ಪೇ ಅಸೂಯಾದಿಗಳೈಕ್ಕೊಣ್ಡಿತ್ತುವೈಪ್ಪಾರ್ ಕೈಯಿಲ್**-ಹಿಂದೆ ಅಸೂಯೆ ಮೊದಲಾದವುಗಳನ್ನು ಹೊಂದಿದವರ ಕೈಯಲ್ಲಿ, **ಕಾಟ್ಟಿ ಕೊಡಾದೆ**-ಕೊಡದೇ, ಪ್ರದರ್ಶಿಸದೇ, **ರಕ್ಷಿತ್ತುಕ್ಕೊಳ್ಳವುಮ್**-ರಕ್ಷಿಸಿಕೊಳ್ಳತಕ್ಕದ್ದು. ಬ್ರಹ್ಮವಿದ್ಯೆಯು ಅಮೋಘನಿಧಿಯು, ಅದನ್ನು ಅಸೂಯಾಪರರು ನಾಸ್ತಿಕರು ಮೊದಲಾದವರ ಕೈಗೆ ಕೊಡದೆ ರಕ್ಷಿಸತಕ್ಕದ್ದೆಂದು. ಹೇಳಲ್ಪಟ್ಟಿತು. ಹಾಗೆಯೇ ಗೀತೆಯ ಅಂತ್ಯದಲ್ಲಿ ಶ್ರೀಕೃಷ್ಣಭಗವಾನರವರು ಅರ್ಜುನನಿಗೂ ಆಜ್ಞಾಪಿಸುತ್ತಾರೆ. (೧) **"ಇದಂತೇ ನಾತಪಸ್ಕಾಯ ನಾ ಭಕ್ತಾಯ ಕದಾಚನ| ನಚಾಶುಶ್ರೂಷವೇ ವಾಚ್ಯಂ ನ ಚಮಾಂ ಯೋಭ್ಯಸೂಯತಿ||"** ಎಂಬುದು ಅನುಸಂಧೇಯವು. ಅಸೂಯಾ ಎಂದರೆ **ದೋಷಾರೋಪೋಗುಣೇಷ್ವಪಿ** ಎಂದು ಹೇಳಿರುವ ಹಾಗೆ ಗುಣವೇ ಇದ್ದರೂ ದೋಷವನ್ನು ಆರೋಪಿಸೋಣವು. ಇಂತಹ ಅಮೋಘೋಪದೇಶವನ್ನು ಇಂತವರಿಗೆಲ್ಲಾ ಉಪದೇಶಿಸದೇ ಕಾಪಾಡತಕ್ಕದ್ದು ಶಿಷ್ಯಕಾರ್ಯವು.

೬) ಆರನೆಯ ಕೃತ್ಯವನ್ನು ಹೇಳುತ್ತಾರೆ:- **ಪಿರವಿಕ್ಕುರುಡನಾನ**-ಜಾತ್ಯಂಧನಾದ, ಹುಟ್ಟುವಾಗಲೇ ಕುರುಡನಾದ, **ತನ್ನೈ**-ತನ್ನನ್ನು, **"ಅಯರ್ವರುಮಮರರ್ ಗಳ್"**-ಅಯರ್ವೆಂದರೆ ವಿಸ್ಮೃತಿ, **ಅರುಂ**-ಇಲ್ಲದಿರುವ, **ಅಮರರ್ ಗಳ್**-ನಿತ್ಯಸೂರಿಗಳ, **ಪರಿಷತ್ತುಕ್ಕು**-ಸಭೆಗೆ, ಗೋಷ್ಠಿಗೆ, **ಅರ್ಹನಾಮ್ಪಡಿ**-ಯೋಗ್ಯನಾಗಿರುವ ಹಾಗೆ, **ತಿರುತ್ತಿನ**-ಶಿಕ್ಷಿಸಿದ, **ಮಹೋಪಕಾರನುಕ್ಕು**-ನಿರತಿಶಯೋಪಕಾರವನ್ನು ಮಾಡಿದ ಆಚಾರ್ಯನಿಗೆ, **ಚೆಯ್ಯಲಾಮ್ ಪ್ರತ್ಯುಪಕಾರಮಿಲ್ಲೈ**-ಮಾಡತಕ್ಕ ಪ್ರತ್ಯುಪಕಾರವು ಏನೂ ಇಲ್ಲವು, **ಎನ್ರು ನಿನೈತ್ತು**-ಎಂಬ ಸಂದರ್ಭವನ್ನು **ತೆಳಿನ್ದು**-ಅರಿತು, (೩) ಇವರ ಅರ್ಥವು ಹಿಂದೆಯೇ ಜ್ಞಾನಪಿಪಾಸಾಧಿಕಾರದ ೧೯೧೭ನೆಯ ಪುಟದಲ್ಲಿ ಉದಾಹರಿಸಲ್ಪಟ್ಟಿರುತ್ತದೆ. ಶರಾಂಬುಧಿ, ಪರಮೈಕಾಂತಿಯಾದ

---

(೧) ಗೀ ೧೮.೬೭ (೨) ನಮ್ಮಾಳ್ವಾರ್ ತಿರು ೧.೧.೧. (೩) ವಿಷ್ವಕ್ಸೇನ ಸಂಹಿತೆ

**ಪ್ರತ್ಯುಪಕಾರಮಿಲ್ಲೈ ಎನ್ರು ಮಿಡತ್ತೈ ತೆಳಿನ್ದು (೩) "ಏಕಾನ್ತೀವ್ಯಪದೇಷ್ಟವ್ಯೋ ನೈವಗ್ರಾಮಕುಲಾದಿಭಿಃ। ವಿಷ್ಣುನಾವ್ಯಪದೇಷ್ಟವ್ಯಸ್ತಸ್ಯ ಸರ್ವಂ ಸ ಏವ ಹಿ॥ ಎಙ್ಗರನಿಲೈಯಿಲುಙ್ಕೊಟ್ಟಿಲ್ "ವಸಿಷ್ಠವ್ಯಪದೇಶಿನಃ" ಎಙ್ಗರಪಡಿಯೇ ಶರಣ್ಯನಾನ ಪೆರುಮಾಳ್ ವಂಶಕ್ರಮಮಾಗ ಪಿರನ್ದು ನಿಲೈ ಇನ್ನಿಲೈ ಎನ್ರು ಪರಿಗ್ರಹಿತ್ತು (೫) ಎನ್ನೈತ್ತೀಮನಮ್ ಕೆಡುತ್ತಾಯುನಕ್ಕೆನ್ ಶೆಯ್‌ಗೇನ್ ಎನ್ರಿರುಕ್ಕುಮ್ ಪ್ರಾಪ್ತಮ್.**

---

ವನು, ಗ್ರಾಮ, ಕುಲ ಮೊದಲಾದುವುಗಳಿಂದ ವ್ಯವಹರಿಸಲ್ಪಡುವುದಿಲ್ಲವು. ಆತನಿಗೆ ಸಮಸ್ತವೂ ವಿಷ್ಣುವೇಯಾದುದರಿಂದ ವಿಷ್ಣುಸಂಬಂಧದಿಂದಲೇ ಹೇಳಲ್ಪಡುವನು ಅಂತವನಿಗೆ ಬೇಕಾದುದೆಲ್ಲಾ ವಿಷ್ಣುಸಂಬಂಧವೇ ಎಂಬ ತಾತ್ಪರ್ಯವು, ತಾನು ವೈಷ್ಣವನೆಂದು ಹೇಳಿಸಿಕೊಳ್ಳುವನು. ಮುಖದಲ್ಲಿ ವೈಷ್ಣವಲಾಂಛನವಾದ ಊರ್ಧ್ವ ಪುಂಡ್ರವನ್ನು ಧರಿಸುವನು. ಆತನ ದಿವ್ಯಾಯುಧಗಳಾದ ಶಂಖಚಕ್ರಗಳಿಂದ ಸಂಸ್ಕಾರ ವನ್ನು ಹೊಂದುವನು. ಆತನ ಹೆಸರುಗಳಾದ ರಾಮ, ಕೃಷ್ಣ, ಗೋವಿಂದ ನಾರಾಯಣಾದಿ ನಾಮಗಳನ್ನೇ ಧರಿಸುವನು. ಆತನ ಮಂತ್ರಗಳನ್ನೇ ಜಪಿಸುವನು ಆತನ ದಿವ್ಯ ಚೇಷ್ಟಿತಗಳನ್ನು ಪಠಿಸಿ ಆನಂದವನ್ನು ಹೊಂದುವನು ಇತ್ಯಾದಿ. **ಎಙ್ಗರನಿಲೈಯಿಲುಙ್ಕೊಟ್ಟಿಲ್**-ಹೀಗೆ ಹೇಳಿರುವ ಸ್ಥಿತಿಗಿಂತಲೂ, ಇದೇ ಉತ್ತಮ ಸಂಬಂಧವಾದರೂ, ಆಚಾರ್ಯಸಂಬಂಧವನ್ನು ಹೇಳಿಕೊಳ್ಳುವುದು ಇನ್ನೂ ಉತ್ತಮ ವಾದುದೆಂದು ಹೇಳುತ್ತಾರೆ-"**ವಸಿಷ್ಠವ್ಯಪದೇಶಿನಃ**"-ವಸಿಷ್ಠ ಮಹರ್ಷಿಸಂಬಂಧ ವುಳ್ಳವನೆಂದು ಎಂದರೆ ವಸಿಷ್ಠಶಿಷ್ಯನೆಂದು ಹೇಳಿಸಿಕೊಳ್ಳುವರು. **ಎಙ್ಗರಪಡಿಯೇ**-ಎಂದು ಹೇಳಿರುವ ಹಾಗೆ, **ಶರಣ್ಯನಾನಪೆರುಮಾಳ್**-ಸರ್ವರಿಗೂ ಉಪಾಯ ಭೂತನಾಗಿರುವ ಎಂದರೆ ಸರ್ವರಕ್ಷಕನಾಗಿರುವ ಪರಮಪುರುಷನು, **ವಂಶಕ್ರಮಾಗತಮಾಗ ಪಿರನ್ದು**-ವಸಿಷ್ಠರಿಗೆ ಶಿಷ್ಯರುಗಳಾದ ಇಕ್ಷ್ವಾಕು ವಂಶದಲ್ಲೇ ಕ್ರಮವಾಗಿ ಶ್ರೀರಾಮಾವತಾರಿಯಾಗಿ ಹುಟ್ಟಿ, ಪಡೈತ್ತು-ಅಲಭ್ಯವಾದ ವಸಿಷ್ಠಶಿಷ್ಯಭಾವವನ್ನು ಹೊಂದಿ, **ಕೈಕ್ಕೊಂಡನಿಲೈಇನ್ನಿಲೈ ಎನ್ರು ಪರಿಗ್ರಹಿತ್ತು**-ಸ್ವೀಕರಿಸಿದ ಕ್ರಮವೇ ಈ ಶಿಷ್ಯಕ್ರಮವೆಂದು ಅನುಮೋದಿಸಿ,

ಈ ಪೂರ್ವಾಪಾಶುರವು ಯಾವುದೆಂದರೆ-

**ವಾಮನೆನ್ಮರದಕವಣ್ಣ ತಾಮರಕಣ್ಣಿನನ್।**
**ಕಾಮನೈಪ್ಪಯನ್ದಾಯೆನ್ರೆನ್ರುನ್ಕಳಿಲ್ ಪಾಡಿಯೇ ಪಣಿನ್ದು।**
**ಕೂಮನತ್ತನನಾಯ್ ಪಿರವಿತ್ತುಳತಿನೀಙ್ಗವೆನ್ನೈ**
**ತೀಮನಙ್ಗೆಡುತ್ತಾಯ್ ಉನಕ್ಕೆನ್ ಶೆಯ್‌ಗೇನ್ ಎನ್ ಶಿರೀತರನೇ**

---

(೩) ವಿಷ್ವಕ್ಸೇನಸಂಹಿತೆ (೪) ರಾ, ಬಾಲ ೧೯.೨ (೫) ತಿರುವಾಯ್ ೨,೭.೮

**ವಾಮನ**-ಸರ್ವಸುಲಭನಾಗಿ ಅವತರಿಸಿದ ವಾಮನನೇ! **ಎನ್ ಮರದಕವಣ್ಣನ್**-ನನಗೆ ಅನುಭವಿಸಲು ಯೋಗ್ಯನಾಗಿರುವ ಮರಕತದ ಹಾಗೆ ಶರೀರ ಕಾಂತಿಯನ್ನೂ ಲಾವಣ್ಯವನ್ನೂ ಹೊಂದಿದವನೇ, **ತಾಮರೈಕಣ್ಣಿನನ್**-ತನ್ನನ್ನು ಜನರು ಆಶ್ರಯಿಸಲೆಂದು ಆಕರ್ಷಿಸುವ ಹಾಗೆ ಮಾಡುವ ಪದ್ಮಪತ್ರದಳದ ಕಣ್ಣಿನ ಸೊಬಗನ್ನು ಹೊಂದಿದವನೇ, **ಕಾಮನೈಪಯನ್ದಾಯ್**-ತಾನೇ "**ಸಾಕ್ಷಾನ್ಮನ್ಮಥಮನ್ಮಥಃ**" ಎಂಬಲ್ಲಿ ಹೇಳಿರುವ ಹಾಗೆ ಸರ್ವಲಾವಣ್ಯಯುಕ್ತನಾಗಿದ್ದು, ಸರ್ವರನ್ನೂ ಮೋಹಗೊಳಿಸುವ ಮನ್ಮಥನಿಗೆ ಪಿತಾವಾದವನೇ, **ಎನ್ನೆನ್ರು ಉನ್ಕಳಲ್**-ಎಂದು ಹೇಳಿ ನಿನ್ನ ಪಾದವನ್ನು, **ಪಾಡಿಯೇ**-ಗಾನದಿಂದ ಸ್ತುತಿಸಿ, **ಪಣಿನ್ದು**-ನಮಸ್ಕರಿಸಿ ಎಂದರೆ ಶರಣಾಗತರಾಗಿ ಆಶ್ರಯಿಸಿ, **ತೂಮನತ್ತನನಾಯ್**-ಪ್ರಯೋಜನಾನ್ತರಗಳಲ್ಲಿ ಹೋಗದ ಮನಸ್ಸನ್ನುಳ್ಳವನಾಗಿ, **ಪಿರವಿ**-ಜನ್ಮಮೂಲವಾಗಿ ಬಂದ, **ತುಳದಿನೀಙ್ಗ**-ದುಃಖವೆಲ್ಲಾ ತೊಲಗುವ ಹಾಗೆ, **ಎನ್ನೈ**-ನನ್ನ, **ತೀಮನಂ**-ವಿಷಯಾಸಕ್ತಗಳಲ್ಲಿ ಪ್ರವರ್ತಿಸಿ ಹಾಳಾಗುವ ಹಾಗೆ ಮಾಡುವ ಕ್ರೂರ ಮನಸ್ಸನ್ನು, **ಕೆಡುತ್ತಾಯ್**-"**ತೇಷಾಮೇವಾನುಕಂಪಾರ್ಥ ಮಹ ಮಜ್ಞಾನಜಂತಮಃ ನಾಶಯಾಮಿ**" ಎಂಬಲ್ಲಿ ಹೇಳಿರುವ ಹಾಗೆ, ಪ್ರಪನ್ನರ ಅನುಗ್ರಹಕ್ಕಾಗಿ ಅವರ ಅಜ್ಞಾನಾಂಧಕಾರವನ್ನು ಹೋಗಲಾಡಿಸಿದೆ. **ಉನಕ್ಕೆ**-ಅಂತಹ ಮಹೋಪಕಾರನಾದ ನಿನಗೆ, **ಓ ಶಿರೀತರನೇ**-ಓ ಶ್ರೀಧರನೇ, **ಎನ್ ಶೆಯ್ಗೇನ್**-ಪ್ರತ್ಯುಪಕಾರರೂಪದಲ್ಲಿ ಏನನ್ನು ಮಾಡಬಲ್ಲೆನು ; ಅಶಕ್ತನಾದ ನಾನು ಏನನ್ನೂ ಮಾಡಲು ಸಾಧ್ಯವಿಲ್ಲವೆಂಬರ್ಥವು. ಇದು ಪರಮಪುರುಷನನ್ನು ಕುರಿತ ಪಾಶುರವಾದರೂ ಆಚಾರ್ಯರೂ ಸಹ ಪರಮಪುರುಷನ ಹಾಗೆಯೇ, ಶಿಷ್ಯನ ಕ್ರೂರ ಮನಸ್ಸು ಐಹಿಕಗಳಲ್ಲಿ ಪ್ರವರ್ತಿಸಿದ ಹಾಗೆ ಉಪದೇಶ ಮೂಲಕ ಮಹೋಪಕಾರವನ್ನು ಮಾಡಿ, ಉಪಾಯಾನುಷ್ಠಾನವನ್ನು ಪರಮಕೃಪಯಾ ಮಾಡಿಸಿದವರಿಗೆ, ಶಿಷ್ಯನಾದವನು ಅಂತಹ ಆಚಾರ್ಯರಿಗೆ ಪ್ರತ್ಯುಪಕಾರವಾಗಿ ಏನನ್ನು ಮಾಡಲಾದೀತು ? ಅದೂ ಅಲ್ಲದೆ, ಆಚಾರ್ಯರಿಗೆ ಈ ಶಿಷ್ಯನಿಂದ ಯಾವ ಐಹಿಕವೂ ಬೇಕಿಲ್ಲವು." **ಎನ್ರಿರುಕ್ಕುವುಮ್ ಪ್ರಾಪ್ತಮ್**- ಹೀಗೆ ಅನುಸಂಧಾನದಿಂದ ಇರತಕ್ಕದ್ದು ಶಿಷ್ಯನಿಗೆ ಸ್ವರೂಪವು, ಈ ಆರನೆಯ ಕರ್ತವ್ಯವನ್ನು ಹೇಳುವ ಸಂದರ್ಭದಲ್ಲಿ, ಈ ಶಿಷ್ಯನು ಜನ್ಮತಃ ಯಾವ ಶಾಸ್ತ್ರಜ್ಞಾನದ ಬೆಳಕೂ ಇಲ್ಲದವನಾದುದರಿಂದ ಜಾತ್ಯಂಧನೆಂದು ಹೇಳಲ್ಪಟ್ಟನು. ಆಚಾರ್ಯೋಪದೇಶವು ಯಾವಾಗ ಸುಕೃತಪರಿಪಾಕದಿಂದ ಉಂಟಾಯಿತೋ ಆಗ ಅಂಧತೆಯು ತೊಲಗಿತೆಂಬ ಭಾವವು. ಸರ್ವೇಶ್ವರನು "**ದದಾಮಿಬುದ್ಧಿಯೋಗಂತಂ**" ಎಂಬಲ್ಲಿ ಹೇಳಿರುವ ಹಾಗೆ ಆಚಾರ್ಯರೂ ನಮಗೆ ಬುದ್ಧಿಯೋಗವನ್ನುಂಟುಮಾಡಿ ಕಾಪಾಡುವರೆಂಬ ಭಾವವು. ಅಂತಹ ಜ್ಞಾನವನ್ನು ಹೊಂದಲು ತುಂಬಾ ಅಶಕ್ತನಾದರೆ ಆಚಾರ್ಯರು ಮಾರ್ಗದರ್ಶಿಗಳಾದುದರಿಂದ ಅವರು ಹಿಡಿದ ಕೋಲನ್ನು ಹಿಂಬಾಲಿಸಿ ತಾನು ಹಿಡಿದರೆ ಅವರೊಂದಿಗೆ ತಾನೂ

ಸದ್ಗತಿಯನ್ನು ಹೊಂದಬಹುದೆಂಬ ಭಾವವಾಗಲಿ ಸೂಚಿತವು. ಇಂತಹ ದುಸ್ಥಿತಿಯ ಲ್ಲಿದ್ದ ತನ್ನನ್ನು ಆಚಾರ್ಯರು ಮಾಡಿದ ಮಹೋಪಕಾರವು ಎಂತಾದ್ದೆಂದರೆ, ಅಯ ರ್ವರುಂ ಅಮರರ್ ಪರಿಷತ್ತಿಗೆ ಎಂದರೆ ವಿಸ್ಮೃತಿಗಳು ಯಾವುವೂ ಇಲ್ಲದೆ, ಸರ್ವಜ್ಞ ರಾಗಿ ಸತ್ಯ ಸಂಕಲ್ಪರಾಗಿ ಮಹಾ ಪರಿಶುದ್ಧರಾಗಿರುವ ನಿತ್ಯಸೂರಿಗಳ ಮತ್ತು ಮುಕ್ತರ ಗೋಷ್ಠಿಗೆ ಯೋಗ್ಯನನ್ನಾಗಿ ಮಾಡಿದರು. **ಅಯರ್ವರುಂ ಅಮರರ್** ಎಂಬ ಪ್ರಯೋಗವು ಶ್ರೀ ನಮ್ಮಾಳ್ವಾರ್‌ರವರ ತಿರುವಾಯಿಮೊೞಿಯ ಪ್ರಥಮ ಪಾಶು ರದಲ್ಲಿದೆ. ಪರಾಂಬರಿಸಬಹುದು. ಇಂತಹ ಮಹೋಪಕಾರಕ್ಕೆ ಪ್ರತಿಯಾಗಿ ಆಚಾ ರ್ಯರಿಗೆ ಏನನ್ನು ಮಾಡಲು ಸಾಧ್ಯವು? ಆದುದರಿಂದ ಅವರ ವಿಷಯದಲ್ಲಿ ವಿಶೇಷ ಕೃತಜ್ಞತಾಭಾವದಿಂದ ಇರಬೇಕು. ವಿಷ್ವಕ್ಸೇನ ಸಂಹಿತೆಯಲ್ಲಿ ಪರಮೈಕಾಂತಿಯು ಹೇಗೆ ತನಗೆ ಎಲ್ಲಾ ಸಂದರ್ಭದಲ್ಲೂ, ಪರಮಪುರುಷನ ಸಂಬಂಧವೆಂದು ಹೇಳಿಕೊ ಳ್ಳುತ್ತಾರೋ, **"ಮಮನಾಥಯದಸ್ತಿಯೋಸ್ಮ್ಯಹಂ ಸಕಲಂ ತದ್ಧಿತವೈವ ಮಾಧವ"** ಎಂದು ಅವನನ್ನೇ ಸರ್ವವೆಂದು ಹೇಗೆ ಹೇಳಿಕೊಳ್ಳುವರೋ, ಹಾಗೆಯೇ ಶಿಷ್ಯನೂ ಕೂಡ ತನ್ನ ಸಮಸ್ತ ಸತ್ತಾ ಸ್ಥಿತಿಯೆಲ್ಲಾ ಆಚಾರ್ಯರದು ಎಂದು ಭಾವಿಸ ತಕ್ಕದ್ದು. ಅವರಿಂದಲೇ ತನಗೆ ನಿರತಿಶಯಾನಂದ ಮೊದಲಾದುವುಗಳೆಲ್ಲಾ. ಆದುದ ರಿಂದ ಕೃತಜ್ಞತಾಭಾವದಿಂದ ಅವರ ನಾಮಧೇಯವನ್ನು ತಾನೂ ಧರಿಸಿದವನಾಗಿ ನೀನು ಯಾರು ಎಂದರೆ ಶ್ರೀನಿವಾಸ ಮಹಾದೇಶಿಕಾರ್ಯರ ಶಿಷ್ಯನೆಂದು ಹೇಳಿಕೊಳ್ಳ ತಕ್ಕದ್ದಾಗಿದೆ. **ಆಚಾರ್ಯೇಣಾಸ್ಯ ಪದೇಷ್ಟವ್ಯಃ** ಎಂಬುದಕ್ಕೆ ಒಂದು ಸ್ವಾರಸ್ಯವಾದ ದೃಷ್ಟಾಂತವನ್ನು ಬೋಧಿಸುತ್ತಾರೆ. ವಿಶ್ವಾಮಿತ್ರರು ದಶರಥರಾಜನಲ್ಲಿಗೆ ಬಂದು ಯಜ್ಞ ಸಂರಕ್ಷಣಾರ್ಥವಾಗಿ ಶ್ರೀರಾಮನನ್ನು ಕಳುಹಿಸಿ ಕೊಡು ಎಂದು ಯಾಚಿಸುವ ಪ್ರಕರ ಣವು. ವಿಶ್ವಾಮಿತ್ರರು ದಶರಥನಿಂದ ಯಥಾವಿಧಿ ಪೂಜಿಸಲ್ಪಟ್ಟವರಾಗಿ ಏನು ಕಾರಣ ದಯಮಾಡಿಸಿದ್ದು? ಎಂದು ಕೇಳಿದುದರಿಂದ ಸಂತೋಷಚಿತ್ತರಾದ ಪರಮರ್ಷಿಯು ದಶರಥನನ್ನು ಕೊಂಡಾಡುವ ಸಂದರ್ಭದಲ್ಲಿ ಹೇಳುತ್ತಾರೆ- **"ಸದೃಶಂ ರಾಜ ಶಾರ್ದೂಲ ತವೈತದ್ಭುವಿ ನಾನ್ಯಥಾ। ಮಹಾವಂಶಪ್ರಸೂತಸ್ಯ ವಸಿಷ್ಠ ವ್ಯಪದೇಶಿನಃ"** ಓ ರಾಜಶ್ರೇಷ್ಠನಾದ ದಶರಥನೇ, ಇಂತಹ ನಿನ್ನ ಗಂಭೀರ ನಡ ತೆಯು ಪರಮಯೋಗ್ಯವಾದುದು. ಏಕೆಂದರೆ ಮಹತ್ತಾದ ಪ್ರಖ್ಯಾತಿ ಹೊಂದಿದ ಇಕ್ಷ್ವಾಕು ವಂಶದಲ್ಲಿ ನೀವು ಹುಟ್ಟಿದವರು. ಇಂತಹ ಸುಕೃತವು ಭೂಲೋಕದಲ್ಲಿ ಇನ್ನು ಯಾರಿಗೂ ಲಭಿಸಲಾರದು. ಏಕೆಂದರೆ ತಮ್ಮ ಕೀರ್ತಿಯ ಪ್ರಾಶಸ್ತ್ಯವು ವಸಿಷ್ಠರಿಗೆ ಶಿಷ್ಯನಾದುದರಿಂದಲೇ; ಹೀಗೆ ಆಚಾರ್ಯರನ್ನು ಸ್ಮರಿಸಿಯೇ ಶಿಷ್ಯನಿಗೆ ಉಪದೇಶವನ್ನು ಮಾಡತಕ್ಕ ಕ್ರಮವು, ಈಗಲೂ ಸಾಂಪ್ರದಾಯಿಕ ವಾಗಿ ನಡೆಯುತ್ತಾ ಇರುತ್ತದೆ. ಆಚಾರ್ಯರ ತನಯು ಮೊದಲುಗೊಂಡು ಲೋಕ ಗುರುವಿನವರೆಗೂ ಸ್ತುತಿಸಿ ಉಪದೇಶಾರಂಭವೂ, ಹಾಗೆಯೇ ಉಪದೇಶನಿಗಮನವು

## ಆಚಾರ್ಯಾತ್ಪ್ರಾಪ್ತ ರಹಸ್ಯೋಪದೇಶಂ ಸಚ್ಛಿಷ್ಯೇಭ್ಯಃ ಗುರುಪರಂಪರಾನು ಸಂಧಾನ ಪೂರ್ವಕಂ ಕರ್ತವ್ಯ ಮಿತಿ, ಸಪ್ತಮಶಿಷ್ಯಕೃತ್ಯಮಾಹ

ಈಗಲೂ ಜರಗುತ್ತದೆ. ಶ್ರೀನಿಗಮಾಂತದೇಶಿಕರವರೂ ಈ ಸಂಪ್ರದಾಯವನ್ನು ತಾವೂ ಅನುಸರಿಸಿರುತ್ತಾರೆ. ಮೊದಲು ಗುರುಪರಂಪರಾಸಾರದಲ್ಲಿ ಗುರುಗಳನ್ನೆಲ್ಲಾ ಸ್ತುತಿಸಿ ಅನಂತರ ರಹಸ್ಯ ತ್ರಯೋಪದೇಶವನ್ನು ಉಪಕ್ರಮಿಸಿರುತ್ತಾರೆ. ಇದನ್ನೇ ಮುಂದೆ ಉಪಪಾದಿಸುತ್ತಾರೆ. ಇದೇ ಅಭಿಪ್ರಾಯವನ್ನೇ ಶ್ರೀ ದೇಶಿಕರವರು ತಾವು ಬರೆದ ಅಭಯಪ್ರದಾನಸಾರದಲ್ಲೂ ಉಪಪಾದಿಸಿರುತ್ತಾರೆ. ಶ್ರೀರಾಮವಾಕ್ಯವೂ ಇದನ್ನೇ ಅನುಸರಿಸಿರುವದಾಗಿರುತ್ತದೆ. ಆ ರಾಮವಾಕ್ಯವು ಯಾವುದೆಂದರೆ- **"ಶ್ರೂಯತೇಹಿ ಕಪೋತೇನ ಶತ್ರುಃ ಶರಣಮಾಗತಃ। ಅರ್ಚಿತಶ್ಚ ಯಥಾನ್ಯಾಯಂ ಸ್ವೈಶ್ಚ ಮಾಂಸೈರ್ನಿಮಂತ್ರಿತಃ। ಸ ಹಿ ತಂ ಪ್ರತಿಜಗ್ರಾಹ ಭಾರ್ಯಾಹರ್ತಾರಮಾಗತಂ। ಕಪೋತೋ ವಾನರಶ್ರೇಷ್ಠ ಕಿಂಪುನರ್ಮದ್ವಿಧೋ ಜನಃ॥"** ಶಾಸ್ತ್ರಜ್ಞಾನ ವಿವೇಕಜ್ಞಾನಗಳಿಲ್ಲದ ಒಂದು ಕ್ಷುದ್ರ ಪಕ್ಷಿಯಾದ ಕಪೋತವೇ, ತನಗೆ ಶತ್ರುವಾಗಿ ತನ್ನ ಭಾರ್ಯೆಯನ್ನು ಅಪಹರಿಸಿದ ಒಬ್ಬ ವ್ಯಾಧನು ಬಂದು ತನ್ನನ್ನು ಶರಣು ಹೊಂದಿದನೇ ಎಂಬ ಅಭಿಮಾನದಿಂದ ತನ್ನ ಮಾಂಸವನ್ನೇ ಆತನಿಗೆ ಕೊಟ್ಟು ಉಪಚರಿಸಿರುವಾಗ, ಮಹತ್ತಾದ ಶರಣಾಗತರಕ್ಷಣೆಯಲ್ಲಿ ಬದ್ಧಾದರರಾದ ಇಕ್ಷ್ವಾಕು ವಂಶದವರ ಕುಲದಲ್ಲಿ ಹುಟ್ಟಿ, ಮಹರ್ಷಿಯಾಗಿ ಶರಣಾಗತ ರಕ್ಷಣೆಯನ್ನು ತಾವು ಆಚರಿಸಿ ಉಪದೇಶಿಸಿದ ವಸಿಷ್ಠರಿಗೆ ಶಿಷ್ಯನಾಗಿ ಅಮೋಘೋಪದೇಶವನ್ನು ಹೊಂದಿದ **ಮದ್ವಿಧೋ ಜನಃ** ನನ್ನಂತವನು ಶರಣಾಗತ ರಕ್ಷಣೆಯಲ್ಲಿ ಬದ್ಧಕಂಕಣರಾಗಿರಬೇಕೆಂದು ಹೇಳತಕ್ಕದ್ದೇನಿದೆ? ಒಂದು ನಿಕೃಷ್ಟ ಜಾತಿಯ ಕಪೋತವು ಅನುಷ್ಠಿಸಿದುದನ್ನು ಜ್ಞಾನವಿವೇಕ ಹೊಂದಿದ ನನ್ನಂತವನು ಅನುಷ್ಠಿಸಲೇಬೇಕೆಂದು ಹೇಳತಕ್ಕದ್ದೇನಿದೆ? ಎಂಬ ತಾತ್ಪರ್ಯವು. ಅಭಯಪ್ರದಾನಸಾರದ ೭ನೆಯ ಅಧ್ಯಾಯದಲ್ಲಿ ಶ್ರೀ ನಿಗಮಾಂತರು ಹೇಳಿರುವುದೇನೆಂದರೆ- **"ಪತ್ತುದಿಕ್ಕಿಲುಮ್ ತೇರ್ ನಡತ್ತಿ ಪ್ರಸಿದ್ಧನಾನ ದಶರಥ ಮಹಾರಾಜನುಡೈಯ ಮಗನಾಯ್ ವಸಿಷ್ಠ ವಿಶ್ವಾಮಿತ್ರ ಶಿಷ್ಯನಾಯ್, ಮಹಾಯೋಗಿಯಾಗ ಪ್ರಖ್ಯಾತನಾನ ಜನಕಮಹಾರಾಜಾವೋಡೆ ಸಂಬಂಧಂ ಪಣ್ಣಿನ ನಾಮುಮ್ "ರಾಮೋ ವಿಗ್ರಹವಾನ್ ಧರ್ಮಃ" ಎನ್ರು, ಉಡರಿಬಿಲ್ ಶಿಷ್ಟತಯಾ ಪ್ರಸಿದ್ಧಿಯ್ಯೈ ಏರಿಟ್ಟುಕೊಂಡು- 'ಮರ್ಯಾದಾನಾಂಚ ಲೋಕಸ್ಯ ಕರ್ತಾ ಕಾರಯಿತಾಚಸಃ' ಎಙ್ಗರಪಡಿಯೋ ಇತ್ತಸ್ಸೈಕ್ಕಾಲಮುಮ್ ನಮ್ಮುಡೈಯ ಕೈಪಾರ್ತು ನಾಟ್ಟಾರನುಷ್ಠಿಕ್ಕುಮ್ಪಡಿ ನಡೆನ್ದು ಪೋನದು, ಇನ್ರು ಶರಣಾಗತಘಾತಂ ಪಣ್ಣಿನಾಲ್ ನಾಡೆನ್ನಡಕ್ಕವದು? ಮದ್ವಿಧಃ-ನಮ್ಮುಡೆಯ ವ್ರತಮ್ ಪಿನ್ಬು ಶೊಲ್ಲಕ್ಕಡವೋಮ್; ಮದ್ವಿಧಃ-ನಮ್ಮೋಲಿಗಳ್ ಶರಣಾಗತನ್ನೈ**

**ತಾನಿಪ್ಪಡಿ ಪ್ಪೆತ್ತ ರಹಸ್ಯತ್ರಯ ಸಾರಾರ್ಥಮಾನ ಮಹಾಧನತ್ತೈ ಮುನ್ನಿಲ್ ಅಧಿಕಾರತ್ತಿರ್ಸೊನ್ನಪಡಿಯೇ ಉಚಿತ ಸ್ಥಾನಮರಿನ್ದು ಸಮರ್ಪ್ಪಿಕ್ಕವೆನ್ನೀದು, (೧) “ಕಥಯಾಮಿ ಯಥಾಪೂರ್ವಂ ದಕ್ಷಾದ್ಯೈರ್ಮುನಿ ಸತ್ತಮೈಃ । ಪೃಷ್ಟಃ ಪ್ರೋವಾಚ ಭಗವಾನಬ್ಜಯೋನಿಃ ಪಿತಾಮಹಃ ।**

---

**ವಿಡುವಾರ್ಗಳೋ?** ಇತ್ಯಾದಿ, ಇಕ್ಷ್ವಾಕು ವಂಶೀಯರಿಗೆ ಈ ಶರಣಾಗತ ರಕ್ಷಣೆ ಎಂಬುದು ವಂಶಪಾರಂಪರ್ಯವಾಗಿ ವಸಿಷ್ಠೋಪದೇಶದಿಂದ ಬಂದುದು. ಅಂತಾದ್ದನ್ನು ತಾವು ಪರಿತ್ಯಾಗ ಮಾಡಬಹುದೋ ? ಆದುದರಿಂದ ಅಭಯವನ್ನು ಸರ್ವಶರಣಾಗತರಿಗೆ ಕೊಡುವದೇ ತನ್ನ ವ್ರತವೆಂದು ಹೇಳಿಕೊಳ್ಳುತ್ತಾರೆ. ಇಂತಹ ಅಮೋಘ ಮಾರ್ಗವನ್ನುಪದೇಶಿಸಿ, ಅದನ್ನು ನಮಗೋಸ್ಕರ ಅನುಷ್ಠಿಸಿ, ಮಹೋಪಕಾರವನ್ನೆಸಗಿದ ಶ್ರೀಮದಾಚಾರ್ಯರ ವಿಷಯದಲ್ಲಿ, ಕೃತಜ್ಞತಾಭಾವದಿಂದ ಇರತಕ್ಕದ್ದು; ಏಕೆಂದರೆ ಅದಕ್ಕೆ ಪ್ರತಿಯಾಗಿ ಏನನ್ನು ಮಾಡಲು ಸಾಧ್ಯವಿಲ್ಲದುದರಿಂದ ಎಂದು ಉಪದೇಶಿಸಿರುತ್ತಾರೆ.

**ಆಚಾರ್ಯರಿಂದ ತನಗೆ ಪ್ರಾಪ್ತವಾದ ರಹಸ್ಯೋಪದೇಶವನ್ನು ಸಚ್ಛಿಷ್ಯ ರಲ್ಲಿಗುರುಪರಂಪರಾನುಸಂಧಾನ ಪೂರ್ವಕವಾಗಿ ವಿನಿಯೋಗಿಸತಕ್ಕ ದ್ದೆಂದು ಏಳನೆಯ ಶಿಷ್ಯಕೃತ್ಯಾಧಿಕಾರವನ್ನು ತಿಳಿಸುತ್ತಾರೆ:-**

೭) **ತಾನು**-ಶಿಷ್ಯನಾದ ತಾನು, **ಇಪ್ಪಡಿಪೆತ್ತ**-ಈ ಪ್ರಕಾರವಾಗಿ ಹೊಂದಿದ, **ರಹಸ್ಯತ್ರಯಸಾರಾರ್ಥಮಾನ**-ಮೂರು ರಹಸ್ಯಗಳ ಸಾರಭೂತವಾದ ಅರ್ಥವಾದ, **ಮಹಾಧನತ್ತೈ**-ಕಳ್ಳರು ಅಪಹರಿಸುವರೆಂಬ ಭಯವೂ ಇಲ್ಲದೆ ಮತ್ತು ಉಪಯೋಗಿಸಿದರೆ ನ್ಯೂನತೆಯನ್ನು ಹೊಂದದೆ ಅಭಿವೃದ್ಧಿಯನ್ನು ಹೊಂದಿ, ನಿರತಿಶಯ ಪ್ರಾಪ್ತಿಯನ್ನುಂಟುಮಾಡುವ ಮಹಾಧನವನ್ನು, **ಮುನ್ನಿಲ್**-ಹಿಂದೆ, **ಅಧಿಕಾರತ್ತಿರ್ಸೊನ್ನಪಡಿಯೇ**-ಎಂತಹ ಅಧಿಕಾರದಲ್ಲಿ ಎಂದರೆ, **ಗುಣವತಿ ವಿನಿಯೋಕ್ತವ್ಯಂ**-ಸದ್ಗುಣಗಳನ್ನು ಹೊಂದಿ ಸಾತ್ವಿಕನಾದ ಅಧಿಕಾರಿಯಲ್ಲಿ, **ಉಚಿತ ಸ್ಥಾನಮರಿನ್ದು**-ಯೋಗ್ಯವಾದ ಸ್ಥಾನವೆಂದರೆ ಸತ್ಪಾತ್ರವೆಂದರಿತು, **ಸಮರ್ಪ್ಪಿಕ್ಕವೆನ್ನೀದು**-ಆ ಧನವನ್ನು ಅವನಲ್ಲಿ ವಿನಿಯೋಗಿಸುವ ಸಂದರ್ಭದಲ್ಲಿ ಎಂದರೆ ಉಪದೇಶಿಸುವಾಗ ಎಂಬರ್ಥವು, (೧) **ಯಥಾಪೂರ್ವಂ**-ಮೊದಲಲ್ಲಿ ಹೇಗೋ ಹಾಗೆ, **ದಕ್ಷಾದ್ಯೈಃ**-ದಕ್ಷನೇ ಮೊದಲಾದವರಾದ, **ಮುನಿಸತ್ತಮೈಃ**-ಶ್ರೇಷ್ಠರಾದ ಯೋಗಿಗಳಿಂದ, **ಪೃಷ್ಟಃ**-ಪ್ರಶ್ನಿಸಲ್ಪಟ್ಟವನಾಗಿ, **ಭಗವಾನ್**-ಮಹಾ ಪೂಜ್ಯರಾದ, **ಅಬ್ಜಯೋನಿಃ**-ಪ್ರಥಮತಃ ಪರಮಪುರುಷನ ನಾಭಿಕಮಲವೇ ಉತ್ಪತ್ತಿ ಸ್ಥಾನವಾಗಿಯುಳ್ಳ, **ಪಿತಾಮಹಃ**-ಆದುದರಿಂದಲೇ ಎಲ್ಲರಿಗೂ ಪಿತಾಮಹನೆನಿಸಿದ ಚತುರ್ಮುಖ ಬ್ರಹ್ಮನು, **ಪ್ರೋವಾಚ**-ಯಾವುದನ್ನು ಬಹು ಚೆನ್ನಾಗಿ ಉಪದೇಶಿಸಿದನೋ,

• ವಿಪು ೧.೨ ೭.೮

**ತ್ರೈಶ್ಶ್ರೋಕ್ತಂ ಪುರುಕುತ್ಸಾಯ ಭೂಭುಜೇ ನರ್ಮದಾತಟೇ । ಸಾರಸ್ವತಾಯ ತೇನಾಪಿ ಮಮ ಸಾರಸ್ವತೇನಚ" ಎನ್ರು ಶ್ರೀ ಪರಾಶರ ಬ್ರಹ್ಮರ್ಷಿ ಮೈತ್ರೇಯ ಭಗವಾನುಕ್ಕು ಅರುಳಿಚೆಯ್‌ದಾರ್ಪೋಲೆ, ಗುರುಪರಂಪರೈಯೈ ಪ್ರಕಾಶಿಪ್ಪಿತ್ತುಕ್ಕೊಂಡು, ತನ್ಕೃತಜ್ಞತೈಯುಮ್, ಅರ್ಥತ್ತಿನ್ ಶೀರ್ಮೈಯುಮ್, ತೋತ್ತ ಉಪದೇಶಿಕ್ಕವೇಣುಮ್.**

---

**ಅದನ್ನೇ ನಿನಗೆ ಕಥಯಾಮಿ**-ಓ ಶಿಷ್ಯರಾದ ಮೈತ್ರೇಯರೇ ನಿಮಗೆ ಹೇಳುವೆನು. **ತೈಃ**-ಆ ದಕ್ಷಬ್ರಹ್ಮಾದಿಗಳಿಂದ, **ನರ್ಮದಾತಟೇ**-ನರ್ಮದಾ ತೀರದಲ್ಲಿ, **ಪುರುಕುತ್ಸಾಯ**-ಪುರುಕುತ್ಸನೆಂಬ, **ಭೂಭುಜೇ**-ರಾಜನಿಗೆ, **ಉಕ್ತಂ**-ಹೇಳಲ್ಪಟ್ಟಿತು. **ತೇನಾಪಿ**–ಆ ಪುರುಕುತ್ಸನಿಂದ, **ಸಾರಸ್ವತಾಯ ಉಕ್ತಂ**-ಸಾರಸ್ವತರಿಗೆ ಉಪದೇಶಿಸಲ್ಪಟ್ಟಿತು. **ಸಾರಸ್ವತೇನಚ**-ಆ ಸಾರಸ್ವತರಿಂದಲಾದರೋ, **ಮಮ**-ನನಗೆ, **ಉಕ್ತಮ್**-ಹೇಳಲ್ಪಟ್ಟಿತು. ಹೀಗೆ ಪರಂಪರಯಾ ಗುರುಶಿಷ್ಯ ಕ್ರಮದಿಂದ ಚತುರ್ಮುಖನಿಂದಲೇ ಸಾಂಪ್ರದಾಯ ರೀತ್ಯಾ ಬಂದ ಉಪದೇಶವನ್ನೇ ಓ ಮೈತ್ರೇಯರೇ ನಿಮಗೆ ಹೇಳುತ್ತೇನೆ. ಅಮೋಘೋಪದೇಶವಾದುದರಿಂದ ಸಾವಧಾನದಿಂದ ಕೇಳತಕ್ಕದ್ದೆಂದು ಶ್ರೀ ಪರಾಶರರು ತಮ್ಮ ಶಿಷ್ಯರಾದ ಮೈತ್ರೇಯರಿಗೆ ಪೂರ್ವಗುರುಗಳನ್ನು ಶ್ಲಾಘಿಸಿ, ಅವರುಗಳನ್ನು ಅನುಸಂಧಾನ ಮಾಡಿ ಉಪದೇಶಿಸುವ ಸಂದರ್ಭವು" **ಎನ್ರು**-ಎಂಬುದಾಗಿ, **ಶ್ರೀ ಪರಾಶರ ಬ್ರಹ್ಮರ್ಷಿ**-ಪರಬ್ರಹ್ಮವನ್ನು ತಿಳಿದು ಬ್ರಹ್ಮವಿದ್ಯೆಯನ್ನು ಉಪದೇಶಿಸಲು ಅರ್ಹರಾದ ಶ್ರೀ ಪರಾಶರರು (ಶ್ರೀವ್ಯಾಸರ ತಂದೆಯು) **ಪೂಜ್ಯರಾದ ಮೈತ್ರೇಯರಿಗೆ ಅರುಳಿಚ್ಚೆಯ್ದಾರ್‌ಪೋಲೆ**-ಕೃಪೆಮಾಡಿ ಉಪದೇಶಿಸಿದ ಹಾಗೆ, **ಗುರುಪರಂಪರೈಯೈ ಪ್ರಕಾಶಿಪ್ಪಿತ್ತುಕ್ಕೊಂಡು**–ಶಿಷ್ಯನಾದ ತಾನು ತನ್ನ ಗುರುಪರಂಪರೆಯನ್ನು ಕೊಂಡಾಡಿ, **ತನ್ಕೃತಜ್ಞತೆಯುಮ್**-ತನಗೆ ತನ್ನ ಆಚಾರ್ಯದಲ್ಲಿರುವ ಕೃತಜ್ಞತಾಭಾವವನ್ನು, **ಶೀರ್ಮೈಯುಮ್**–ಅವರು ಹೇಳಿದ ಅರ್ಥಗಳ ಮಹಾತ್ಮ್ಯೆಯನ್ನು, **ತೋತ್ತ**-ತೋರಿಬರುವ ಹಾಗೆ, **ಉಪದೇಶಿಕ್ಕವೇಣುಮ್**–ಉಪದೇಶಿಸತಕ್ಕದ್ದು. ತಾನು ಆಚಾರ್ಯರಿಂದ ಸಂಪಾದಿಸಿದ ರಹಸ್ಯಾರ್ಥಗಳನ್ನೆಲ್ಲಾ ಸಚ್ಛಿಷ್ಯನಿಗೆ ಉಪದೇಶಿಸುವ ಸಂದರ್ಭದಲ್ಲಿ ತಮ್ಮ ಆಚಾರ್ಯಪರಂಪರೈಯನ್ನೆಲ್ಲಾ ಕೊಂಡಾಡಿ ತನ್ನ ಆಚಾರ್ಯರು ಹೇಗೆ ಸ್ವಾರಸ್ಯವಾಗಿ ರಹಸ್ಯಾರ್ಥಗಳನ್ನೆಲ್ಲಾ ಉಪದೇಶಿಸಿದರೋ ಹಾಗೆಯೇ ಶಿಷ್ಯನಿಗೆ ಅದರಲ್ಲಿ ಅಭಿರುಚಿಯುಂಟಾಗುವ ಹಾಗೆ ಉಪದೇಶಿಸತಕ್ಕದ್ದು ಎಂದು ಏಳನೆಯ ಶಿಷ್ಯಕೃತ್ಯವನ್ನು ತಿಳಿಸಿದರು. ಆದುದರಿಂದಲೇ ಆಚಾರ್ಯಪದವಿಯಲ್ಲಿರುವವನು ಶಿಷ್ಯನಿಗೆ ಉಪದೇಶಿಸುವುದಕ್ಕೆ ಮುಂಚೆ ತಾನೂ ನಿಂತು ಆಚಾರ್ಯಪರಂಪರೆಗಳ ತನಿಯನ್ನೆಲ್ಲಾ ಹೇಳಿ, ಅದನ್ನು ಶಿಷ್ಯರೆಲ್ಲರೂ ಅಧ್ಯಯನ ಮಾಡುವ ಹಾಗೆ ಮಾಡಿ ಅನಂತರ ಕುಳಿತು, ಉಪದೇಶ

## ಉಕ್ತ ಪ್ರಕಾರೇಣ ಉಪದೇಶಾಕರಣೇ ಸಪ್ರಮಾಣಂ ನಾನಾವಿಧ ಪ್ರತ್ಯವಾಯಾನಾಹ

**ಅಧ್ಯಾತ್ಮ ರಹಸ್ಯಙ್ಗಳೈ ಶೊಲ್ಲುಮವನ್ ಸಂಪ್ರದಾಯಮುನ್ರಿಕ್ಕೇ ಯಿರುಕ್ಕ ಏಡು ಪಾರ್ತ್ತಲ್ ಶುವರೇ (ಶೆವಿಯೇ) ರಕ್ಕೇಟ್ಟಾತಲ್**

---

ವನ್ನು ಆರಂಭಿಸುತ್ತಾರೆ. ಹಾಗೆಯೇ ಕಾಲಕ್ಷೇಪ ಮುಗಿದ ನಂತರವೂ ಅದೇ ಮೇರಿಗೆ ಎದ್ದು ನಿಂತು, ಪುನಃ ತನಿಯಗಳನ್ನೆಲ್ಲಾ ಹೇಳಿ ನಮಸ್ಕಾರ ಮಾಡುವ ಸತ್ಸಂಪ್ರದಾಯವಿರುತ್ತೆ. ಹೀಗೆ ಆಚಾರ್ಯಾನುಸಂಧಾನವಿರತಕ್ಕದ್ದೆಂದು ಶ್ರೀ ಗೀತಾಚಾರ್ಯರೂ ಅರ್ಜುನನಿಗೆ ಚತುರ್ಥಾಧ್ಯಾಯಾದಿಯಲ್ಲಿ ಬೋಧಿಸಿರುತ್ತಾರೆ.

**ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹ ಮವ್ಯಯಮ್ ।**
**ವಿವಸ್ವಾನ್ ಮನವೇಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ।**
**ಏವಂ ಪರಂ ಪರಾ ಪ್ರಾಪ್ತಂ ಇಮಂ ರಾಜರ್ಷಯೋ ವಿದುಃ ।"**

ಹೀಗೆ ಪರಂಪರಾನುಸಂಧಾನವು ಉಪದಿಷ್ಟವು

ಇದೇ ಸತ್ಸಂಪ್ರದಾಯವಾದುದರಿಂದಲೇ ಶ್ರೀ ನಿಗಮಾಂತ ದೇಶಿಕರು ಈ ಅಮೋಘ ಗ್ರಂಥದ ಮೂಲಕ ಮೂರು ರಹಸ್ಯಗಳ ರಹಸ್ಯಾರ್ಥಗಳನ್ನು ಉಪದೇಶಿಸುವುದಕ್ಕೆ ಪೂರ್ವಭಾವಿಯಾಗಿ ಗುರುಪರಂಪರಾಸಾರವೆಂಬ ಅಧಿಕಾರದಲ್ಲಿ ಗುರುಪರಂಪರಾನುಸಂಧಾನವನ್ನು ಮಾಡಿರುತ್ತಾರೆ. ಹಾಗೆ ಮಾಡತಕ್ಕದ್ದೆಂದು ಹಿಂದೆ ಅದರಲ್ಲೇ ಉಪದೇಶಿಸಿಯೂ ಇರುತ್ತಾರೆ. ಹೀಗೆ ಉಪದೇಶಿಸುವಾಗ ಗುರುಪರಂಪರಾನುಸಂಧಾನ ಪೂರ್ವಕವಾಗಿಯೇ ಉಪದೇಶಿಸತಕ್ಕದ್ದೆಂದು ತಿಳಿಸಿದರು. ಹಾಗೆ ತಿಳಿಸುವಾಗ ಅವರಿಂದ ಪ್ರಾಪ್ತವಾದ ಅಭಿಪ್ರಾಯಗಳಿಗೆ ವಿರುದ್ಧವಾಗಿ ಸ್ವತಂತ್ರಿಸಿ ಹೇಳಕೂಡದು; ಆದರೆ ಶಾಸ್ತ್ರವಿರುದ್ಧವಲ್ಲದ ಅಭಿಪ್ರಾಯಗಳು ತನಗೆ ತೋರಿಬಂದರೆ ಅವು ಭಗವದನುಗ್ರಹ, ಭಾಗವತರಾದ ಆಚಾರ್ಯರ ಅನುಗ್ರಹಗಳಿಂದ ಲಭಿಸಿತು ಎಂದು ಆಗಲೂ ಆಚಾರ್ಯರಲ್ಲಿ ಕೃತಜ್ಞತಾ ಭಾವವಿರಬೇಕೇ ವಿನಾ ಅಹಂಕಾರ ಭಾವವು ಕೂಡದು. ಇದನ್ನು ಈಗ ತತ್ಕ್ಷಣದಲ್ಲಿ ಇಲ್ಲದಿದ್ದರೂ ಮುಂದೆ ಉಪಪಾದಿಸುತ್ತಾರೆ. ಆದುದರಿಂದಲೇ ಶಿಷ್ಯನು ಆಚಾರ್ಯರನ್ನು **"ಗುರುಂಪ್ರಕಾಶಯೇದ್ಧೀಮಾರ್ನ್"** ಎಂಬಲ್ಲಿ ಹೇಳಿರುವ ಹಾಗೆ ಪ್ರಕಾಶಗೊಳಿಸತಕ್ಕದ್ದೆಂದು ಹೇಳಲ್ಪಟ್ಟಿತು.

### ಮೇಲೆ ಹೇಳಿದ ರೀತಿಯಲ್ಲಿ ತನ್ನ ಶಿಷ್ಯರಿಗೆ ಉಪದೇಶ ಮಾಡದಿದ್ದರೆ ಉಂಟಾಗುವ ಪ್ರತ್ಯವಾಯಗಳನ್ನು ತಿಳಿಸುತ್ತಾರೆ.

**ಅಧ್ಯಾತ್ಮರಹಸ್ಯಂಗಳೈ**-ವೇದಾಂತ ರಹಸ್ಯಗಳನ್ನು, **ಶೊಲ್ಲುಮವನ್**-ಉಪದೇಶಿಸುವವನು, **ಸಂಪ್ರದಾಯಮುನ್ರಿಕ್ಕೇ**-ಸಂಪ್ರದಾಯವನ್ನು ತ್ಯಜಿಸಿ, ಸಂಪ್ರದಾಯವು ಯಾವುದು ಎಂದರೆ ಶಿಷ್ಯನು ಗುರುವನ್ನು ಆಶ್ರಯಿಸಿ, ಪ್ರಣಿಪಾತ

**ಶೊಲ್ಲುಮಾಗಿಲ್ ಕಳವುಕೊಣ್ಡ ಆಭರಣಮ್ಪೂಣ್ಡಾರ್ಪೋಲೇ
ಕಣ್ಡಾರ್ಕೆಲ್ಲಾಮ್ ತಾನ್ ಅಞ್ಜವೇಣ್ಡುಮ್ಪಡಿಯಾಮ್. (೧)
"ಯದೃಚ್ಛಯಾ ಶ್ರುತೋ ಮನ್ತ್ರಶ್ಛನ್ನೇನಾಥ ಛಲೇನವಾ।
ಪತ್ರೇಕ್ಷಿತೋವಾ ವ್ಯರ್ಥಸ್ಸ್ಯಾತ್ಪ್ರತ್ಯುತಾ ನರ್ಥದೋ ಭವೇತ್"**

---

ವಾದಗಳನ್ನು ಮಾಡಿ, ಉಪದೇಶವನ್ನು ಪ್ರಾರ್ಥಿಸಿದ ನಂತರ ಗುರುವು ಆತನು ಉಪದೇಶಕ್ಕೆ ಅರ್ಹನೇ ಎಂದು ವಿಚಾರ ಮಾಡಿ, ತನ್ನ ಆಚಾರ್ಯಾನುಸಂಧಾನಪೂರ್ವಕವಾಗಿ ಪ್ರತಿಫಲಾಪೇಕ್ಷೆಯಿಲ್ಲದೆ, ಪರಮಕೃಪೆಯಾ ಉಪದೇಶಿಸೋಣವು, **ಏಡುಪಾರ್ತ್ತಾದಲ್**-ತಾನೇ ಪುಸ್ತಕವನ್ನು ನೋಡಿಯಾಗಲಿ, ಅಥವಾ **ಶೆವಿಯೇರಕ್ಕೇಟ್ಟಾದಲ್**-ಕಿವಿಗೆ ಯಾದೃಚ್ಛಿಕವಾಗೆ ಬಿದ್ದುದನ್ನು ಕೇಳಿದುದನ್ನೇಯಾಗಲಿ ಅಥವಾ **ಶುವರೇರಕ್ಕೇಟ್ಟಾದಲ್**-ಗೋಡೆಗೆ ಮರೆಯಾಗಿ ನಿಂತು ಕೇಳಿದುದನ್ನೇಯಾಗಲಿ, ಸಾಂದೀಪ ನಾರಾಸ್ವಾದಿಸಿಗಳಲ್ಲಿ "**ಶುವರ್ಪುರತ್ತಿಲೇ ಕೇಟ್ಟಾದಲ್**" ಎಂದು ವ್ಯಾಖ್ಯಾನ ಮಾಡಿರುತ್ತಾರೆ, **ಶೊಲ್ಲುಮಾಗಿಲ್**-ಹೇಳಿದ್ದಾದರೆ, **ಕಣ್ಡಾರ್ಕೆಲ್ಲಾಂ**-ನೋಡಿದವರಿಗೆಲ್ಲಾ **ತಾನ್ ಅಞ್ಜವೇಣ್ಡುಮ್ಪಡಿಯಾಮ್**-ತಾನು ಭಯಪಡಬೇಕಾಗಿ ಬರುತ್ತದೆ; ಹೇಗೆ ಎಂದರೆ ಒಂದು ದೃಷ್ಟಾಂತವನ್ನು ಕೊಟ್ಟಿರುತ್ತಾರೆ-**ಕಳವುಕೊಣ್ಡ ಆಭರಣಮ್ಪೂಣ್ಡಾರ್ಪೋಲೇ** ಕಳವು ಮಾಡಿದ ಆಭರಣಗಳನ್ನು ಧರಿಸಿದವರ ಹಾಗೆ, ಕಳವು ಮಾಡಿ ತಂದ ಆಭರಣಗಳನ್ನು ಧರಿಸಿಕೊಂಡವನು, ಹೇಗೆ ಕಂಡವರಿಗೆಲ್ಲಾ ಹೆದರಬೇಕೋ ಹಾಗೆ ಗುರುಗಳನ್ನು ಆಶ್ರಯಿಸದೇ ದೂರದಲ್ಲಿದ್ದುಕೊಂಡು ಕೇಳುದುದಾಗಿ ಯಥಾರ್ಥವಲ್ಲದ ಅರ್ಥಗಳನ್ನಾಗಲಿ, ತಾನೇ ಪುಸ್ತಕಗಳಿಂದ ಗ್ರಹಿಸಿದುದರಿಂದ ಅಯಥಾರ್ಥವಾದ ಅರ್ಥಗಳನ್ನಾಗಲಿ ಉಪದೇಶಿಸುವವನು, ತಾನು ಗೋಡೆಯ ಮರೆಯಲ್ಲಿ ನಿಂತು ಕೇಳುತ್ತಿರುವಾಗ ತಪ್ಪಾಗಿ ಗ್ರಹಿಸಿ ಯಾರಾದರೂ ಅದನ್ನು ಕಂಡರೆ ತನಗೆ ನಾಚಿಕೆಯಿಂದ; ಅಪಹಾಸ್ಯಕ್ಕೆಲ್ಲಿ ಗುರಿಯಾಗುವೆನೋ ಎಂಬ ಭಯವೂ ಇರುತ್ತದೆ ಆದುದರಿಂದ ತಾನು ಪುಸ್ತಕಗಳಿಂದ ಗ್ರಹಿಸಿದುದನ್ನಾಗಲಿ, ಮರೆಯಲ್ಲಿ ನಿಂತು ಕೇಳಿದುದನ್ನಾಗಲಿ ಉಪದೇಶ ಮಾಡಲು ಅನರ್ಹವು. ಅಪಹಾಸ್ಯಕ್ಕೆ ಎಲ್ಲಿ ಗುರಿಯಾಗುತ್ತೇನೋ ಎಂಬ ಭಯವು ಅಂತವನಿಗೆ ಇದ್ದೇ ಇರುತ್ತದೆಂಬ ಭಾವವು. ಈ ಅಭಿಪ್ರಾಯವನ್ನೇ ಪ್ರಮಾಣಪೂರ್ವಕವಾಗಿ ಸಮರ್ಥಿಸಿ, ತಾನು ಹೊಂದಿದ ರಹಸ್ಯಾರ್ಥೋಪದೇಶವೂ ಕೂಡಾ ನಿರರ್ಥಕವಾಗುತ್ತದೆಂದು ತಿಳಿಸುತ್ತಾರೆ:- (೧) "**ಯದೃಚ್ಛಯಾ**-ಯಾದೃಚ್ಛಿಕವಾಗಿ ಲಬ್ಧವಾದ ಸುಕೃತ ವಿಶೇಷದಿಂದ, **ಛನ್ನೇನ**-ಮರೆಯಲ್ಲಿ ನಿಂತಾಗಲಿ, **ಛಲೇನವಾ**-ವ್ಯಾಜ ಮಾತ್ರದಿಂದಾಗಲಿ, ಕಪಟ ವೇಷವನ್ನು ತಾಳಿಯಾಗಲಿ, **ಮನ್ತ್ರಃ**-ಮನ್ತ್ರವೂ ಮನ್ತ್ರಾರ್ಥವೂ ಸಹ **ಶ್ರುತಃ**-ಕೇಳಲ್ಪಟ್ಟಿದ್ದರೂ, **ಪತ್ರೇಕ್ಷಿತೋವಾ**-ತಾಳೆಯೋಲೆ ಪತ್ರದಲ್ಲಿದ್ದುದನ್ನು

---

(೨) ಗೀ: ೪.೩೪. (೩) ಪ. ಪ್ರ. ಪ್ರಥಮ ಶ್ಲೋಕ.

**ಇತ್ಯಾದಿಗಳಿರ್ ಪಡಿಂಯೋ ಪ್ರತ್ಯವಾಯ ಪರ್ಯನ್ತಮಾವುಮ್. ಕೇಟ್ಟು ಚೊಲ್ಲಕೆಯ್‌ದೇ** (೨) **ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ।"** (೩) **"ಪ್ರಣಿಪತ್ಯಾಭಿವಾದ್ಯಚ"** ಇತ್ಯಾದಿಗಳಿರ್ ಚೊಲ್ಲುಗಿರ

---

ನೋಡಿದುದಾದರೂ, **ವ್ಯರ್ಥಸ್ಸ್ಯಾತ್**-ವ್ಯರ್ಥವಾದುದಾಗುತ್ತದೆ; ಮನ್ತ್ರವು ಕೊಡತಕ್ಕ ಫಲವನ್ನು ಕೊಡಲಾರದೆಂಬ ಭಾವವು. ಮೋಕ್ಷಪ್ರದಾಯಕವಾದ ಮನ್ತ್ರೋಚ್ಚಾರಣೆಯು; ಅದು ನಿರರ್ಥಕವಾಗುತ್ತದೆಂಬ ಭಾವವು; ಮನ್ತ್ರಸಿದ್ಧಿಯಿಲ್ಲದೇ ಹೋಗಬಹುದೆಂಬ ತಾತ್ಪರ್ಯವು; **ಪ್ರತ್ಯುತ**-ಅಷ್ಟೇ ಮಾತ್ರವೇ ಅಲ್ಲದೆ ಅದಕ್ಕೆ ವಿಪರೀತವಾಗಿ **ಅನರ್ಥಪೋಭವೇತ್**-ಅನರ್ಥಫಲವನ್ನು ಕೊಡುವಂತಾದ್ದಾಗುವುದು. **ಇತ್ಯಾದಿಗಳಿರ್ ಪಡಿಂಯೋ**-ಇವೇ ಮೊದಲಾದ ಪ್ರಮಾಣಗಳಿಗೆ ಅನುಸಾರವಾಗಿ, **ಪ್ರತ್ಯವಾಯ ಪರ್ಯನ್ತಮಾವುಮ್**-ಉಪದೇಶಿಸಿದವನಿಗೆ ಅನರ್ಥವನ್ನುಂಟು ಮಾಡುವವರೆಗೂ ಪರಿಣಮಿಸಬಹುದು. ಹೀಗೆ ದೃಷ್ಟಾದೃಷ್ಟ ಅನರ್ಥಗಳುಂಟಾಗುವುವೆಂದು ಹೇಳಿದರು. ಆದುದರಿಂದ ಹೀಗೆಲ್ಲಾ ಕೇಳಿ ಉಪದೇಶಿಸುವದರಲ್ಲಿ ತುಂಬಾ ಪ್ರತ್ಯವಾಯವಿರುವುದರಿಂದ, ಶಾಸ್ತ್ರಸಮ್ಮತವಾದ ಮಾರ್ಗದಲ್ಲಿ ಸತ್ಸಂಪ್ರದಾಯವನ್ನು ಅನುಸರಿಸಿ ಸದ್ಗುರುವಿನಿಂದ ಪ್ರಾಪ್ತವಾದುದೇ ಉಪದೇಶಾರ್ಹವೆಂದು ಮುಂದೆ ಹೇಳಿ, ಹಾಗೆ ಮಾಡದೇ ಹೋದರೆ ಹೇಳನಾಸ್ಪದನಾಗುವನೆಂದು ತಿಳಿಸುತ್ತಾರೆ. **ಕೇಟ್ಟು ಚ್ಚೊಲ್ಲಕೆಯ್ ದೇ**-ಕೇಳಿ ಹೇಳಿದ ಹಾಗೆ ಕೇಳಿದ್ದನ್ನು ಉಪದೇಶಿಸದೆ, (೨) **"ತತ್**-ಆ ಜೀವತತ್ತ್ವ ವಿಷಯವಾದ ಜ್ಞಾನವನ್ನು **"ಅವಿನಾಶಿತುತದ್ವಿದ್ಧಿ"(೨-೧೭)** ಎಂದಾರಂಭಿಸಿ, **ವಿಷಾದೇಭಿಹಿತಾ**-ಇಲ್ಲಿಯವರೆಗೆ ಉಪದೇಶಿಸಿದುದನ್ನು, ಅಂತಹ ಕರ್ಮಯೋಗ ಜ್ಞಾನಯೋಗಗಳನ್ನಾರಂಭಿಸುವ ನೀನು, ಯೋಗ್ಯವಾದ ಕಾಲದಲ್ಲಿ, ಒಳ್ಳೇ ಜ್ಞಾನಿಗಳಾದ ಆಚಾರ್ಯರೊಬ್ಬರ **ಪ್ರಣಿಪಾತೇನ**-ನಮಸ್ಕಾರಾಭಿವಾದನಗಳೊಂದಿಗೆ, **ಪರಿಪ್ರಶ್ನೇನ**-ಮತ್ತು **ಸೇವಯಾ**-ಕೈಂಕರ್ಯಾದಿಗಳಿಂದಲೂ ಆಶ್ರಯಿಸಿ, **ವಿದ್ಧಿ** ತಿಳಿಯತಕ್ಕದ್ದು. ಮುಂದಕ್ಕೆ **"ಉಪದೇಕ್ಷ್ಯನ್ತಿತೇ ಜ್ಞಾನಿನಸ್ತತ್ತ್ವದರ್ಶಿನಃ"** ಎಂದು ಇರುತ್ತದೆ. ಆತ್ಮಸಾಕ್ಷಾತ್ಕಾರವನ್ನು ಯಥಾರ್ಥವಾಗಿ ಹೊಂದಿದ ಜ್ಞಾನಿಗಳು ನಿನ್ನ ಮನದ ಆಶಯವನ್ನು ತಿಳಿದವರಾಗಿ ಆ ಪ್ರಾಜ್ಞರು ಪರಮಕೃಪಯಾ ನಿನಗೆ ತತ್ತ್ವಜ್ಞಾನವನ್ನು ಉಪದೇಶಿಸುವರು ಎಂದು ಗೀತಾಚಾರ್ಯರು ಅರ್ಜುನನಿಗೆ ಉಪದೇಶಿಸುತ್ತಾರೆ. **"ಶಾಸ್ತ್ರಜ್ಞಾನಂ ಬಹುಕ್ಲೇಶಂ ಬುದ್ಧೇಶ್ಚಲನ ಕಾರಣಮ್" ಉಪದೇಶಾದ್ಧರಿಂಬುಧ್ವಾ ವಿರಮೇತ್ಸರ್ವಕರ್ಮಸು"** ಎಂಬ ಪ್ರಮಾಣವೂ ಅನುಸಂಧೇಯವು. (೨) **"ಪರಾಶರಂ ಮುನಿವರಂ ಕೃತಪೌರ್ವಾಹ್ಣಿಕ ಕ್ರಿಯಮ್। ಮೈತ್ರೇಯಃ ಪರಿಪಪ್ರಚ್ಛ ಪ್ರಣಿಪತ್ಯಾಭಿವಾದ್ಯಚ"** ಎಂಬುದು. ಉಪದೇಶಕರು ಹೇಗಿರಬೇಕೆಂಬುದು ಪ್ರಥಮತಃ ಈ

**ಮುರೈಯೊಳಿಯಕ್ಕೇಟ್ಟು ಚೊಲ್ಲುವಾಗಿಲ್ ಕಾಲನ್‌ಕೊಣ್ಡು ಆಭರಣ ಮ್ಪೂಣ್ಡಾರ್‌ಪ್ಪೋಲೇ ಕಣ್ಡಾರೆಲ್ಲಾರುಂ ತನ್ನೈ ಅರುವರುಕ್ಕುಮ್ಪಡಿಯಾಂ.**

---

ಶ್ಲೋಕದಲ್ಲಿ ಪೂರ್ವಾರ್ಧದಿಂದ ಹೇಳಲ್ಪಟ್ಟಿರುತ್ತದೆ. ವಸಿಷ್ಠಪೌತ್ರರಾಗಿ, ಅವರ ಉಪದೇಶದಿಂದ, ರಾಕ್ಷಸಕುಲ ನಾಶಕರವಾದ ಯಜ್ಞವನ್ನು ತ್ಯಾಗ ಮಾಡಿ, ಪುಲಸ್ತ್ಯ ಮಹರ್ಷಿಯವರ ಬಲದಿಂದ ವಿಷ್ಣುಪುರಾಣವನ್ನು ರಚಿಸುವ ಯೋಗ್ಯತೆಯನ್ನು ಹೊಂದಿದವರಾಗಿಯೂ, ಜ್ಞಾನನಿಧಿಯಾದ ವ್ಯಾಸರ ತಂದೆಯಾಗಿಯೂ, ಇರುವ ಬ್ರಹರ್ಷಿಯಾದ ಶ್ರೀ ಪರಾಶರರನ್ನು, **ಕೃತಪೌರ್ವಾಹ್ಣಿಕ ಕ್ರಿಯಮ್**- ಪ್ರಾತಃಕಾಲದಲ್ಲಿ ಮಾಡಬೇಕಾದ ನಿತ್ಯನೈಮಿತ್ತಿಕಾದಿ ವರ್ಣಾಶ್ರಮ ಧರ್ಮಗಳನ್ನು ಅನುಷ್ಠಿಸಿದವರನ್ನು, ಮೈತ್ರೇಯರು ಬಂದು ಹೀಗೆ ಜ್ಞಾನನಿಷ್ಠೆ ಕರ್ಮನಿಷ್ಠೆ ಎರಡನ್ನೂ ಹೊಂದಿದ ಗುರುವನ್ನು ಕಂಡು, **ಪ್ರಣಿಪತ್ಯಾಭಿವಾದ್ಯಚ**- ಅವರಿಗೆ ದಂಡವನ್ನಮಸ್ಕರಿಸಿ, ಅಭಿವಾದನಮಾಡಿ, ಮೈತ್ರೇಯರು ತತ್ವ ಹಿತಪುರುಷಾರ್ಥಗಳ ಯಥಾರ್ಥಜ್ಞಾನವನ್ನು ಪ್ರಾರ್ಥಿಸುವವರಾಗಿ, ಸವಿನಯವಾಗಿ ಪ್ರಶ್ನಿಸುತ್ತಾರೆಂಬುದು ಶ್ಲೋಕಾರ್ಥವು. ಹೀಗೆ ಸತ್ಸಂಪ್ರದಾಯರೀತ್ಯಾ ಬಂದುದಾದುದರಿಂದ ಮೈತ್ರೇಯರು ತಮ್ಮ ಶಿಷ್ಯರಿಗೆ ಉಪದೇಶಿಸಲು ಅರ್ಹರು. ಆದರೆ ಮೈತ್ರೇಯರು ಶೂದ್ರರಾದ ವಿದುರರಿಗೆ ಉಪದೇಶಿಸಿದು ಹೇಗೆ? ಎಂಬ ಆಕ್ಷೇಪಣೆಯು ಉದಿಸಬಹುದು. ಈ ಆಕ್ಷೇಪಣೆಗೆ ಭಾಗವತದಲ್ಲೇ ಸಮಾಧಾನವಾಗಿ ಯಮನು ಮಾಣ್ಡವ್ಯ ಶಾಪದಿಂದ ಜನಿಸಿದವರಾದುದರಿಂದ ದೋಷವಿಲ್ಲವೆಂದು ಭಾಗವತದಲ್ಲೇ ಉಪಪಾದಿತವು."

**ಇತ್ಯಾದಿಗಳಿರ್**– ಇವೇ ಮೊದಲಾದ ಪ್ರಮಾಣಗಳಲ್ಲಿ, **ಶೊಲ್ಲುಗಿರಮುರೈಯೊಳಿಯೆ**– ಹೇಳುವ ಪ್ರಕಾರ ಆಚಾರ್ಯಶಿಷ್ಯ ಸಬಂಧ ಕ್ರಮರೂಪ ಸತ್ಸಂಪ್ರದಾಯವನ್ನು ತ್ಯಜಿಸಿ ಕೇಟ್ಟು **ಶೊಲ್ಲುವಾಗಿಲ್**- ಕಿವಿಗೆಬಿದ್ದುದನ್ನು ಉಪದೇಶಿಸಿದುದಾದರೆ, **ಕಾಲಕೊಂಡು**– ಕಾಲಪುರುಷದಾನವನ್ನು ಪರಿಗ್ರಹಿಸಿ, ಎಂದರೆ ಒಬ್ಬನಿಗೆ ಗ್ರಹ ಪೀಡನ ಮೂಲಕ ಆಯುಸ್ಸಿಗೆ ತೊಂದರೆಯುಂಟಾದರೆ, ಎಳ್ಳಿನಲ್ಲಿ ಒಂದು ವಿಗ್ರಹವನ್ನು ರಚಿಸಿ, ಅದಕ್ಕೆ ಆಭರಣಗಳನ್ನೆಲ್ಲಾ ಹಾಕಿ ಅದನ್ನು ಪೀಡಾಪರಿಹಾರಾರ್ಥವಾಗಿ ಬ್ರಾಹ್ಮಣನಿಗೆ ಸದಕ್ಷಣವಾಗಿ ದಾನಮಾಡೋಣವು ಕಾಲಪುರುಷದಾನವೆನಿಸುತ್ತದೆ.

**ಆಭರಣ ಮ್ಪೂಣ್ಡಾರ್‌ವೋಲೇ**– ಆ ಧನದಿಂದ ಆಭರಣಮ್ನು ಮಾಡಿಸಿ ಧರಿಸಿದವರಹಾಗೆ, **ಕಣ್ಡಾರೆಲ್ಲಾರುಮ್**– ಅವನ್ನು ನೋಡಿದವರೆಲ್ಲರೂ, **ತನ್ನೈ**-ತನ್ನನ್ನು **ಅರುಕ್ಕವ್ಪಡಿಯ್ಯಾಮ್**–ಕುಚೋದ್ಯ ಮಾಡುವ ಹಾಗೆ ಆಗುತ್ತದೆ. ತಾನು ಬಹುಘನ. ಪಂಡಿತನು, ಶ್ರೇಷ್ಠನಾದ ಗುರುವು ಎಂದು ವೇಷವನ್ನು ಹಾಕಿರುವ ಐಹಿಕಲಿಪ್ತನೆಂಬ ಅಪಹಾಸ್ಯವನ್ನು ಮಾಡುವರೆಂಬ ಭಾವವು.

(೧) “ಯಶ್ಚಾಧರ್ಮೇಣ ವಿಬ್ರೂತೇ ಯಶ್ಚಾಧರ್ಮೇಣ ಪೃಚ್ಛತಿ। ತಯೋರನ್ಯತರಃ ಪ್ರೈತಿ ವಿದ್ವೇಷಂ ವಾಧಿಗಚ್ಛತಿ॥” ಎಙ್ಗಿರಪಡಿಯೇ ಅನರ್ಥಾವಹ ಮುಮಾಮ್.

**ಗುರೂಣಾಂ ಪ್ರಕಾಶನಂ ಶಿಷ್ಯಕೃತ್ಯೇ ಪ್ರಧಾನಂ**

**ಯಥಾ ನ್ಯಾಯಂ ಕೇಟ್ಟು ಚೊಲ್ಲಚ್ಚೆಯ್ದೇ ಶೊಲ್ಲುವೊಮ್ಪೋದು ಗುರುವೈ ಪ್ರಕಾಶಿಪ್ಪಿಯಾದೊಳಿಯುಮಾಗಿಲ್ ಇವನ ಶೊಲ್ಲುಗಿರ**

---

೧) ಇದು ವ್ಯಾಸರ ಮತ್ತು ವೈಶಂಪಾಯನಾದಿ ಶಿಷ್ಯರುಗಳ ಸಂವಾದದಲ್ಲಿ ಶಿಷ್ಯರ ಉಕ್ತಿಯು. **ಯಶ್ಚ**-ಯಾವ ಗುರುವಾದರೋ, **ಅಧರ್ಮೇಣವಿಬ್ರೂತೇ**-ಶಿಷ್ಯರು ಯೋಗ್ಯಾಧಿಕಾರಿಗಳೇ ಎಂದು ಪರೀಕ್ಷಿಸದೆ ಅಧರ್ಮದಿಂದ ಶಿಷ್ಯನಿಗೆ ಉಪದೇಶಿಸುತ್ತಾನೋ, ಅಥವಾ **ಯಶ್ಚಾಧರ್ಮೇಣಪೃಚ್ಛತಿ**-ಯಾವ ಶಿಷ್ಯನು ಸಂಪ್ರದಾಯಾನುಗುಣವಾಗಿ ಆಶ್ರಯಿಸಿ ಕೇಳದೆ ಅಂತಹ ಧರ್ಮವನ್ನು ತ್ಯಜಿಸಿ, ಸುಮ್ಮನೆ ಉಪದೇಶವನ್ನು ಕೇಳುವನೋ, **ತಯೋಃ**-ಈ ಎರಡು ಸಂದರ್ಭದಲ್ಲೂ ಅವರಿಬ್ಬರಲ್ಲಿ ಎಂದರೆ ಅಂತಹ ಗುರುಶಿಷ್ಯರಲ್ಲಿ, **ಅನ್ಯತರಃ**-ಯಾವನಾದರೂ ಒಬ್ಬನು, **ಪ್ರೈತಿ**-ಮರಣವನ್ನು ಹೊಂದುವನು, **ವಿದ್ವೇಷಂವಾ**-ಅಥವಾ ಮುಂದಕ್ಕೆ ಪರಸ್ಪರ ದ್ವೇಷವನ್ನಾಗಲಿ, **ಅಧಿಗಚ್ಛತಿ**-ಹೊಂದುವನು. ಆಚಾರ್ಯನು ಉಪದೇಶಿಸುವದೂ, ಶಿಷ್ಯನು ಕೇಳಿ ತಿಳಿಯುವುದೂ ಎರಡೂ ಶಾಸ್ತ್ರಾನುಗುಣವಾಗಿಯೂ, ಸಂಪ್ರದಾಯಾನುಗುಣವಾಗಿಯೂ ಇಲ್ಲವಿದ್ದ[illegible] ಇ[illegible]ಗೂ ಹಾ[illegible]ಗಬಹುದು. ಹಾಗಲ್ಲದೆ ಇವರಿಬ್ಬರಲ್ಲಿ ಯಾರಾದರೂ ಒಬ್ಬರು ಅಧರ್ಮ[illegible]ರಾದರೆ, ಅವರಿಗೇ ಹಾನಿಯಾಗಬಹುದು. ಅಥವಾ ಪರಸ್ಪರ ದ್ವೇಷವುಂಟಾಗಬಹುದು- ಇದರಿಂದ ಗುರುಶಿಷ್ಯಕ್ರಮದಿಂದ ಸರಿಯಾಗಿ ಆಶ್ರಯಿಸಿ ಪ್ರಾರ್ಥಿಸಿದ ಶಿಷ್ಯನಿಗೆ ಗುರುವು ಉಪದೇಶಿಸದಿರುವದೂ ಪ್ರತ್ಯವಾಯವೆಂದು ಇದೇ ಸಂದರ್ಭದಲ್ಲೇ ಹೇಳಲ್ಪಟ್ಟಿರುತ್ತದೆ.

**ಯೋನಿರ್ವದೇತ ಸಂಮೋಹಾದ್ಬ್ರಹ್ಮಣಂ ವೇದಪಾರಗಮ್ ।**
**ಸೋಽಭಿಧ್ಯಾನಾದ್ಬ್ರಹ್ಮಣಸ್ಯಪರಾಭೂಯಾದ ಸಂಶಯಮ್।”**

ಎಂದಿರುತ್ತದೆ. **ಎಙ್ಗಿರಪಡಿಯೇ**-ಎಂದು ಶಾಂತಿಪರ್ವದಲ್ಲಿ ಹೇಳಿರುವ ಹಾಗೆ, **ಅನರ್ಥಾವಹಮುಮಾಮ್**-ಅನರ್ಥವನ್ನುಂಟುಮಾಡುವದಾಗುತ್ತದೆ.

**ಸ್ವಗುರುವನ್ನು ಪ್ರಕಾಶಪಡಿಸುವುದು ಶಿಷ್ಯಕೃತ್ಯದಲ್ಲಿ ಮುಖ್ಯವಾದುದು.**

**ಗುರುಂ ಪ್ರಕಾಶಯೇದ್ಧೀಮಾನ್** ಎಂದು ಹಿಂದೆ ಗುರುಪರಂಪರೆಯಲ್ಲಿ ಉದಾಹರಿಸಲ್ಪಟ್ಟ ಹಾಗೆ ಶಿಷ್ಯನು ತನ್ನ ಗುರುವನ್ನು ಪ್ರಕಾಶಪಡಿಸತಕ್ಕದ್ದು:

(೧) ಭಾರ. ಶಾನ್ತಿ. ೩೨೫. ೫೧.

**ಅರ್ಥಙ್ಗಳ್ ನೇರಿಲ್ಲಾ ಕ್ಕೊತ್ತಾನ್ ಪ್ಪೋಲೇ ಯಡಿಯತ್ತನ್ವೈಯೋ ವೆನ್ರು ಶಿಷ್ಯನುಕ್ಕು ಮತಿಶಙ್ಕೈಪ್ಪಿರಕ್ಕುಮ್ ಪಡಿಯಾಯನಾದರ ವಿಷಯ ಮಾಮ್. "ಸ್ವಗುರೂಣಾಂ ಸ್ವಶಿಷ್ಯೇಭ್ಯಃ ಖ್ಯಾಪನಂ ಚಾಕೃತಂ ತಥಾ" ಎನ್ರು ದ್ವಾತ್ರಿಂಶದಪಚಾರ ವರ್ಗತ್ತಿಲೇ ಗುರುವೈ ಪ್ರಕಾಶಿಪ್ಪಿ ಯಾದೊಳಿಗೈಯುಮ್ ಪಠಿಕ್ಕಪ್ಪಟ್ಟದು. ಅಪ್ಪೋದು (೧) "ಗುರುಂ**

---

ಎಂದರೆ ಆತನ ಮಹಿಮೆಯನ್ನು ಕೊಂಡಾಡತಕ್ಕದ್ದು. ಆತನ ದಿವ್ಯ ಸೂಕ್ತಿಗಳನ್ನು ಶ್ಲಾಘಿಸಿ ಪ್ರಚುರಪಡಿಸತಕ್ಕದ್ದು. ಶಿಷ್ಯನಿಗೆ ಪಾಠಪ್ರವಚನ ಕಾಲದಲ್ಲಿ ಎದ್ದು ನಿಂತು ಅವರ ತನಿಯವನ್ನು ಹೇಳಿ ಅವರಿಗೆ ನಮಸ್ಕರಿಸುವ ಹಾಗೆ ಮಾಡತಕ್ಕದ್ದು, ಇತ್ಯಾದಿಗಳು. ಹೀಗೆ ಮಾಡದೇ ಹೋದರೆ ಪ್ರಾಪ್ತವಾಗುವ ಅನರ್ಥಗಳನ್ನು ತಿಳಿಸುತ್ತಾರೆ:-

**ಯಥಾನ್ಯಾಯಂ**-ಶಿಷ್ಯನಾದವನು ಶಾಸ್ತ್ರಾನುಗುಣವಾಗಿ ಆಚಾರ್ಯನಿಂದ **ಕೇಟ್ಟು ಚೊಲ್ಲಚೆಯ್‌ದೇ**-ಕೇಳಿ ತಿಳಿದ ಉಪದೇಶವನ್ನೇ, **ಶೊಲ್ಲುಮ್ಪೋದು**-ತನ್ನ ಶಿಷ್ಯನಿಗೆ ಹೇಳುವಾಗ, **ಗುರುವೈ ಪ್ರಕಾಶಿಪ್ಪಿಯಾದೊಳಿಯುಮಾಗಿಲ್**-ತನ್ನ ಗುರುವಿನ ತನಿಯವನ್ನು ತಾನೂ ಹೇಳದೆ, ಶಿಷ್ಯನ ಕೈಯಲ್ಲಿ ಹೇಳಿಸದೆ, ಮಧ್ಯ ಮಧ್ಯೆ ಉಪದೇಶ ಕಾಲದಲ್ಲಿ ಗುರುವು ತನಗೆ ಹೀಗೆ ಉಪದೇಶಿಸಿದರು ಎಂದು ಶಿಷ್ಯನಿಗೆ ಸ್ವಾರಸ್ಯವನ್ನು ತೋರಿಸಿ ಕೊಡದೆ, ಹೀಗೆ ಗುರುವನ್ನು ಪ್ರಕಾಶಪಡಿಸದೇ ಬಿಟ್ಟರೆ. **ಇವರ್ ಶೊಲ್ಲುಗಿರ ಅರ್ಥಙ್ಗಳ್**-ಈತನು ತನ್ನ ಶಿಷ್ಯನಿಗೆ ಉಪದೇಶಿಸುವ ಅಭಿಪ್ರಾಯಗಳು, **ನೇರಿಲ್ಲಾಕ್ಕೊತ್ತಾನ್ ಪೋಲ್**-ಬೇರಿನ ಆವಶ್ಯಕವಿಲ್ಲದೆ ಒಂದು ಗಿಡದ ಮೇಲೆ ಹುಟ್ಟಿ, ಆ ಗಿಡವನ್ನು ಹಾಳು ಮಾಡುವ ಲತಾವಿಶೇಷ, ಸಸಿಯ ಹಾಗೆ, **ಅಡಿಯತ್ತನ್ವೈಯೋ**-ಆಚಾರ್ಯಾನುಮತಿಯಿಲ್ಲದ, ಅಥವಾ ಶಿಷ್ಯಾನುಮತಿಯಿಲ್ಲದ ನಿರಾಧಾರವಾದ ಅಭಿಪ್ರಾಯಗಳೋ ಎಂದು, **ಶಿಷ್ಯನಿಗೆ, ಅತಿಶಙ್ಕೈಪ್ಪಿರಕ್ಕುಮ್ ಪಡಿಯಾಯ್**-ವಿಶೇಷ ಸಂದೇಹವನ್ನುಂಟುಮಾಡುವುದಾಗಿ, **ಅನಾದರವಿಷಯಮಾಮ್**-ಅವರ ಉಪದೇಶದಲ್ಲಿ ಅನಾದರವುಂಟಾಗುವುದಕ್ಕೆ ಕಾರಣವಾಗಬಹುದು.

ಮುಂದೆ, ಇಷ್ಟು ಮಾತ್ರವೇ ಅಲ್ಲದೆ, **ದ್ವಾತ್ರಿಂಶದಪರಾಧಗಳು** ಎಂದರೆ ೩೨ ಮಹಾಪರಾಧಗಳಲ್ಲಿ ಈ ಸ್ವಗುರುವನ್ನು ಪ್ರಕಾಶಪಡಿಸದ ದೋಷವೂ ಒಂದು ಎಂದು ಸಪ್ರಮಾಣವಾಗಿ ತಿಳಿಸುತ್ತಾರೆ. **ಸ್ವಶಿಷ್ಯೇಭ್ಯಃ**-ತಮ್ಮ ತಮ್ಮ ಶಿಷ್ಯರುಗಳಿಂದ, **ಸ್ವಗುರೂಣಾಂ**-ತಮ್ಮ ತಮ್ಮ ಗುರುಗಳ, **ಖ್ಯಾಪನಂ**-ಪ್ರಕಾಶನವು, **ಅಕೃತಂ ಚ ತಥಾ**-ಮಾಡಲ್ಪಡದಿರೋಣವೂ ಕೂಡ, ೨೨, ೩೨ ದೋಷಗಳು

---

(೧) ಶೇಷಸಂಹಿತ. ೧೪. ೫೦.

**ಪ್ರಕಾಶಯೇದ್ಧೀಮಾನ್ ಮನ್ತ್ರಂ ಯತ್ನೇನ ಗೋಪಯೇತ್ । ಅಪ್ರಕಾಶ ಪ್ರಕಾಶಾಭ್ಯಾಂಕ್ಷೀಯೇತೇ ಸಂಪದಾಯುಷೀ" ಎನ್ಱಪಡಿಯೇ ಜ್ಞಾನ ವೈಶದ್ಯಪೂರ್ವಕಮಾನ ಭಗವದನುಭವ ಸಂಪತ್ತುಮ್, ಆಯುಸ್ಸುಕ್ಕು ಸಂತಾನ (ಸತ್ತಾನುವೃತ್ತಿ) ಹೇತುವಾನ ಶೇಷತ್ವಾನುಸಂಧಾನಪೂರ್ವಕ**

---

ಯಾವುವು ಎಂಬುದರ ನಿರೂಪಣಾ ವಾಕ್ಯಾಂಶವು," **ಎನ್ರು**-ಎಂಬುದಾಗಿ, **ದ್ವಾತ್ರಿಂಶದಪಚಾರವರ್ಗತ್ತಿಲ್**-೩೨- ಅಪಚಾರ ಸಮೂಹದಲ್ಲಿ, **ಗುರುವೈ ಪ್ರಕಾಶಿಪ್ಪಿಯಾದೊಳಿಗೈಯುಮ್**-ಗುರುವನ್ನು ಪ್ರಕಾಶಿಸದೇ ಇರುವುದೂ ಸಹ, **ಪಠಿಕ್ಕಪ್ಪಟ್ಟದು**-ಮೇಲೆ ಹೇಳಿದ ವಾಕ್ಯ ಮೂಲಕ ತಿಳಿಸಲ್ಪಟ್ಟಿರುತ್ತದೆ. ಈ ದ್ವಾತ್ರಿಂಶದಪಚಾರಗಳು ವರಾಹ ಪುರಾಣದಲ್ಲಿ ಹೇಳಲ್ಪಟ್ಟಿವೆ. ಅವು ಯಾವುವೆಂದರೆ- ೧) ವಾಹನದೊಂದಿಗಾಗಲಿ, ಪಾದುಕೆಯೊಂದಿಗಾಗಲಿ, ದೇವಾಲಯ ಪ್ರವೇಶವು. ೨) ಭಗವದುತ್ಸವ ಕಾಲದಲ್ಲಿ ಇರದೆ ಹೊರಟು ಹೋಗೋಣವು. ೩) ಚಾಮರಾದಿ ಸೇವೆಗಳನ್ನು ಮಾಡದೇ ಇರುವ ಇತರರು ಏಕಹಸ್ತದಿಂದ ನಮಸ್ಕರಿಸೋಣವು. ೪) ಶೌಚಾದಿ ಕಾಲದಲ್ಲೂ ಸ್ನಾನಾದಿಗಳಿಲ್ಲದೆಯೂ ದೇವರನ್ನು ಸೇವಿಸೋಣವು. ೫) ಭಗವತ್ಸನ್ನಿಧಿಯಲ್ಲಿ ಕಾಲು ಚಾಚಿಕೊಂಡಾಗಲಿ, ಕಾಲು ಮೇಲೆ ಕಾಲು ಹಾಕಿಕೊಂಡಾಗಲಿ, ಕೂಡೋಣ, ಮಲಗೋಣ, ಭೋಜನ ಮಾಡೋಣ, ೬) ಭಗವತ್ಕಥೆಯಲ್ಲದೆ ಘಟ್ಟಿಯಾಗಿ ಮಾತಾಡುವುದು, ವ್ಯರ್ಥ ಮಾತುಗಳನ್ನಾಡುವುದು. ೭) ಭಗವತ್ಸನ್ನಿಧಿಯಲ್ಲಿ ನಗುವುದು, ಅಳುವುದು. ೮) ಜಗಳವಾಡುವುದು, ಶಿಕ್ಷಿಸುವುದು, ಅನುಗ್ರಹಿಸುವುದು. ೯) ಸ್ತ್ರೀಯರೊಂದಿಗೆ ಕ್ರೀಡಾಸೂಚಕ ಮಾತುಗಳನ್ನಾಡುವುದು. ೧೦) ಅಪಾನ ವಾಯುವನ್ನು ಬಿಡುವುದು. ೧೧) ಕರಿಯ ಕಂಬಳಿಯನ್ನು ಹೊದ್ದುಕೊಂಡೋ ಅಥವಾ ಅಂಗಿ ಮೊದಲಾದುವುಗಳನ್ನು ಹಾಕಿಕೊಂಡೋ ಭಗವಂತನನ್ನು ಸೇವಿಸುವುದು. ೧೨) ಇತರರನ್ನು ಸ್ತುತಿಸುವುದು ಅಥವಾ ನಿಂದಿಸುವುದು. ೧೩) ಭಗವಂತನಿಗೆ ಮುಖ್ಯೋಪಚಾರ ಮಾಡಲು ಶಕ್ತಿಯಿದ್ದರೂ ಮಾಡದೆ ಗೌಣವಾಗಿ ಮಾಡೋಣವು. ೧೪) ಭಗವನ್ನಿವೇದನವಾದುದಲ್ಲವನ್ನು ತಿನ್ನೋಣವು. ೧೫) ಆಯಾ ಕಾಲಗಳ ಫಲಗಳನ್ನು ಸಮರ್ಪಿಸದಿರೋಣವು. ೧೬) ಭಗವನ್ನಿವೇದಿತವಾದುದಕ್ಕೆ ಬೇರೇ ಪದಾರ್ಥಗಳನ್ನು ಸೇರಿಸಿ ಸೇವಿಸೋಣವು. ೧೭) ಭಗವಂತನಿಗೆ ಪೃಷ್ಠಭಾಗವನ್ನು ತೋರಿಸೋಣವು. ೧೮) ದೇವಾಲಯದಲ್ಲಿ ಇತರರನ್ನು ಸೇವಿಸುವುದು. ೧೯) ಆಚಾರ್ಯರಿಗೆ ಮರ್ಯಾದೆ ಮಾಡದೆ ಮೌನವಾಗಿರೋಣವು. ಬಹುಶಃ ಇದನ್ನು ಮನಸ್ಸಿನಲ್ಲಿಟ್ಟೇ ಇಲ್ಲಿ ಶ್ರೀದೇಶಿಕರು ಆಚಾರ್ಯನನ್ನು ಶಿಷ್ಯನು ಪ್ರಕಾಶಪಡಿಸದಿರುವುದು. ದ್ವಾತ್ರಿಂಶದಪರಾಧಗಳಲ್ಲಿ ಸೇರಿತೆಂದು ಹೇಳುತ್ತಾರೆ. ೨೦) ಆತ್ಮಪ್ರಶಂಸೆಯು ೨೧) ದೇವತಾನಿಂದನೆ.

---

(೨) ಶೇಷಸಂಹಿತೆ. (೩) ಗೀ. ೧೬. ೨೩ (೪) ಗೀ. ೧೬. ೨೪

೨೨) ಕೂದಲು, ಉಗುರು ಎಲುಬುಗಳನ್ನು ದೇವಾಲಯದಲ್ಲಿ ಹಾಕುವುದು. ೨೩)ಉಗಿಯುವುದು. ೨೪) ದೇವಾಲಯ ಪ್ರಾಕಾರದಲ್ಲಿ ಮಲಮೂತ್ರವಿಸರ್ಜನೆ. ೨೫) ದೇವಾಲಯಕ್ಕೆ ಬಂದು ಅಲ್ಲಿ ಹೇಳುತ್ತಿರುವ ಭಗವತ್ಕಥೆಯನ್ನು ಕೇಳದೆ ಹೋಗೋಣವು. ೨೬) ದೇವತಾಂತರಕ್ಕೆ ಉಚ್ಛಿಷ್ಟವಾದ ಹೂವುಗಳನ್ನು ಭಗವಂತನಿಗೆ ಸಮರ್ಪಿಸುವುದು. ೨೭) ವಿಮಾನಛಾಯೆಯನ್ನು ತುಳಿಯುವುದು. ಅಜ್ಞಾನದಿಂದ ತುಳಿದರೆ ಪ್ರದಕ್ಷಿಣೆ ಮಾಡದೇ ಹೋಗುವುದು. ೨೮) ದೇವತಾಂತರವನ್ನು ಭಗವಂತನನ್ನು ಸಮಾನವೆಂದು ಭಾವಿಸುವದು. ೨೯) ಭಗವದ್ವಿಗ್ರಹವನ್ನು ಕಲ್ಲು, ಲೋಹ ಮುಂತಾದ್ದಾಗಿ ಭಾವಿಸುವುದು. ೩೦) ಭಗವಂತನಿಗಾಗಿ ಉಚ್ಛಿಷ್ಟವಾದ ಹೂವನ್ನು ಮೂಸಿ ನೋಡುವುದು. ೩೧) ಶೂದ್ರಾದಿ ಸ್ಪರ್ಶವಾಯಿತೆಂದು ದೇವಾಲಯದಿಂದ ಹೋಗಿ ಸ್ನಾನ ಮಾಡುವುದು. ೩೨) ಭಗವಂತನಿಗೆ ಹಚ್ಚಿಟ್ಟಿರುವ ದೀಪಗಳನ್ನು ಬೇರೆ ಕೆಲಸಕ್ಕಾಗಿ ತೆಗೆದುಕೊಂಡು ಹೋಗೋಣವು. ಇವೇ ೩೨ ಅಪರಾಧಗಳು. ಇವುಗಳು ಯಾವುವೂ ಪ್ರಾಪ್ತವಾಗದ ಹಾಗೆ ನಡೆದುಕೊಳ್ಳತಕ್ಕದ್ದು.

ಮುಂದಿನ ವಾಕ್ಯಗಳಿಂದ, ಪುನಃ ಸ್ವಾಚಾರ್ಯರನ್ನು ಪ್ರಕಾಶಪಡಿಸದೇ ಇರುವದು ಮಹಾಪಾತಕವಾಗಿ ಪರಿಣಮಿಸುತ್ತದೆಂದು ಉಪಪಾದಿಸುತ್ತಾರೆ— ಹಿಂದೆ ಗುರುಪರಂಪರಾಸಾರದಲ್ಲಿ ಉದಾಹರಿಸಿದ ಶೇಷಸಂಹಿತಾವಾಕ್ಯವನ್ನು ಉದಾಹರಿಸಿ ಅದರ ತಾತ್ಪರ್ಯವನ್ನು ತಿಳಿಸಿ, ಶಿಷ್ಯಕೃತ್ಯದಲ್ಲಿ ಆಚಾರ್ಯವ್ಯಾಪನವು ಮುಖ್ಯವಾದುದೆಂದು ಹೇಳಿ, ಹೀಗೆ ನಡೆವದೇ ಇರುವುದು ಮಹಾಪಾತಕವಾಗುತ್ತದೆಂದು ಅದೇ ಶೇಷ ಸಂಹಿತಾವಾಕ್ಯ ಮೂಲಕ ತಿಳಿಸುತ್ತಾರೆ.— "**ಗುರುಂ ಪ್ರಕಾಶಯೇತ್**" ಎಂಬ ಶ್ಲೋಕಾರ್ಥಕ್ಕೆ ಗುರುಪರಂಪರಾಸಾರದ ೬ ೮ ಪುಟಗಳನ್ನು ನೋಡಿ. ಗುರುವನ್ನು ಪ್ರಕಾಶಪಡಿಸಬೇಕು, ಮನ್ತ್ರವನ್ನು ಅಮೋಘವಾದ ವಜ್ರರತ್ನ ಮೊದಲಾದವುಗಳಹಾಗೆ ಗೋಪನಮಾಡಬೇಕು. ಹಾಗೆಮಾಡದೆ, ಗುರುವನ್ನು ಪ್ರಕಾಶಪಡಿಸದೆಯೂ, ಮನ್ತ್ರವನ್ನು ಗೋಪನಮಾಡದೆಯೂ ಇದ್ದರೆ ಈತನ ಸಂಪತ್ತೂ ಆಯುಸ್ಸೂ ಕ್ಷೀಣವಾಗುತ್ತದೆಂದು ಹೇಳಲ್ಪಟ್ಟಿರುತ್ತದೆ. ಆದರೆ ವೈರಾಗ್ಯದೆಶೆಯಲ್ಲಿರುವ ಪ್ರಪನ್ನನಿಗೆ ಐಹಿಕಸಂಪತ್ತೂ ಆಯುಸ್ಸೂ ಬೇಕಿಲ್ಲವಲ್ಲಾ ಹಾಗಾದರೆ ಸಂಪತ್ತೂ ಯಾವುದು ಎಂದರೆ ಜ್ಞಾನಸಂಪತ್ತೆಂದೂ ಆಯುಸ್ಸು ಎಂದರೆ ಸ್ವನಿಷ್ಠೆ ಅದರಿಂದುಂಟಾಗುವಕಾಲವಿಳಂಬ, ಎಂದೂ ಅರ್ಥಮಾಡಿದರು, ಅದನ್ನೇ ಇಲ್ಲಿಯೂ ವಿಶದೀಕರಿಸುತ್ತಾರೆ.

**ಅಪ್ಪೋದು**— ಹಾಗೆತನ್ನ ಗುರುವನ್ನು ಪ್ರಕಾಶಪಡಿಸದೇ ಇದ್ದಸಂದರ್ಭದಲ್ಲಿ, "**ಗುರುಂ ಪ್ರಕಾಶಯೇತ್**" ಇತ್ಯಾದಿ **ಎಙ್ಗರಳಡಿಯೇ**—ಎಂಬಲ್ಲಿ ಹೇಳಿರುವ ಹಾಗೆ, **ಜ್ಞಾನವೈಶದ್ಯಪೂರ್ವಕಮಾನ ಭಗವದನುಭವ ಸಂಪತ್ತುಮ್**— ಯಥಾರ್ಥವಾದ ಜ್ಞಾನ ಮೂಲಕ ಉಂಟಾಗುವ ಭಗವಂತನ ಧ್ಯಾನದಿಂದುಂಟಾಗುವ ಅನುಭವ ಸಂಪತ್ತು, ಇದು ಸಂಪತ್, ಎಂಬ ಅರ್ಥವು. ಸಂತಾನ ಹೇತು

**ಸ್ವನಿಷ್ಠೈಯುಮ್ ಕುಲೈಯುಮ್ಪಡಿಯಾಮ್. ಗುರುವೈ ಪ್ರಕಾಶಿಪ್ಪಿಯಾ ನಿರ್ಕಚೆಯುದೇ- ಅವನ್ ಪಣ್ಣಿನ ಶಾಸ್ತ್ರೀಯೋಪದೇಶತ್ತುಕ್ಕು ವಿರುದ್ಧಂ ಶೊಲ್ಲುವಾಗಿಲ್ ವಿಪ್ರಲಂಭಕನೆನ್ರು ಪೇರುವಾಯ್, (೨) ಜ್ಯೋತಿಷ್ಯಂ ವ್ಯವಹಾರಂ ಚ ಪ್ರಾಯಶ್ಚಿತ್ತಂ ಚಿಕಿತ್ಸಕಮ್। ವಿನಾಶಾಸ್ತ್ರೇಣ ಯೋ ಬ್ರೂಯಾತ್ತಮಾಹುರ್ಬ್ರಹ್ಮಘಾತಕಮ್" ಎಙ್ಗರಪಡಿಯೇ ಪಾಪಿಷ್ಠನುಮಾಮ್.**

---

ವಾನ ಎಂದು ಪಾಠವಾದರೆ, "**ಭಗವತ್ ಪರಿಪೂರ್ಣಾನುಭವ ಕೈಂಕರ್ಯಕರಣ ರೂಪೋವಿಸ್ತಾರಃ**'' ಎಂಬು ಸಾರದೀಪವ್ಯಾಖ್ಯಾನವಿರುತ್ತದೆ. **ಆತ್ಮಾವುಕ್ಕು**- ಜೀವಾತ್ಮನಿಗೆ, **ಸತ್ತಾನುವೃತ್ತಿಹೇತುವಾನ**- ಸತ್ತೆಯು ಅನುಸರಿಸಿ ಬರುವ ದಕ್ಕೆ ಕಾರಣಭೂತವಾದ, **ಶೇಷತ್ವಾನುಸಂಧಾನಪೂರ್ವಕ ಸ್ವನಿಷ್ಠೈಯುಮ್**- ಮೂಲ ಮನ್ತ್ರದಲ್ಲಿ ತೋರಿಬರುವ ಶೇಷತ್ವಾನುಸಂಧಾನಪೂರ್ವಕವಾದ ತನ್ನ ನಿಷ್ಠೆಯೂ, ಇದು ಆಯುಸ್ಸಿನಾರ್ಥವು. **ಕುಲೈಯುಮ್ಪಡಿಯಾಮ್**- ನಾಶವಾಗುವಂತಾದ್ದಾಗುವುದು. ಇದರಿಂದ ಈತನಿಗೆ ಪರಿಪೂರ್ಣಾನುಭವದಲ್ಲಿ ವಿಳಂಬವು ಸಂಭವಿಸಬಹುದೆಂಬ ತಾತ್ಪರ್ಯವಾಗಬಹುದು.

ಮುಂದೆ ಗುರುವು ತನಗೆ ಉಪದೇಶಿಸಿದ ಅರ್ಥಕ್ಕೆ ವಿರುದ್ಧವಾಗಿ ಅರ್ಥ ಹೇಳಿದರೆ ಆಗ ಈತನಿಗೆ ವಿಪ್ರಲಂಭಕನೆಂದರೆ ವಿಶೇಷ ಮೋಸಗಾರನೆಂಬ ಹೆಸರು ಉಂಟಾಗುತ್ತದೆಂದೂ ಪಾಪಿಷ್ಠನೂ ಸಹ ಆಗುವನೆಂದೂ ಸಪ್ರಮಾಣವಾಗಿ ತಿಳಿಸುತ್ತಾರೆ:-

**ಗುರುವೈ**-ತನ್ನ ಗುರುವನ್ನು, **ಪ್ರಕಾಶಿಪ್ಪಿಯಾನಿರ್ಕಚ್ಚೆಯುದೇ**-ಪ್ರಕಾಶಿಸದೇ ಇದ್ದರೂ ಕೂಡ, **ಅವನ್‌ಪಣ್ಣಿನ**-ಆ ಗುರುವು ಮಾಡಿದ, **ಶಾಸ್ತ್ರೀಯೋಪದೇಶತ್ತುಕ್ಕು**-ಶಾಸ್ತ್ರಾನುಗುಣವಾದ ಉಪದೇಶಕ್ಕೆ, **ವಿರುದ್ಧಂ ಶೊಲ್ಲುವಾಗಿಲ್**-ವಿರುದ್ಧವಾದ ಅಭಿಪ್ರಾಯಗಳನ್ನು ಹೇಳಿದರೆ, **ವಿಪ್ರಲಂಭಕನೆನ್ರು ಪೇರುವಾಯ್**-ತುಂಬಾ ವಂಚಕನೆಂಬ ಹೆಸರೂ ಉಂಟಾಗಿ, (೨) **ಜ್ಯೋತಿಷ್ಯಂ**- ಜ್ಯೋತಿಶ್ಶಾಸ್ತ್ರವನ್ನೂ, **ವ್ಯವಹಾರಂಚ**-ಧರ್ಮಶಾಸ್ತ್ರವನ್ನೂ, **ಪ್ರಾಯಶ್ಚಿತಂ**- ಪ್ರಾಯಶ್ಚಿತ್ತ ವಿಧಿಗಳನ್ನೂ, **ಚಿಕಿತ್ಸಕಮ್**-ವೈದ್ಯ ಶಾಸ್ತ್ರವನ್ನು, **ವಿನಾಶಾಸ್ತ್ರೇಣ**- ಶಾಸ್ತ್ರಪಙ್ಕ್ತಿಗಳನ್ನು ತ್ಯಜಿಸಿ **ಯೋಬ್ರೂಯಾತ್**-ಯಾವನು ಹೇಳುವನೋ, **ತಂ**-ಅವನನ್ನು, **ಬ್ರಹ್ಮಘಾತಕಮ್**-ಬ್ರಹ್ಮಹತ್ಯಮಾಡಿದವನೆಂದು, **ಆಹುಃ**- ಶಾಸ್ತ್ರಜ್ಞರು ಹೇಳುವರು" **ಎಙ್ಗರಪಡಿಯೇ**-ಎಂದು ಹೇಳಿರುವ ಹಾಗಿ, **ಪಾಪಿಷ್ಠನುಮಾಮ್**-ಪಾಪ ಮಾಡಿದವನೂ ಸಹ ಆಗುವನು. ಒಂದುವೇಳೆ ಇವುಗಳು ತನಗೆ ಆಚಾರ್ಯರು ಉಪದೇಶಿಸಿದ ಅಮೋಘಾರ್ಥಗಳೆಂದು ಹೇಳಿ ಅವರ ಸೂಕ್ತಿಗಳನ್ನು ಪ್ರಕಾಶಪಡಿಸದಿದ್ದರೂ ಚಿಂತೆಯಿಲ್ಲವು, ಆದರೆ ಶಾಸ್ತ್ರಪಙ್ಕ್ತಿಗಳಿಗನುಗುಣ

---

(೨) ಶೇಷಸಂಹಿತೆ.

## ಸ್ವಾಚಾರ್ಯೇಣ ಲಬ್ಧಜ್ಞಾನಮವಶ್ಯಂ ಸಚ್ಛಿಷ್ಯೇಭ್ಯ ಉಪದಿಶೇತ್

ವಾಗಿ ಉಪದೇಶಿಸಿದುದನ್ನು ಬದಲಾಯಿಸಿ, ತನ್ನ ಪ್ರಾಶಸ್ತ್ಯಕ್ಕಾಗಿ ಅದಕ್ಕೆ ವಿರುದ್ಧ ವಾದ ಅರ್ಥಗಳನ್ನು ಬೋಧಿಸಿದರೆ ಅವನು ವಂಚಕನೆಂಬ ಹೆಸರು ಬರುವುದೂ ಅಲ್ಲದೆ ಬ್ರಹ್ಮಹತ್ಯಾದೋಷಕ್ಕೆ ಸಮಾನವಾದ ಅಪರಾಧಕ್ಕೆ ಗುರಿಯಾಗುವನೆಂಬ ಭಾವವು. ಇದರಿಂದ ಶಾಸ್ತ್ರದಬ್ಬೆಗೆ ವಿರುದ್ಧವಾದ ಅರ್ಥವನ್ನು ತಾನು ಗುರುವೆಂಬ ಭಾವನೆಯಿಂದ ಹೇಳಿದರೆ, ಆಗ ಆತನು ಆಚಾರ್ಯಸ್ಥಾನಕ್ಕೆ ಅರ್ಹನೇ ಅಲ್ಲವೆಂದು ಹೇಳಿದಂತಾಯಿತು. ಈ ಸಂದರ್ಭದಲ್ಲಿ ಗೀತಾವಾಕ್ಯವು ಅನುಸಂಧೇಯವು. (೩) **"ಯಶ್ಶಾಸ್ತ್ರವಿಧಿ ಮುತ್ಸೃಜ್ಯವರ್ತತೇ ಕಾಮಕಾರತಃ। ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್"** ಇಲ್ಲಿ ಶಾಸ್ತ್ರವಿಧಿ ಯನ್ನು ಹೇಳಿದುದು, ವಿಧಿ ವಾಕ್ಯಗಳಲ್ಲದ ಶಾಸ್ತ್ರಾಭಿಪ್ರಾಯಗಳಿಗೂ ಉಪ ಲಕ್ಷಣವು. ಆದುದರಿಂದಲೇ (೪) **"ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ ಕಾರ್ಯಾ ಕಾರ್ಯವ್ಯವಸ್ಥಿತೌ"** ಎಂದು ಹೇಳಲ್ಪಟ್ಟಿತು. ಆದರೆ ಯಾವುದೋ ಒಂದು ಸಂದ ರ್ಭದಲ್ಲಿ ಪ್ರಮಾದದಿಂದ ಆಚಾರ್ಯರು ಶಾಸ್ತ್ರವಿರುದ್ಧವಾಗಿ ಹೇಳಿದರೂ, ಅದನ್ನು ಶಾಸ್ತ್ರಾನುಗುಣವಾಗಿಯೇ ಉಪದೇಶಿಸಿದರೆ ಪ್ರತ್ಯವಾಯವಿಲ್ಲವೆಂದೂ ಇದರಿಂದ ಹೇಳಿದಂತಾಯಿತು. ಅದೂ ಅಲ್ಲದೆ ಶಾಸ್ತ್ರವಿರುದ್ಧವಲ್ಲದ, ಸ್ವಾರಸ್ಯಾರ್ಥಗಳನ್ನು ತನ್ನ ಆಚಾರ್ಯರು ಒಂದು ವೇಳೆ ಅವುಗಳನ್ನು ಬೋಧಿಸದಿದ್ದರೂ, ತಾನು ಆಚಾರ್ಯ ವರ್ಗದ ಕೃಪೆಯಿಂದಲೂ ಸರ್ವೇಶ್ವರ ಕೃಪೆಯಿಂದಲೂ ಅವುಗಳನ್ನು ಹೊಂದಿದನೆಂಬ ಅನುಸಂಧಾನಪೂರ್ವಕವಾಗಿ ಉಪದೇಶಿಸೋಣವು, ಪ್ರತ್ಯವಾಯಕ್ಕೆ ಗುರಿಯಾಗು ವುದಿಲ್ಲವೆಂದೂ ಮುಂದೆ ಶ್ರೀ ದೇಶಿಕವರ್ಯರೇ ಉಪಪಾದಿಸುತ್ತಾರೆ.

ತಾನು ಅಧಿಕರಿಸಿದ ರಹಸ್ಯಾರ್ಥಗಳನ್ನು ಯಾರಿಗೂ ವಿನಿಯೋಗಿಸದೇ ಇರು ವದೂ ಕೂಡ ಸರಿಯಲ್ಲವೆಂದು ಉಪದೇಶಿಸುತ್ತಾರೆ; ಆಗಲೂ ಶಾಸ್ತ್ರವಿಧಿಗೆ ವಿರೋಧ ವಾಗುವುದರಿಂದ ಅದೂ ದೋಷಾವಹವೆಂದೇ ಹೇಳುತ್ತಾರೆ.

## ತನ್ನ ಆಚಾರ್ಯರಿಂದ ಪ್ರಾಪ್ತವಾದ ಜ್ಞಾನವನ್ನು ಸಚ್ಛಿಷ್ಯರಿಗೆ ಉಪದೇಶಿಸತಕ್ಕದ್ದು

ಆಚಾರ್ಯನಿಂದ ಸದುಪದೇಶವನ್ನು ಹೊಂದಿದ ಶಿಷ್ಯನೂ ಕೂಡ ತಾನೂ ಆಚಾರ್ಯಸ್ಥಾನದಲ್ಲಿದ್ದುಕೊಂಡು ತಾನೂ ಸಚ್ಛಿಷ್ಯರನ್ನು ಸಂಪಾದಿಸಿ, ಅವರಿಗೆ ಅದನ್ನು ಉಪದೇಶಿಸತಕ್ಕದ್ದೆಂದು ಹೇಳುತ್ತಾರೆ. ಆಚಾರ್ಯರಿಗೆ ಸಲ್ಲಿಸತಕ್ಕ ಒಂದು ಋಣವುಂಟು. ಅವರಿಂದ ಹೊಂದಿದ ಜ್ಞಾನವು ಒಂದು ಮಹತ್ತಾದ ಧನದ ಹಾಗೆ. ಅದನ್ನು ತಾನು ಸತ್ಪಾತ್ರನಲ್ಲಿ ದಾನ ಮಾಡಿಬಿಟ್ಟು ಪ್ರಾಣವನ್ನು ಬಿಡಬೇಕೇ ವಿನಾ ತನ್ನೊಂದಿಗೇ ಆ ಜ್ಞಾನವು ಲಯವನ್ನು ಹೊಂದುವ ಹಾಗೆ ಮಾಡಕೂಡದು.

---

(೩) ಗೀ. ೧೬, ೨೩. (೪) ಗೀ. ೧೬. ೨೪

**ಸಚ್ಛಿಷ್ಯನುಕ್ಕು ಪ್ರಾಪ್ತದಶೈಯಿಲ್ ಉಪದೇಶತ್ತೈ ತ್ತವಿರ್ಕ್ಕುಮಾಗಿಲ್ ಲುಬ್ಧನೆನ್ರು ಪೇರುಮಾಯ್, (೧) "ಪಾತ್ರಸ್ಥಮಾತ್ಮ ಜ್ಞಾನಂಚ ಕೃತ್ವಾಪಿಣ್ಡಂ ಸಮುತ್ಸೃಜೇತ್। ನಾಂತರ್ಧಾಯ ಸ್ವಯಮ್ಯಾತಿ ಜಗದ್ಬೀಜ ಮಬೀಜಕೃತ್" ಎಙ್ಗಿರ ಭಗವನ್ನಿಯೋಗತ್ತೈ ಯುಂಮ್**

---

ಈ ಬಂದ ಜ್ಞಾನವು ವೃದ್ಧಿಯಾಗತಕ್ಕದ್ದು ಆಚಾರ್ಯರ ಮತ್ತು ಭಗವಂತನ ಆಶಯವು. ಇದು ವೃಕ್ಷದ ಬೀಜವು. ಇದು ಸರಿಯಾಗಿ ಅಂಕುರಿಸಿ ವೃಕ್ಷವಾಗಿ ವೃದ್ಧಿ ಹೊಂದುವ ಹಾಗೆ ಸಚ್ಛಿಷ್ಯನೆಂಬ ಕ್ಷೇತ್ರದಲ್ಲಿ ಬೀಜವನ್ನು ಬಿತ್ತಿಯೇ ಪ್ರಾಣವನ್ನು ಬಿಡತಕ್ಕದ್ದು ಅವಶ್ಯಕರ್ತವ್ಯವೆಂದು ಸಪ್ರಮಾಣವಾಗಿ ಉಪದೇಶಿಸುತ್ತಾರೆ:- **ಸಚ್ಛಿಷ್ಯನುಕ್ಕು**-ಯೋಗ್ಯನಾದ ಶಿಷ್ಯನಿಗೆ, **ಪ್ರಾಪ್ತದಶೈಯಿಲ್**-ಉಪದೇಶಕ್ಕೆ ಸರಿಯಾದ ಅಧಿಕಾರಿಯೂ ಸಮಯವೂ ದೊರೆತ ಸಂದರ್ಭದಲ್ಲೀ, **ಉಪದೇಶತ್ತೈ**-ತಾನು ಹೊಂದಿದ ಜ್ಞಾನದ ಉಪದೇಶವನ್ನು, **ತವಿರ್ಕ್ಕುಮಾಗಿಲ್**-ಮಾಡದೆ ಬಿಟ್ಟರೆ, ಹಾಗೆ ಉಪದೇಶ ಮಾಡದೇ ಹೋದರೆ ಎಂಬರ್ಥವು, **ಲುಬ್ಧನೆನ್ರು**-ಹಣವನ್ನು ಸಂಪಾದಿಸಿ ದವನು ಸತ್ಪಾತ್ರದಲ್ಲಿ ವಿನಿಯೋಗಿಸದೆ ಧನವನ್ನು ಹೂಳಿಟ್ಟವನ ಹಾಗೆ ಲುಬ್ಧನೆಂದು, **ಪೇರುಮಾಯ್**-ಹೆಸರನ್ನು ಹೊಂದಿ, **ಜಗದ್ಬೀಜಂ**-ಜಗತ್ತಿಗೆ ಬೀಜರೂಪವಾದ ಶಾಸ್ತ್ರದ ಜ್ಞಾನವು, ಅಥವಾ ವೇದಶಾಸ್ತ್ರಜ್ಞಾನವು, **"ವೇದೇನ ನಾಮರೂಪೇ ವ್ಯಾಕರೋತ್"** ಅನುಸಂಧೇಯವು, **ಸ್ವಯಂ**-ತಾನೇ, **ಅಬೀಜಕೃತ್**-ವೃಕ್ಷವಾಗಿ ಬೆಳೆದುತನ್ಮೂಲಕ ಬೀಜಗಳನ್ನು ಉಂಟು ಮಾಡದೆ, **ಅಂತರ್ಧಾಯ**-ಲಯವನ್ನು ಹೊಂದಲು, **ನಯಾತಿ**-ಹೋಗಬಾರದು; ಆದುದರಿಂದ, **ಆತ್ಮಜ್ಞಾನಂಚ**-ತನ್ನ ಆಚಾರ್ಯರಿಂದ ಹೊಂದಿದ ತನ್ನ ಆತ್ಮಾವನ್ನು ಹೊಂದಿದ ಜ್ಞಾನವನ್ನಾದರೋ, ಇದು ಅರ್ಥಪಂಚಕಾದಿ ಜ್ಞಾನವಾಗಬಹುದು **ಪಾತ್ರಸ್ಥಕೃತ್ವಾ**-ಸಚ್ಛಿಷ್ಯನಲ್ಲಿ ಸ್ಥಾಪಿಸಿದವ ನಾಗಿ, ಅದು ಅವನ ಮೂಲಕ ಅಭಿವೃದ್ಧಿಯನ್ನು ಹೊಂದುತ್ತದೆಂದು ತಿಳಿದವನಾಗಿ, ಹೀಗೆ ಆಚಾರ್ಯಾಭಿಮತವನ್ನು ನಡೆಸಿ, **ಪಿಣ್ಡಂ ಸಮುತ್ಸೃಜೇತ್**-ದೇಹವನ್ನು ಬಿಡತಕ್ಕದ್ದು. **"ಸಂ"** ಎಂಬ ಉಪಸರ್ಗವು ಹೀಗೆ ಮಾಡಿದರೇನೇ ದೇಹ ಬಿಟ್ಟು ದುದು ಸರಿಯು. ಇಲ್ಲವಾದರೆ ಸರಿಯಲ್ಲವು ಎಂದು ತಿಳಿಸುತ್ತದೆ. ಆಚಾರ್ಯರ ಮತ್ತು ಭಗವಂತನ ಅನುಗ್ರಹವು ದೊರೆಯುವುದು ದುರ್ಲಭವೆಂಬ ಭಾವವು ತೋರಿ ಬರುತ್ತದೆ." **ಎಙ್ಗಿರ**-ಎಂಬ, **ಭಗವನ್ನಿಯೋಗತ್ತೈಯುಮ್**-ಭಗವದಾಜ್ಞೆ ಯನ್ನು, **ಕಡನ್ತಾನಾಮ್**-ಉಲ್ಲಂಘಿಸಿದ ಹಾಗಾಗುತ್ತದೆ. ಭಗವಚ್ಛಾಸ್ತ್ರವಾದ ಸಂಹಿತಾವಾಕ್ಯದಲ್ಲಿ ಹೇಳಿರುವುದರಿಂದ **ಭಗವನ್ನಿಯೋಗ**ವೆಂದರೆ ಭಗವದಾಜ್ಞೆ ಎಂದು ಹೇಳಲ್ಪಟ್ಟಿರುತ್ತದೆ. ನಾರದೀಪಿಕೆ ನಾರಾಸ್ವಾದಿಸಿಯುವರು **ಜಗದ್ಬೀಜಂ** ಎಂಬುದಕ್ಕೆ **"ಜಗತಃ ಜ್ಞಾನಬೀಜಂ ಶಾಸ್ತ್ರಂ"** ಎಂದು ವ್ಯಾಖ್ಯಾನ ಮಾಡು

**ಕೆಡನ್ದಾನಾವ್. ಅಗ್ನ್ಯೈಯಾಲ್ ವಿಳಕ್ಕುಪ್ಪಿಡಿಕ್ಕುಮವನ್, ತನ್ನೈ ರಾಜಾ ಒರು ಕಾರ್ಯತ್ತುಕ್ಕು ಪ್ಪೋಗಚ್ಚೊನ್ನಾಲ್, ತನ್ ಕ್ಕೈಯಿಲ್ ವಿಳಕ್ಕೈ ಯುತುಕ್ಕುಪ್ಪ್ರಾಪ್ತರಾನಾರ್ ಕ್ಕೈಯಿಲೇ ಕೊಡುತ್ತು ಪ್ಪೋವಾಪ್ಪೋಲೆ, ಸತ್ಪಾತ್ರವಾನಾರ್ಕ್ಕು ತ್ತಾನ್ ಶೊಲ್ಲುಮ್ಪೋದು, ತನಕ್ಕು ಉಪದೇಶಿತ್ತ ಆಚಾರ್ಯನ್ನೈಯುಮ್ರ್ಪಡವೆಳಿಯಿಟ್ಟು, ಪಿನ್ಬು ತನಕ್ಕು ಉಪದಿಷ್ಟಮಾನ ಅರ್ಥಙ್ಗಳೈಯುಂ ಶೊಲ್ಲುವುವುರ್.**

---

ತ್ತಾರೆ, ಸಾರಪ್ರಕಾಶಿಕೆಯವರು **ಜಗದಿಭೀಜ್** ಎಂದರೆ ಪರಮಾತ್ಮಾವೆಂಬ ಸ್ಮೃತಿ ಇತಿಹಾಸ ಪುರಾಣಗಳಲ್ಲಿ ಉಪಪಾದಿತವಾದುದನ್ನು ತಿಳಿಸಿರುತ್ತಾರೆ. ವೇದಗಳೂ ಜಗತ್ಕಾರಣನಾದ ಶ್ರೀಮನ್ನಾರಾಯಣನೆಂದು ಹೇಳುವುದರಿಂದ ವೇದಶಾಸ್ತ್ರವೆಂದೂ ಅರ್ಥವಾಗುವುದು. ಬೀಜವು ವೃಕ್ಷವಾಗಿ ತನ್ಮೂಲಕ ಪುನಃ ಬೀಜ ದೊರೆತರೆ, ಫಲಕಾರಿಯಾಗಿ ಸಾರ್ಥಕವಾಯಿತು. ಇಲ್ಲದಿದ್ದರೆ ನಿರರ್ಥಕವು. ಹಾಗೆಯೇ ಆಚಾರ್ಯರಿಂದ ಸಂಪಾದಿಸಿದ ಆತ್ಮವಿದ್ಯೆಯು ಸಚ್ಛಿಷ್ಯರಿಗೆ ಉಪದೇಶಿಸಲ್ಪಟ್ಟರೇನೇ ಸಾರ್ಥಕ್ಯವನ್ನು ಹೊಂದಿತು. ಇಲ್ಲವಾದರೆ ನಿರರ್ಥಕವಾಗಿ ಆಚಾರ್ಯರ ಮತ್ತು ಸರ್ವೇಶರನ ಅನುಗ್ರಹ ಸಂಪಾದಕವಾಗುವುದಿಲ್ಲವೆಂಬ ತಾತ್ಪರ್ಯವು.

ಮುಂದೆ ಮೇಲೆ ಹೇಳಿದ ಉಪದೇಶವನ್ನು ಒಂದು ದೃಷ್ಟಾಂತ ಮೂಲಕ ತಿಳಿಯಪಡಿಸಿ, ಉಪಸಂಹಾರ ಮಾಡಿ, "**ಅಗ್ನ್ಯೈಯಾಲ್**"ಎಂದು ಆರಂಭಿಸಿದ ವಾಕ್ಯದ ಮೂಲಕ ಹೇಳುತ್ತಾರೆ-**ಅಗ್ನ್ಯೈಯಾಲ್**–ಅದುದರಿಂದ, **ವಿಳಕ್ಕುಪ್ಪಿಡಿಕ್ಕುಮವನ್**-ದೀವಿಟಿಗೆಯನ್ನು ಹಿಡಿದಿರುವವನು, **ತನ್ನೈರಾಜಾ ಒರು ಕಾರ್ಯತ್ತುಕು ಪ್ಪೋಗಚ್ಚೊನ್ನಾಲ್**-ತನಗೆ ಸ್ವಾಮಿಯಾಗಿ ನಿಯಾಮಕನಾಗಿರುವ ಒಬ್ಬ ರಾಜನು ಬೇರೇ ಒಂದು ಕಾರ್ಯಕ್ಕಾಗಿ ಹೋಗು ಎಂದು ಹೇಳಿದುದಾದರೆ, **ತನ್ನ ಕ್ಕೈಯಿಲ್ ವಳಕ್ಕೈ**-ತನ್ನ ಕೈಯಲ್ಲಿ ಬೆಳಕನ್ನು, **ಅದಕ್ಕು ಪ್ರಾಪ್ತವಾನಾರ್ಕ್ಕೈಯಿಲೇ**-ಆ ಬೆಳಕನ್ನು ಹಿಡಿಯಲು ಯೋಗ್ಯರಾದ ಅಧಿಕಾರಿಗಳ ಕೈಯಲ್ಲಿ, **ಕೊಡುತ್ತು ಪ್ಪೋವಾಪ್ಪೋಲೆ**-ಕೊಟ್ಟು ಹೋಗುವ ಹಾಗೆ, **ತಾನ್**-ಶಿಷ್ಯನಾಗಿದ್ದ ತಾನೂ ಸಹ, **ಸತ್ಪಾತ್ರವಾನಾರ್ಕ್ಕು ತಾನ್ ಶೊಲ್ಲುಂಪೋದು**-ಸತ್ಪಾತ್ರರಾದ ಶಿಷ್ಯರಿಗೆ ಉಪದೇಶಿಸಿ, ಮತ್ತು ಹಾಗೆ ಉಪದೇಶಿಸುವಾಗ, **ತನಕ್ಕು ಉಪದೇಶಿಸಿದ, ಆಚಾರ್ಯನ್ನೈಯುಮ್ರ್ಪಡವೆಳಿಯಿಟ್ಟು**-ಆಚಾರ್ಯರನ್ನು ಮೊದಲು ಶ್ಲಾಘಿಸಿ, ಎಂದರೆ ಎದ್ದು ನಿಂತು ಅವರ ತನಿಯನ್ನು ತಾನೂ ತನ್ನ ಶಿಷ್ಯರೂ ಹೇಳಿ ನಮಸ್ಕರಿಸಿ ಮಧ್ಯೆ ಮಧ್ಯೆ ಆ ಆಚಾರ್ಯರು ತಮಗೆ ಉಪದೇಶಿಸಿದ ಸ್ವಾರಸ್ಯಾರ್ಥಗಳು ಇವು ಎಂದು ಹೇಳಿ ಎಂಬ ಭಾವವು, **ಪಿನ್ಬು**-ಅನಂತರ. **ತನಕ್ಕು ಉಪದಿಷ್ಟಮಾನ** ತನಗೆ ಉಪದೇಶಿಸಲ್ಪಟ್ಟ, **ಅರ್ಥಙ್ಗಳೈ ಶೊಲ್ಲುವುವುರ್**-ಅಭಿಪ್ರಾಯಗಳನ್ನು ಉಪದೇಶಿಸತಕ್ಕದ್ದು.

**ಶಿಲಕಾರಣಙ್ಗಳಾಲೇ ದಿವ್ಯ ಚಕ್ಷುಶ್ಶ್ರೋತ್ರಙ್ಗಳ್‌ಪೆತ್ತು ತಾನಿವತ್ತಾಲೇ ಅರಿನ್ದು ಶೊಲ್ಲುಮವತ್ತೈಯುಮ್ (೧) " ವ್ಯಾಸಪ್ರಸಾದಾಚ್ಛ್ರುತವಾನೇ**

---

"**ತನಕ್ಕು ಉಪದಿಷ್ಟಮಾನ ಅರ್ಥಙ್ಗಳೈ ಶೊಲ್ಲುವುದು**" ಎಂದು ಹೇಳಿದ ಒಳಿಕ, ಉಪದಿಷ್ಟವಲ್ಲದ ಅರ್ಥಗಳನ್ನು ಹೇಳಲೇ ಕೂಡದೇ ಎಂಬ ಪೂರ್ವ ಪಕ್ಷವು ಉದಿಸುತ್ತದೆ. ಅದಕ್ಕೆ ಮುಂದೆ ಸಮಾಧಾನವನ್ನು ಹೇಳುತ್ತಾರೆ. ತನ್ನ ಆಚಾರ್ಯರು ತಮಗೆ ಉಪದೇಶಿಸದೇ ಇರುವ, ಮತ್ತು ಸರ್ವೇಶ್ವರನ ಸುಕೃತ ಪ್ರಾಪ್ತವಾದ ಕೃಪೆಯಿಂದಲೂ, ಮತ್ತು ಆಚಾರ್ಯರವರ ಕೃಪೆಯಿಂದಲೂ, ಹೊಸದಾಗಿ ತನಗೆ ತೋರಿಬಂದ ಅರ್ಥಗಳನ್ನು ತನ್ನ ಶಿಷ್ಯರಿಗೆ ಹೇಳಬಹುದೇ? ಅಥವಾ ತನ್ನ ಆಚಾರ್ಯರು ಎಷ್ಟುಮಟ್ಟಿಗೆ ಉಪದೇಶಿಸಿದರೋ ಅಷ್ಟು ಮಾತ್ರವೇ ಉಪದೇಶಿಸ ತಕ್ಕದ್ದೇ? ಎಂಬ ಚರ್ಚೆಯಲ್ಲಿ ಯಾವ ಭಾವನೆಯಿಂದ ಅವುಗಳನ್ನು ಉಪದೇಶಿಸು ವುದರಲ್ಲಿ ಪ್ರತ್ಯವಾಯವಿಲ್ಲವೆಂಬುವನ್ನು ಉಪದೇಶಿಸುತ್ತಾರೆ. ಕೆಲವರ ಅಭಿಪ್ರಾಯವು ಆಚಾರ್ಯೋಪದಿಷ್ಟವಲ್ಲದುದನ್ನು ಉಪದೇಶಿಸುವದು ಆಚಾರ್ಯರವರ ಗೌರವಕ್ಕೆ ಕುಂದುಕವೆಂದು ಭಾವಿಸುವರು. ಇದು ಸರ್ವಥಾ ಸರಿಯಲ್ಲವು. ಯಾಕೆಂದರೆ ಗುರುವು ಎಷ್ಟು ಉಪದೇಶಿಸಿದರೋ ಅಷ್ಟೇ ತಿಳಿಯತಕ್ಕದ್ದು. ಹೊಸದಾಗಿ ತಾನು ಯಾವ ಶಾಸ್ತ್ರಗ್ರಂಥಗಳನ್ನೂ ಅವಲೋಕಿಸಕೂಡದೆಂದು ಹೇಳಿದಂತಾಗುತ್ತದೆ. ಗುರು ವಿನೊಂದಿಗೇ ಸೇರಿ ಎಲ್ಲಾ ಶಾಸ್ತ್ರಗಳನ್ನೂ ಅಧಿಕರಿಸಲು ಸಾಧ್ಯವೂ ಅಲ್ಲ. ತಾನು ಶಾಸ್ತ್ರಮೂಲಕವಾಗಿಯೇ ವಿವೇಕಿಸಿ ತಿಳಿದುದನ್ನು ಆಚಾರ್ಯರಲ್ಲಿ ಕಾಲಕ್ಷೇಪಮಾಡಿ ತಿಳಿ ಯಲಿಲ್ಲವಾದುದರಿಂದ ಶಿಷ್ಯರಿಗೆ ಉಪದೇಶಿಸತಕ್ಕದ್ದಲ್ಲವೆಂಬ ನಿರ್ಬಂಧವು ಸರಿಯಲ್ಲ ವಾದುದರಿಂದ ಶ್ರೀ ನಿಗಮಾಂತ ಗುರುಗಳು ಅಂತಹ ಉಪದೇಶಕ್ಕೂ ಅನುಮತಿ ಕೊಟ್ಟಿದ್ದಾರೆ. ಆದರೆ ಆ ಸಂದರ್ಭದಲ್ಲಿ ಈತನು ಅಹಂಕಾರ ಮಮಕಾರದ ಮೂಲಕ ಅವು ತನ್ನ ಅಭಿಪ್ರಾಯಗಳೆಂಬ ಆತ್ಮಪ್ರಶಂಸೆಯು ಕೂಡದು ತನ್ನ ಶ್ರೀಮದಾ ಚಾರ್ಯರ ಕಟಾಕ್ಷದಿಂದಲೂ, ಸ್ವಾಮಿ ಹಯಗ್ರೀವರ ಕಟಾಕ್ಷಮೂಲಕವಾಗಿಯೂ ಪ್ರಾಪ್ತವಾದ ಅಭಿಪ್ರಾಯಗಳು ಎಂಬ ಅಭಿಸಂಧಿಯಿರತಕ್ಕದ್ದೆಂದು ಹೇಳುತ್ತಾರೆ. **ಶಿಲಕಾರಣಙ್ಗಳಾಲೇ**-ಪೂರ್ವಜನ್ಮಸುಕೃತ, ಆಚಾರ್ಯಾನುಗ್ರಹ, ಭಗವತ್ಕಟಾಕ್ಷ ಮೊದಲಾದ ಕೆಲವು ಕಾರಣಗಳಿಂದ, **ದಿವ್ಯಚಕ್ಷುಶ್ಶ್ರೋತ್ರಙ್ಗಳ್‌ಪೆತ್ತು**-ಸಾಧಾ ರಣ ಜನರಿಗಿರುವ ಹಾಗೆ ಕಣ್ಣು ಕಿವಿಗಳಲ್ಲದೆ ಸ್ವಾಮಿಯು ಅನುಗ್ರಹಿಸಿದ ಮಹ ತ್ತಾದ ಕಣ್ಣು ಕಿವಿಗಳನ್ನು ಹೊಂದಿ, **ತಾನಿವತ್ತಾಲೇ ಅರಿನ್ದು ಶೊಲ್ಲುಮವ ತ್ತೈಯುಮ್**-ಅವುಗಳ ಮಾಹಾತ್ಮ್ಯೆಯಿಂದ ತಾನು ವಿವೇಕಿಸಿ ತಿಳಿದು ಶಿಷ್ಯರಿಗೆ

---

(೧) ೧೮.೭೫.

**ತದ್ಗುಹ್ಯಮಹಂ ಪರಮ್ | ಯೋಗಂ ಯೋಗೇಶ್ವರಾತ್ಕೃಷ್ಣಾತ್ಸಾಕ್ಷಾತ್ಕಥಯತಸ್ಸ್ವಯಮ್" ಎಙ್ಗರಪಡಿಯೇ ಸದಾಚಾರ್ಯ ಪ್ರಸಾದಮಡಿಯಾಗ ಇವ್ವರ್ಥಮರಿನ್ದೇನ್, ಎನ್ಕೈ ಮಿಡುಕ್ಕಾಲೇ ಅರಿನ್ದು ಶೊಲ್ಲುಗಿರೇನಲ್ಲೇ, ಎನ್ರಿವ್ವಣ್ಣೈಯೈ ವೆಳಿಯಿಟ್ಟುಕೊಂಡು ಶೊಲ್ಲುವುಮ್ ಪೆರಿಲ್,**

---

ಹೇಳುವ ಅಭಿಪ್ರಾಯಗಳನ್ನೂ, ಇವು ಅಂತಹ ಅನುಗ್ರಹದಿಂದುಂಟಾದ ಅರ್ಥಗಳಾದುದರಿಂದ, ಶಾಸ್ತ್ರಾನುಗುಣವಾಗಿಯೂ ಸ್ವಾರಸ್ಯವಾಗಿಯೂ ಇರುವ ಅರ್ಥಗಳೆಂಬುದು ತೋರಿಬರುತ್ತದೆ. (೧) ಇದು ಗೀತೋಪದೇಶವನ್ನೆಲ್ಲಾ ಸಾಂಗವಾಗಿ ಶ್ರೀಕೃಷ್ಣನು ತನ್ನ ಪ್ರಿಯಶಿಷ್ಯನಿಗೆ ಹೇಳಿದ ನಂತರ ಧೃತರಾಷ್ಟ್ರನಿಗೆ ಹೇಳುವ ಸಂಜಯನ ವಾಕ್ಯವು. **ಅಹಂ**-ಶ್ರೀಕೃಷ್ಣನ ಅನುಗ್ರಹಕ್ಕೂ ಮತ್ತು ಸರ್ವಜ್ಞರಾದ ಆಚಾರ್ಯರ ದಿವ್ಯಕಟಾಕ್ಷಕ್ಕೂ ಪಾತ್ರನಾದ ಆ ಕಾರಣದಿಂದ ಪರಮಸುಕೃತಶಾಲಿಯಾದ ನಾನು, **ವ್ಯಾಸಪ್ರಸಾದಾತ್**-ವಿಷ್ಣ್ವಂಶಸಂಭೂತರಾಗಿ ಸರ್ವಜ್ಞರಾಗಿ ಜನಿಸಿದ, ನನಗೆ ಆಚಾರ್ಯರಾದ ಶ್ರೀ ವ್ಯಾಸಮಹರ್ಷಿಗಳ ಅನುಗ್ರಹದಿಂದ, ಅನುಗ್ರಹವು ಯಾವುದೆಂದರೆ ದಿವ್ಯ ಚಕ್ಷುಸ್ಸು, ಶ್ರೋತ್ರಗಳನ್ನು ದಯಪಾಲಿಸಿ, ಈ ಅವತಾರಪುರುಷರಾದ ನರನಾರಾಯಣರ ಅದ್ಭುತವಾಗಿ ರೋಮಹರ್ಷಣವಾದ ಸಂವಾದ, ಪ್ರತ್ಯಕ್ಷವಾಗಿ ಅವರನ್ನು ದರ್ಶನಮಾಡಿ, ಅವರ ಸಂವಾದವನ್ನು ಕೇಳುವ ಅನುಗ್ರಹವು, **ಏತತ್**-ಈ, **ಪರಂ**-ಸರ್ವೋತ್ಕೃಷ್ಟವಾದ, **ಗುಹ್ಯತಮಂ**-ಅತ್ಯಂತರಹಸ್ಯಾರ್ಥವುಳ್ಳ **ಯೋಗಂ**-ಬ್ರಹ್ಮವಿದ್ಯೆಯಾದ ಭಕ್ತಿಯೋಗವನ್ನು **ಸ್ವಯಮೇವ ಕಥಯತಃ ಯೋಗೇಶ್ವರಾತ್**-ಸಮಸ್ತ ಕಲ್ಯಾಣಗುಣಗಳೇನು, ಸರ್ವ ವಿಭೂತಿಮತ್ವವೇನು, ಸರ್ವೈಶ್ವರ್ಯವೇನು ಇವುಗಳ ಯೋಗಕ್ಕೆಲ್ಲಾ ಸ್ವಾಮಿಯಾದ ಶ್ರೀಕೃಷ್ಣ ಪ್ರಭುವಿನಿಂದ, ತಾನೇ ಸಾಕ್ಷಾತ್ತಾಗಿ ನಿಂತು ಉಪದೇಶಿಸುತ್ತಿರುವವನಾಗಿ, **ಶ್ರುತವಾನ್**-ಕೇಳಿ ತಿಳಿದೆನು. ಕೇಳಿ ತಿಳಿಯುವುದಕ್ಕೇನೋ ಸಾಧಾರಣ ಶ್ರೋತ್ರವು ಉಪಯೋಗವಿಲ್ಲದುದರಿಂದ ಶ್ರೀ ವ್ಯಾಸಾನುಗ್ರಹದಿಂದ ಲಭಿಸಿದ ದಿವ್ಯ ಶ್ರೋತ್ರವು ಆವಶ್ಯಕವು. ದಿವ್ಯ ಚಕ್ಷುಸ್ಸು ಏಕೆ? ಎಂದರೆ ವಕ್ತೃವಿನ ದಿವ್ಯ ಮಂಗಳ ವಿಗ್ರಹದ ದರ್ಶನವಿಲ್ಲದಿದ್ದರೆ, ಮತ್ತು ಆತನು ತಾಳಿದ ವಿಶ್ವರೂಪದ ದರ್ಶನಗಳಿಲ್ಲದಿದ್ದರೆ, ಸಾಕ್ಷಾದುಪದೇಶವಾದರೂ **ಅದ್ಭುತ**ವಾಗಿಯೂ **ರೋಮಹರ್ಷಣ**ವಾದುದಾಗಿಯೂ ಆಗಲಾರದು. ಆದುದರಿಂದ ದಿವ್ಯಚಕ್ಷುಸ್ಸೂ ಆವಶ್ಯಕವಾಗಿ ಆಚಾರ್ಯಾನುಗೃಹೀತವೆಂದು ಭಾವಿಸತಕ್ಕದ್ದು" **ಎಙ್ಗರಪಡಿಯೇ** ಎಂಬಲ್ಲಿ ಹೇಳಿರುವ ಹಾಗೆ **ಸದಾಚಾರ್ಯಪ್ರಸಾದಮಡಿಯಾಗ**-ಸದಾಚಾರ್ಯರ ಅನುಗ್ರಹ ಮೂಲಕವಾಗಿ, **ಇವ್ವರ್ಥಂ**-ಈಗ ನನಗೆ ತೋರಿಬಂದಿರುವ ಅಭಿಪ್ರಾಯವನ್ನು, **ಅರಿನ್ದೇನ್**-ತಿಳಿದೆನು. **ಎನ್ಕೈಮಿಡುಕ್ಕಾಲೇ**-

---

(೧) ಗೀ. ೭೫.

**ಇವನ್ ಶೊಲ್ಲುಮ್ ಅರ್ಥಙ್ಗಳೆಲ್ಲಾ ಸರ್ವರ್ಕ್ಕು ಮಾದರಣೀಯಙ್ಗಳುಮಾಯ್, ಇವನ್ ಕೃತಜ್ಞನಾಯಿರುನ್ದಾನೆನ್ರು ಸಾತ್ವಿಕರುಂ ಪ್ರಶಂಸಿತ್ತು ಪ್ರಸಾದಿಕ್ಕುಮ್ಪಡಿಯಾಯ್, ಸತ್ಯವಾದಿಯಾಯಿರುನ್ದಾನೆನ್ರು ಉಪನಿಷತ್ತುಕ್ಕಳುಮ್, ಔಪನಿಷದಪರಮಪುರುಷನುಮ್, ತಙ್ಗಳೋಡೊಕ್ಕ ಇವನೈ ಪ್ರಮಾಣಭೂತನೆನ್ರು ಆದರಿಕ್ಕುಮ್ಪಡಿಯುಮಾಮ್.**

---

ತನಗೆ ಸೇರಿದ ಸಾಮರ್ಥ್ಯದಿಂದ, **ಅರಿನ್ದು ಶೊಲ್ಲಗಿರನಲ್ಲೇಱ**-ಸ್ವತಂತ್ರವಾಗಿ ತಿಳಿದು ಹೇಳುವದಲ್ಲವು. **ಎನ್ರು**-ಎಂಬುದಾಗಿ, **ಇವು ಉಣ್ಮೈಯೈ ವೆಳಿಯಿಟ್ಟುಕೊಂಡು**-ಈ ಒಳ್ಳೇ ಭಾವವನ್ನು ಪ್ರಕಾಶಪಡಿಸಿಕೊಂಡು, ಈ ಒಳ್ಳೇ ಭಾವವು ಯಾವುದೆಂದರೆ ಇಂತಹ ಹೊಸ ಅಭಿಪ್ರಾಯಗಳನ್ನು ಹೇಳುವುದು ಪರಮಾಚಾರ್ಯರುಗಳ ದಿವ್ಯಕಟಾಕ್ಷದಿಂದ ಉಂಟಾದ ಮಹಿಮೆಯಿಂದಲೇ ಎಂದು ಭಾವಿಸುವುದರಿಂದ, ಭಗವಂತನು ಆ ಭಾವನೆಗೆ ಕಟ್ಟು ಬಿದ್ದು, ಆಚಾರ್ಯರುಗಳು ತನಗೆ ಸ್ವತಃ ಉಪದೇಶಿಸದಿದ್ದರೂ, ಭಗವಂತನ ಕೃಪೆಯಿಂದ ಉಂಟಾದುದರಿಂದ ಯಥಾರ್ಥವಾದುದೇ ಎಂಬ ಒಳ್ಳೆಯ ಭಾವವು, **ಶೊಲ್ಲುವುಮ್ ಪೆರಿಲ್**-ಉಪದೇಶವನ್ನು ಕೈಕೊಂಡರೆ, **ಇವನ್ ಶೊಲ್ಲುಮ್ ಅರ್ಥಙ್ಗಳೆಲ್ಲಾ**-ಈತನು ಉಪದೇಶಿಸುವ ಎಲ್ಲಾ ಅಭಿಪ್ರಾಯಗಳೂ, **ಸರ್ವರ್ಕ್ಕುಂ ಆದರಣೀಯಙ್ಗಳುಮಾಯ್**-ಕೇಳಿದ ಸಮಸ್ತರಿಗೂ ತುಂಬಾ ಉಪಾದೇಯವಾಗಿ, ಬಹುಮಾನಿಸಲು ಯೋಗ್ಯವಾಗಿ, **ಇವನ್ ಕೃತಜ್ಞನಾಯಿರುನ್ದಾನೆನ್ರು**-ಈತನು ತಮ್ಮ ಆಚಾರ್ಯರ ವಿಷಯದಲ್ಲಿ ತುಂಬಾ ಕೃತಜ್ಞತೆಯುಳ್ಳವನಾಗಿದ್ದಾನೆಂಬುದಾಗಿ, **ಸಾತ್ವಿಕರುಂ**-ಸತ್ವಗುಣಾಭಿವೃದ್ಧಿ ಹೊಂದಿದ ಪ್ರಪನ್ನರಾದ ಮಹಾ ಭಾಗವತರೂ, **ಪ್ರಶಂಸಿತ್ತು**-ಅಂತವನನ್ನು ಶ್ಲಾಘಿಸಿ, **ಏತ**ಕ್ಕಾಗಿ ಶ್ಲಾಘಿಸಿ, ಆಚಾರ್ಯರ ದಿವ್ಯಕಟಾಕ್ಷಕ್ಕೆ ಪಾತ್ರನಾಗಿರುವವನೆಂದು ಶ್ಲಾಘಿಸಿ, **ಪ್ರಸಾದಿಕ್ಕುಮ್ಪಡಿಯಾಯ್**-ಉಪಾದೇಯನೆಂದು ಭಾವಿಸಿ, ಅನುಗ್ರಹಿಸುವ ಹಾಗೆ ಆಗಿ, **ಸತ್ಯವಾದಿಯಾಯಿರುನ್ದಾನೆನ್ರು**-ಭ್ರಮವಿಪ್ರಲಂಭಾದಿಗಳಿಲ್ಲದೆ, ಯಥಾರ್ಥವಾದ ಜ್ಞಾನವನ್ನು ಪ್ರಚುರಪಡಿಸುವವನಾಗಿದ್ದಾನೆಂದು **ಉಪನಿಷತ್ತುಗಳೂ ಮತ್ತು ಔಪನಿಷದ ಪರಮಪುರುಷನುಮ್**-ಉಪನಿಷತ್ತುಗಳಲ್ಲಿ ಪ್ರತಿಪಾದ್ಯವಾದ ಪರಮಪುರುಷನೂ ಸಹ, **ತಙ್ಗಳೋಡೊಕ್ಕ**-ತಾವುಗಳು ಹೇಗೋ ಹಾಗೆ, ಎಂದರೆ ಉಪನಿಷತ್ತೂ ಉಪನಿಷತ್ತುಗಳಲ್ಲಿ ಪ್ರತಿಪಾದ್ಯನಾದ ಶ್ರೀಮನ್ನಾರಾಯಣನೂ ಸಹ ಹೇಗೆ ಯಥಾರ್ಥವಾದುದನ್ನೇ ಹೇಗೆ ಉಪದೇಶಿಸುತ್ತಾರೆಯೋ ವಂಚಿಸಿ ಉಪದೇಶಿಸುವುದಿಲ್ಲವೋ, ಹಾಗೆಯೇ ಆಚಾರ್ಯಾನುಗ್ರಹದಿಂದಲೇ ಇದನ್ನು ಗ್ರಂಥ ಮೂಲಕವಾಗಿಯಾಗಲಿ, ಕಾಲಕ್ಷೇಪದ ಮೂಲಕವಾಗಲಿ, ಉಪದೇಶಿಸುವದೂ ಸಹ, ಎಂದು ಭಾವಿಸಿ, **ಇವನೈ**-ಅಂಥಹ ಶಿಷ್ಯನನ್ನು, **ಪ್ರಮಾಣಭೂತನೆನ್ರು ಆದರಿಕ್ಕುಮ್ಪಡಿಯುಮಾಮ್**-ಆದರ ಮಾಡುವ ಹಾಗೆ ಆಗುತ್ತದೆ; ಎಂದರೆ

ಭಾಗವತೋತ್ತಮರೂ ಸಹ ಇವನು ಹೇಳುವುದನ್ನು ಉಪಾದೇಯವೆಂದು ಭಾವಿಸುವರು ಎಂಬರ್ಥವು. ಆಚಾರ್ಯಕೃಪೆಯ ಮೂಲಕ ನಾನು ಈ ಅಭಿಪ್ರಾಯಗಳನ್ನು ಹೇಳುತ್ತೇನೆಯೇ ವಿನಾ ಸ್ವತಂತ್ರಿಸಿ ನಾನು ಹೇಳುವನಲ್ಲವೆಂಬ ಭಾವನೆಯಿದ್ದರೆ ಪರಮ ಭಾಗವತರುಗಳ ಸಮ್ಮತಿಯು ದೊರೆಯುತ್ತದೆ ಎಂಬ ಭಾವವು.

ಈ ಸಂದರ್ಭವಲ್ಲಿ ಆಚಾರ್ಯಸ್ಥಾನದಲ್ಲಿರುವವರೇ ಆಗಲಿ, ಶಿಷ್ಯಸ್ಥಾನದಲ್ಲಿರುವವರೇ ಆಗಲಿ ಹೇಳುವ ಅಭಿಪ್ರಾಯಗಳಿಗೆ ಪೂರ್ಣಶಾಸ್ತ್ರ ಸಮ್ಮತಿ ಇರಬೇಕು. ಹಾಗೆ ಇಲ್ಲದಿದ್ದರೆ ತಾನು, ಆಚಾರ್ಯಾನುಗ್ರಹದಿಂದಲೇ ಹೇಳುತ್ತೇನೆಂದು ತಿಳಿಸಿ ಶಾಸ್ತ್ರಾನುಮತಿಯಿಲ್ಲದ, ಉಪನಿಷತ್ತುಗಳೂ ಔಪನಿಷದಾಚಾರ್ಯನೂ ಸಮ್ಮತಿಸದ ಅಭಿಪ್ರಾಯಗಳನ್ನು ಹೇಳಿದರೆ ಮಹಾಭಾಗವತರುಗಳು ಆದರಿಸುವುದಿಲ್ಲವು. ಅಂತವರು ತಮಗೆ ಆಚಾರ್ಯದಿವ್ಯ ಕಟಾಕ್ಷಉಂಟೆಂದು ಬಾಯಿಯಲ್ಲಿ ಹೇಳಿಕೊಂಡರೂ ಉಪದೇಯವೆಂದು ಭಾವಿಸಲಾಗುವುದಿಲ್ಲವು. ಅಂತವರಿಗೆ ಆಚಾರ್ಯಕಟಾಕ್ಷವೂ ದೈವಕಟಾಕ್ಷವೂ ಎರಡೂ ಇಲ್ಲನೆಂದೇ ಭಾವಿಸತಕ್ಕದ್ದಾಗಿರುತ್ತದೆ. ಆದುದರಿಂದ ಈ ಮೇಲಿನ ವಾಕ್ಯಗಳಲ್ಲಿ ಸ್ವಾಮಿನಿಗಮಾಂತರು ಉದ್ದೇಶಿಸಿ ಹೇಳಿದ ಪ್ರಕರಣವು ಯಾವುದು ? ಎಂದರೆ ತಿಳಿಸುವೆವು. ಶಾಸ್ತ್ರಸಮ್ಮತವಾಗಿರುವ ಅಭಿಪ್ರಾಯಗಳೆಲ್ಲವನ್ನೂ ತಮ್ಮ ಸ್ವಂತಆಚಾರ್ಯರಿಗೆ ತಿಳಿಸಲು ಅವಕಾಶವಿಲ್ಲದೇ ಇರಬಹುದು. ಅಂತಹ ಶಾಸ್ತ್ರಸಮ್ಮತವಾದ ಅಭಿಪ್ರಾಯಗಳನ್ನೇ, ತಾನು ಆ ಗುರುಕಟಾಕ್ಷದಿಂದಲೇ, ಇತರ ಪ್ರಾಜ್ಞರ ಮೂಲಕವಾಗಲಿ, ಗ್ರಂಥಗಳಮೂಲಕವಾಗಲಿ, ದೈವಾನುಗ್ರಹದಿಂದ ಹೊಂದಿದ ಅಥವಾ ವಿವೇಕೋತ್ಥಜ್ಞಾನದಿಂದಲಾಗಲಿ ಸಂಗ್ರಹಿಸಿದ, ಅಭಿಪ್ರಾಯಗಳನ್ನು ಅಹಂಕಾರ ಮಮಕಾರಗಳನ್ನು ತೊರೆದು ಗ್ರಂಥಮೂಲಕವಾಗಲಿ, ಉಪದೇಶಮೂಲಕವಾಗಲಿ ಪ್ರಚುರಪಡಿಸಿದರೆ ಆಚಾರ್ಯಾನುಗ್ರಹದಿಂದಲೂ ದೈವಕೃಪೆಯಿಂದಲೂ ಶಿಷ್ಟಪರಿಗ್ರಹವಾಗುತ್ತದೆಂಬುದು ಸಾರಭೂತಾರ್ಥವು. ಈ ಸಂದರ್ಭದಲ್ಲಿ ಸಾರಪ್ರಕಾಶಿಕಾಯವರು **"ನಿರಪೇಕ್ಷಂ ಮುನಿಂ ಶಾನ್ತಂ ನಿರ್ವೈರಂ ಸಮದರ್ಶನಮ್| ಅನುವ್ರಜಾಮ್ಯಹಂ ನಿತ್ಯಂ ಪೂಯೇ ಯೇ ತ್ಯಂಘ್ರಿರೇಣುಭಿಃ| ಅಸ್ಮಿನ್ನಸ್ತಮಿತೇ ಭೀಷ್ಮೇ ಕೌರವಾನಾಂ ದುರಂಧರೇ| ಜ್ಞಾನಾನ್ಯಲ್ಪೀ ಭವಿಷ್ಯನ್ತಿ ತಸ್ಮಾತ್ತ್ವಾಂ ಚೋದಯಾಮ್ಯಹಂ"** ಎಂಬುದನ್ನು ಉದಾಹರಿಸಿ, ಹೀಗೆ ಭೀಷ್ಮರನ್ನು ಭಗವಂತನು ಶ್ಲಾಘಿಸಿ ಅವರ ಮೂಲಕವಾಗಿ ಯುಧಿಷ್ಠಿರಾದಿಗಳು ಉಪದೇಶವನ್ನು ಹೊಂದುವ ಹಾಗೆ ಪ್ರೇರಿಸಿದನು ಎಂಬ ಇತಿಹಾಸವು ಇಲ್ಲಿ ಅನುಸಂಧೇಯವು. **"ಆಚಾರ್ಯವಾರ್ ಪುರುಷೋವೇದ, ಸಂತಮೇನಂ ತತೋವಿದುಃ" "ಆಚಾರ್ಯಾದ್ಧ್ಯೈವ ವಿದ್ಯಾವಿದಿತಾ ಸಾಧಿಷ್ಟಂ ಪ್ರಾಪತ್"** ಇತ್ಯಾದಿಗಳೂ ಸಹ ಅನುಸಂಧೇಯಗಳು.

**ಇಪ್ಪಡಿ**– ಹೀಗೆ ಎಂದರೆ ಅಹಂಕಾರ ಮಮಕಾರಗಳನ್ನು ತೊರೆದು, ತನಗೆ ಉಂಟಾಗಿರುವ ಸುಜ್ಞಾನವಲ್ಲಾ ದೈವಕಟಾಕ್ಷದಿಂದಲೂ ಆಚಾರ್ಯಾನುಗ್ರಹದಿಂದಲೂ

**ಇಪ್ಪಡಿ ಕೃತಜ್ಞನಾಯ್ ಅವಹಿತನಾನ ಶಿಷ್ಯನೈಪ್ಪತ್ತಿ ನಾ॰ಶೆಯ್ದ ಕೃಷಿ ಫಲಿತ್ತದೆನ್ರು ಆಚಾರ್ಯನುಮ್ ಕೃತಾರ್ಥನಾಯಿರುಕ್ಕುಮ್.**
**ಕಾ. ಸಾಕ್ಷಾನ್ಮುಕ್ತೇ ರುಪಾಯಾ॰ ಯೋ ವಿದ್ಯಾಭೇದಾನುಪಾದಿಶತ್ ।**
**ಕಥ್ಯತೇ ಮೋಕ್ಷ ಶಾಸ್ತ್ರೇಷು ಸತು ಶ್ರೇಷ್ಠತಮೋಗುರುಃ ॥ ೧೭೦**

---

ದೊರೆಯಿತೆಂದು ನಂಬಿದವನಾಗಿ, **ಕೃತಜ್ಞನಾಗಿ**-ಆಕಾರಣದಿಂದ ಕೃತಜ್ಞತೆಯು ಳ್ಳವನಾಗಿ, **ಅವಹಿತನಾನ ಶಿಷ್ಯನೈಪ್ಪತ್ತ**-ಜಾಗರೂಕನಾಗಿ ಉಪದೇಶವನ್ನು ಹೊಂದಿದ ಶಿಷ್ಯನನ್ನು ಕುರಿತು, **ನಾನ್ ಶೆಯ್ದ**-ನಾನುಮಾಡಿದ ಕೃಷಿ—ವ್ಯವ ಸಾಯವು, ಪ್ರಯತ್ನವು, **ಫಲಿತ್ತದು**—ಸತ್ಪಾತ್ರನಲ್ಲಿ ಶಿಷ್ಯನುವಿನಿಯೋಗಿಸಿದುದ ರಿಂದ, **ಆಚಾರ್ಯನುಮ್**—ಆಕಾರಣದಿಂದ ಆಚಾರ್ಯನೂ ಸಹ, **ಕೃತಾರ್ಥನಾಯಿ ರುಕ್ಕುಮ್**—ಕೃತಪ್ರಯೋಜನವುಳ್ಳವನಾದೆನೆಂದು ಇರುವನು.

ಈಗರಹಸ್ಯತ್ರಯಗಳಾದ ಮೂರು ಮನ್ತ್ರಗಳ ಅರ್ಥವನ್ನು ಉಪದೇಶಿಸಿದ ಆಚಾರ್ಯರನ್ನು ಅತ್ಯಂತ ಭಕ್ತಿಯಿಂದ ಗೌರವಿಸಬೇಕೆಂದು ಹೇಳಲ್ಪಟ್ಟಿತು. ಆಗಲಿ ಇವರು ಸಾಕ್ಷಾತ್ತಾಗಿ ಏನೋ ಮೋಕ್ಷಪ್ರಾಪ್ತಿಗೆ ಕಾರಣ ಭೂತರೆಂದೇನೋ ಒಪ್ಪೋಣ. ಆದರೆ ಬ್ರಾಹ್ಮಣಯೋನಿಯಲ್ಲಿ ಹುಟ್ಟಿದರೂ ಉಪನಯನ ಸಂಸ್ಕಾರ ಉಂಟಾಗುವ ತನಕ ಶೂದ್ರನಾಗಿದ್ದವನನ್ನು ಸಂಸ್ಕಾರ ಬಲದಿಂದ ಬ್ರಾಹ್ಮಣನನ್ನಾಗಿ ಮಾಡಿ ಉಪಕರಿಸಿದ ತಂದೆಯು ಶ್ರೇಷ್ಠಗುರುವಲ್ಲವೇ? ಮತ್ತು ಶಂಖ ಚಕ್ರಾಂಕಿತನಮಾಡಿ, ಮನ್ತ್ರೋಪದೇಶವನ್ನು ಮಾಡಿದವನೂ ಗುರುವಲ್ಲವೇ? ವೇದಾಧ್ಯಯನವನ್ನು ಮಾಡಿಸಿ ಶ್ರೇಯಸ್ಸನ್ನು ಉಂಟುಮಾಡಿದ ಆಚಾರ್ಯನೂ ಸಹ ಗುರು ಸ್ಥಾನೀಯನಲ್ಲವೇ? ಎಂದರೆ ಈ ಪೂರ್ವಪಕ್ಷಗಳಿಗೆ ಸಮಾಧಾನವಾಗಿಹೇಳುತ್ತಾರೇನೆಂದರೆ- ಈ ಮೇಲೆ ಉಪಪಾದಿಸಿದ ತಂದೆಯೂ, ಮಂತ್ರಪ್ರದರಾದ ಆಚಾರ್ಯರೂ, ವೇದಾಧ್ಯಯನವನ್ನು ಹೇಳಿದವರೂ ಸಹ ಗುರುಗಳೇ ಸರಿ. ಆದರೆ ಈ ರಹಸ್ಯ ಮಂತ್ರಾರ್ಥಪ್ರದರಾಗಿ ಉಪಾಯಾನುಷ್ಠಾನಕ್ಕೆ ಹೇತುವಾದವರೇ ಎಲ್ಲಾ ಆಚಾರ್ಯರುಗಳಲ್ಲೂ ಇವರು ನಿರತಿ ಶಯ ಮೋಕ್ಷ ಪ್ರಾಪ್ತಿಗೆ ಹೇತುವಾದುದರಿಂದ ಇವರು ಪರಮಪುರುಷನ ಹಾಗೆ ಪರಮೋಪಕಾರರಾಗಿ ಪ್ರಧಾನಾಚಾರ್ಯರೆಂದು ಒಂದು ಕಾರಿಕೆಯ ಮೂಲಕ ತಿಳಿಸು ತ್ತಾರೆ. **ಯಃ**-ಯಾವ ಆಚಾರ್ಯರು, **ಮುಕ್ತೇಃ**-ಮುಕ್ತಿಗೆ, **ಸಾಕ್ಷಾತ್**-ಅವ್ಯವಹಿತ ಗಳಾದ, **ಉಪಾಯಾ॰**-ಸಾಧನಗಳಾದ, **ವಿದ್ಯಾಭೇದಾ॰**-ಮೋಕ್ಷಹೇತುಗಳಾದ ದಹರವಿದ್ಯಾ, ಪಂಚಾಗ್ನಿವಿದ್ಯಾ, ನ್ಯಾಸವಿದ್ಯಾ ವಾದ ಪ್ರಪದನ, ಮೊದಲಾದ ವಿದ್ಯಾ ಭೇದಗಳನ್ನು, **ಉಪಾದಿಶತ್**-ಉಪದೇಶಿಸುತ್ತಾನೋ, ಇದು ಶಿಷ್ಯನ ಕೈಯಿಂದ ಅನುಷ್ಠಿಸುವ ಹಾಗೂ ಮಾಡುವನೋ ಎಂಬುದಕ್ಕೂ ಉಪಲಕ್ಷಣವು, **ಮೋಕ್ಷ ಶಾಸ್ತ್ರೇಷು**-ಮೋಕ್ಷಕ್ಕೆ ಕಾರಣಭೂತಗಳಾದ ವ್ಯವಹಿತ ಅವ್ಯವಹಿತ ಸಾಧನಗಳನ್ನು ಹೇಳುವ ಶಾಸ್ತ್ರಗಳಲ್ಲಿ, ವೇದಾನ್ತ ಭಗವಚ್ಛಾಸ್ತ್ರಾದಿಗಳಲ್ಲಿ, **ಸತು**-ಅಂತಹ ಆಚಾರ್ಯ

ನಾದರೋ, **ಶ್ರೇಷ್ಠತಮನಾದ ಗುರುವೆಂದು, ಕಥ್ಯತೇ**-ಹೇಳಲ್ಪಡುತ್ತದೆ. **"ಯೋಽಸೌ ಮಂತ್ರವರಂ ಪ್ರಾದಾತ್ಸಂಸಾರೋಚ್ಛಿತ್ತಿಸಾಧನಮ್। ಪ್ರತೀಚ್ಛೇದ್ಗುರುವರ್ಯಸ್ಯತಸ್ಯೋಚ್ಛಿಷ್ಟಂ ಸುಪಾಪನಮ್। ಮನ್ತ್ರರಾಜ ಮಿಮಂ ವಿದ್ಯಾತ್"** ಎಂದಾರಂಭಿಸಿ, **"ಯಸ್ಮಾತ್ತದುಪದೇಷ್ಟಾಸೌತಸ್ಮಾದ್ಗುರುತರೋಗುರುಃ" "ದೇವಮಿವಾಚಾರ್ಯಮುಪಾಸೀತ" "ಆಚಾರ್ಯವಾನ್ ಪುರುಷೋವೇದ" "ಪಾಪಿಷ್ಠಃ ಕ್ಷತ್ರಬಂಧುಶ್ಚ ಪುಂಡರೀಕಶ್ಚ ಪುಣ್ಯಕೃತ್। ಆಚಾರ್ಯವತ್ತಯಾಮುಕ್ತೌ ತಸ್ಮಾದಾಚಾರ್ಯವಾನ್ ಭವೇತ್"** ಇತ್ಯಾದಿಗಳಲ್ಲಿ ಹೇಳಿರುವ ಹಾಗೆ, ಉಪಾಯಾನುಷ್ಠಾನಕ್ಕೆ ಯಾರು ಸಾಕ್ಷಾತ್ಕಾರಣನೋ ಆತನೇ ಶ್ರೇಷ್ಠತಮನಾದ ಗುರುವು ಎಂಬ ಭಾವವು. ಒಬ್ಬನಿಗೆ ಬ್ರಹ್ಮವಿದ್ಯೆಗೆ ವ್ಯವಹಿತ ಸಾಧನ ಕಾರಣಭೂತರಾದವರೆಲ್ಲರೂ ಗುರುಗಳೇ ಶ್ರೀಕೃಷ್ಣನೇ ಏಕಾದಶಸ್ಕಂದ ಭಾಗವತದಲ್ಲಿ ತನಗೆ ೨೪ ಗುರುಗಳೆಂದು ಆದರೆ ವಿಜಾತೀಯವಾಗಿ ಹೇಳಿಕೊಂಡಿರುತ್ತಾರೆ. ಶ್ರೀ ಯತಿವರ್ಯರು ತಮಗೆ ನಾಲ್ಕು ಜನ ಗುರುಗಳೆಂದು ತಿಳಿಸಿರುತ್ತಾರೆ. ಅವರಲ್ಲಿ ತಿರಕ್ಕೋಟಿಯೂರ್ ನಂಬಿಯವರು ದ್ವಯಾರ್ಥಪ್ರದರಾಗಿ ನ್ಯಾಸವಿದ್ಯೆಗೆ ಸಾಕ್ಷಾದುಪಾಯಭೂತರಾದುದರಿಂದ ಅವರೆಲ್ಲರಿಗಿಂತ ಪ್ರಧಾನರು. ಪೆರಿಯನಂಬಿಗಳು ಮಂತ್ರಪ್ರದರಾಗಿ ಪೂಜ್ಯರು.

ಸಾಕ್ಷಾದುಪಾಯಾನುಷ್ಠಾನಕ್ಕೆ ಹೇತುಭೂತರಾದವರೇ **"ಗುರುರೇವ ಪರಂ ಬ್ರಹ್ಮಗುರುರೇವ ಪರಾಗತಿಃ"** ಎಂಬಲ್ಲಿ ಹೇಳಿರುವ ಹಾಗೆ ಶ್ರೇಷ್ಠತಮ ಗುರುವೆಂದು ಹೇಳಿರುವದರಿಂದ ವ್ಯವಹಿತೋಪಾಯಗಳಾದ ಕರ್ಮಯೋಗ ಜ್ಞಾನಯೋಗಗಳ ಉಪದೇಶಿಕರು, ಶ್ರೇಷ್ಠತಮವಾದ ಗುರುಗಳಲ್ಲವೆಂಬುದು ಸೂಚಿತವೆಂದು ಸಾರಾಸ್ವಾದಿನಿಯವರು ತಿಳಿಸುತ್ತಾರೆ. **ವಿದ್ಯಾಭೇದಾತ್** ಎಂಬುದರಿಂದ ವ್ಯಾಸಸೂತ್ರಗಳಲ್ಲೂ ಉಪನಿಷತ್ತುಗಳಲ್ಲೂ ಹೇಳಲ್ಪಟ್ಟ ಉಪಾಸನ ಬೇಧಗಳು ಮಾತ್ರವೇ **ವಿದ್ಯಾಭೇದಾತ್** ಎಂಬುದರಿಂದ ಬೋಧಿಸಲ್ಪಟ್ಟುವೆಂದು ಭಾವಿಸತಕ್ಕದ್ದು. ಪ್ರಪದನವೂ ಹೇಳಲ್ಪಟ್ಟಿತು.

ಹೀಗೆ ಗಾಯತ್ರೀ ಪ್ರದಾತಾವಾದ ಪಿತಾ, ಮತ್ತು ಮನ್ತ್ರಪ್ರದರಾದ ಆಚಾರ್ಯರೂ, ವೇದಾಧ್ಯಯನಕ್ಕೆ ಹೇತುವಾದ ಗುರುವೂ, ಇವರೆಲ್ಲಾ ಪೂಜ್ಯತೆಗೆ ಅರ್ಹರಾದರೂ, ಮನ್ತ್ರಾರ್ಥಪ್ರದರಾಗಿ ಉಪಾಯಾನುಷ್ಠಾನಕ್ಕೆ ಹೇತುವಾದ ಆಚಾರ್ಯರೇ ಪರಮಾಚಾರ್ಯರೆಂದು ಭಾವಿಸತಕ್ಕದ್ದೆಂದು ಹೇಳಿದುದನ್ನೇ ಮುಂದಿನ ಕಾರಿಕೆಯಿಂದಲೂ ಸಮರ್ಥಿಸಿ ಹೇಳುತ್ತಾರೆ. ಅಂತಹ ಪರಮಾಚಾರ್ಯರ ವಿಷಯದಲ್ಲಿ ಬರೀ ಕೃತಜ್ಞತಾಭಾವವೇ ಸಾಲದು; ಅಂತಹ ಆಚಾರ್ಯರ ಚರಣದ್ವಂದ್ವವೇ ನಮಗೆ ಪ್ರಾಪ್ಯಪ್ರಾಪಕಕ್ಕೆ ಸಾಧನವೆಂದು ಭಾವಿಸತಕ್ಕದ್ದೆಂದು ಉಪದೇಶಿಸುತ್ತಾರೆ. **ಆಚಾರ್ಯವತ್ತಯಾ**-ಹೀಗೆ ಮನ್ತ್ರಾರ್ಥಪ್ರದರಾಗಿಯೂ ಉಪಾಯಾನುಷ್ಠಾನವನ್ನೂ

**ಆಚಾರ್ಯವತ್ತಯಾ ಮೋಕ್ಷಮಾಮನಂತಿ ಸ್ಮರನ್ತಿ ಚ।**
**ಇಹಾಮುತ್ರ ಚ ತತ್ಪಾದೌ ಶರಣಂ ದೇಶಿಕಾ ವಿದುಃ ॥ ೧೭೧ ॥**

---

ಮಾಡಿಸುವ ಆಚಾರ್ಯರನ್ನು ಹೊಂದುವರಿಂದಲೇ **ಮೋಕ್ಷಂ**-ಮೋಕ್ಷ ಉಂಟೆಂಬುದು, **ಆಮನಂತಿ**-ಶ್ರುತಿಯಲ್ಲೂ ಹೇಳಲ್ಪಟ್ಟಿರುತ್ತದೆ, **ಸ್ಮರನ್ತಿ ಚ**–ಸ್ಮೃತಿಗಳಲ್ಲೂ ಕೂಡ ಬೋಧಿಸಲ್ಪಟ್ಟಿರುತ್ತದೆ; **ದೇಶಿಕಾಃ**-ಆಚಾರ್ಯಸ್ಥಾನೀಯರಾದ ನಾಥಮುನಿ, ಆಳವಂದಾರ್, ಶ್ರೀ ಭಾಷ್ಯಕಾರರು ಮೊದಲಾದ ಪ್ರಾಜ್ಞರು, **ಇಹ**–ಇಲ್ಲೂ, **ಅಮುತ್ರ ಚ**-ಪರಮಪದದಲ್ಲೂ, **ತತ್ಪಾದೌ ಶರಣಂ**- ಅವರ ಪಾದದ್ವಂದ್ವವು ಜ್ಞಾನಭಕ್ತ್ಯಾದಿಗಳಿಗೆ ಉತ್ಪಾದಕವಾಗಿಸಾಧನವು ಎಂಬುದಾಗಿ, **ವಿದುಃ**-ತಿಳಿದರು.

**ಆಚಾರ್ಯವತ್ತಯಾ** ಎಂಬ ಪ್ರಯೋಗದಿಂದ, "**ಆಚಾರ್ಯವತ್ತಯಾ ಮುಕ್ತೌ ತಸ್ಮಾದಾಚಾರ್ಯವಾನ್ ಭವೇತ್**" ಎಂಬ ಪ್ರಮಾಣವು ಸ್ಮರಿಸಲ್ಪಟ್ಟಿತು. **ಆಮನಂತಿ** ಎಂದು ಹೇಳಿದುದರಿಂದ ಶ್ರುತಿಯಲ್ಲಿ ಎಲ್ಲಿ ಹೇಳಿದೆ ? ಎಂದರೆ "**ತದ್ವಿಜ್ಞಾನಾರ್ಥಂ ಸಗುರುಮೇವಾ ಭಿಗಚ್ಛೇತ್**" "**ಆಚಾರ್ಯವಾನ್ ಪುರುಷೋವೇದ**" "**ಆಚಾರ್ಯಾದ್ಧ್ಯೇವ ವಿದ್ಯಾವಿದಿತಾ ಸಾಧಿಷ್ಟಂ ಪ್ರಾಪತ್**" ಎಂದರೆ "**ಆಚಾರ್ಯರಿಂದಲೇ ವಿದ್ಯೆಯು ಫಲಸಾಧನಶಕ್ತಿಯನ್ನು ಹೊಂದುತ್ತದೆ**" ಇತ್ಯಾದಿಗಳಲ್ಲಿ. ಸ್ಮೃತಿಯಲ್ಲಿ ಎಲ್ಲಿ ಹೇಳಿದೆ? ಎಂದರೆ ಮೇಲೆ ಉದಾಹರಿಸಿದ "**ಆಚಾರ್ಯವತ್ತಯಾ ಮುಕ್ತೌ**" ಎಂಬಲ್ಲಿ. "**ಇಹಾಮುತ್ರ ಚ**" ಎಂಬ ಪ್ರಯೋಗವು. ಶ್ರೀ ಯಾಮುನ ಮುನಿಗಳ "**ನಾಥಾಯುನಾಥಮುನಯೇಽತ್ರ ಪರತ್ರ ಚಾಪಿನಿತ್ಯಂ ಯದೀಯ ಚರಣೌ ಶರಣಂ ಮದೀಯಮ್**" ಎಂಬ ಸ್ತೋತ್ರರತ್ನದ ೨ನೆಯ ಶ್ಲೋಕವನ್ನು ಜ್ಞಾಪಿಸುತ್ತದೆ. ಅವರು ಅಲ್ಲಿ ತಮ್ಮ ಗುರುಗಳ ಪಾದದ್ವಂದ್ವವನ್ನೇ ಇಲ್ಲೂ ನಿತ್ಯವಿಭೂತಿಯಲ್ಲೂ ಪರಮಸಾಧನವಾಗಿಯೂ ಆನಂದಕರವಾಗಿಯೂ ಭಾವಿಸಿರುತ್ತಾರೆ. ಇಲ್ಲಿಯಾದರೋ ಆಚಾರ್ಯಚರಣಗಳು ಪ್ರಾಪಕಪ್ರಾಪ್ಯಗಳಾಗಿತಮಗೆ ಶರಣವೆಂದು ಭಾವಿಸಬಹುದು. ಏಕೆಂದರೆ, ಸಾತ್ವತಂತ್ರದಲ್ಲಿ "**ಗುರುರೇವಪರಂಬ್ರಹ್ಮಗುರುರೇವ ಪರಾಗತಿಃ। ಗುರುರೇವಪರಾ ವಿದ್ಯಾಗುರುರೇವ ಪರಾಯಣಂ। ಯಸ್ಮಾತ್ತದುಪದೇಷ್ಟಾಸೌ ತಸ್ಮಾದ್ಗುರುತರೋ ಗುರುಃ** ಎಂದು ಹಾಗೆ ಉಪಪಾದಿಸಲ್ಪಟ್ಟಿರುತ್ತವೆ. ನಿತ್ಯವಿಭೂತಿಯಲ್ಲೂ ಹೇಗೆ ಶರಣವು? ಎಂದರೆಹೀಗೆ ಪ್ರಾಪ್ಯಪ್ರಾಪಕರಾದುದರಿಂದ ನಿತ್ಯವಿಭೂತಿಯಲ್ಲೂ ಕೂಡ ಹಾಗೆಯೇಕೃತಜ್ಞತಾಭಾವದಿಂದ ಸೇವ್ಯರು ಎಂದು ಹೇಳಲ್ಪಟ್ಟಿತು. ದಾಸನು ಬರೆದಿರುವ ಆಳವಂದಾರ್‌ಸ್ತೋತ್ರದ ದ್ವಿತೀಯ ಶ್ಲೋಕದ ವ್ಯಾಖ್ಯಾನವನ್ನು ಪರಾಂಬರಿಸಿ.

ಮುಂದೆ ಈ ಶಿಷ್ಯಕೃತ್ಯಾಧಿಕಾರಾರ್ಥವನ್ನು ಒಂದು ಪಾಶುರದಿಂದ, ನಿಗಮನ ಳ್ಳಿದ ಸಂಗ್ರಹಿಸುತ್ತಾರೆ. ಶಿಷ್ಯನಾದ ತನಗೆ ತನ್ನ ಪರಮಾಚಾರ್ಯರು ಮಾಡಿದ ಪರ

**ಏತ್ತಿ ಮನತ್ತೆಳಿಲ್ ಜ್ಞಾನವಿಳಕ್ಕೈ ಯಿರುಳನೈತ್ತುಮ್ ।**
**ಮಾತ್ತಿನವರ್ಕ್ಕೊರು ಕೈಮ್ಮಾರುಮಾಯನುಙ್ಕಾಣಗಿಲ್ಲಾನ್ ।**
**ಪೋತ್ತಿಯುಗಪ್ಪದುಮ್ ಪುನ್ದಿಯಿಲ್ಕೊಳ್ವದುಪೋನ್ಗುಪುಗಳ್ ।**
**ಶಾತ್ತಿವಳರ್ಪ್ಪದುಮ್ ಶತ್ತಲ್ಲವೋ ಮುನ್ನಮ್ಪೆತ್ತದರ್ಕೇ॥**

---

ಮೋಪಕಾರಕ್ಕೆ ಪ್ರತ್ಯುಪಕಾರವನ್ನು ಭಗವಂತನು ಕೂಡ ತಿಳಿಯನು; ಹೀಗಿರುವಾಗ ಪ್ರತ್ಯುಪಕಾರ ಮಾಡುವನೆಂಬುದು ಹಾಸ್ಯಾಸ್ಪದವಾದುದರಿಂದ ಅವರ ಮಹಿಮೆಯನ್ನು ಮನಸಾವಾಚಾಕೈಂಕರ್ಯಗಳಿಂದ ಕೊಂಡಾಡಿ, ವಿಶೇಷ ಕೃತಜ್ಞತಾಭಾವದಿಂದ ಇರತಕ್ಕದ್ದೆಂದೂ, ತಾನು ಅಧಿಕರಿಸಿದ ಉಪದೇಶವನ್ನು ಸತ್ಪಾತ್ರದಲ್ಲಿ ವಿನಿಯೋಗಿಸತಕ್ಕದ್ದೆಂದೂ ಉಪದೇಶಿಸುತ್ತಾರೆ. **ಮನತ್ತು**–ಶಿಷ್ಯನಾದವನ ಮನಸ್ಸಿನಲ್ಲಿ, **ಎಳಿಲ್**-ಹೆಚ್ಚಾಗಿ ಪ್ರಕಾಶಿಸುತ್ತಲಿರುವ, **ಜ್ಞಾನವಿಳಕ್ಕೈ**-ತನ್ನ ಆಚಾರ್ಯರಿಂದ ಬಂದ ಜ್ಞಾನರೂಪದೀಪವನ್ನು, **ಏತ್ತಿ**–ಹಚ್ಚಿ, ಚೆನ್ನಾಗಿ ಪ್ರಕಾಶಿಸುವ ಹಾಗೆ ಮಾಡಿ, **ಇರುಳನೈತ್ತುಮ್**–ಸಮಸ್ತ ಜ್ಞಾನಾಂಧಕಾರ ರೂಪವಾದ ಅಜ್ಞಾನ, ಅನ್ಯಥಾ ಜ್ಞಾನ, ವಿಪರೀತಜ್ಞಾನಗಳೆಲ್ಲವನ್ನೂ, **ಮಾತ್ತಿನವರ್ಕ್ಕು**–ಹೋಗಲಾಡಿಸಿದ ತನ್ನ ಆಚಾರ್ಯವರ್ಯರಿಗೆ, **ಒರುಕೈಮ್ಮಾರು**–ಒಂದು ಪ್ರತ್ಯುಪಕಾರವನ್ನೂ, **ಮಾಯನುಮ್**–ದಿವ್ಯಚೇಷ್ಟಿತಗಳನ್ನೆಸಗುವ ಭಗವಂತನೂ, **ಕಾಣಗಿಲ್ಲಾನ್**-ಕಂಡಿಲ್ಲವು; ಹೀಗಿರುವಾಗ ಶಿಷ್ಯನಾದವನು ಪ್ರತ್ಯುಪಕಾರವನ್ನೆಸಗುವೆನೆಂದು ಎಣಿಸುವದು ಸುತರಾಂ ಹಾಸ್ಯಾಸ್ಪದವಾದ ವೃತ್ತಿ ಎಂಬ ಭಾವವು. ಹಾಗಾದರೆ ಆಚಾರ್ಯ ವಿಷಯದಲ್ಲಿ ಮಾಡತಕ್ಕದ್ದೇನೂ ಇಲ್ಲವೋ ಎಂದರೆ ನಿರೂಪಿಸುತ್ತಾರೆ- **ಪೋತ್ತಿ**-(೧) ಸ್ತೋತ್ರವನ್ನು ಮಾಡಿ, (ವಾಚಿಕ ಕೈಂಕರ್ಯವು) (೨) **ಉಕಪ್ಪದುಮ್**-ಆಚಾರ್ಯರನ್ನು ಸಂತೋಷಪಡಿಸಿಯೂ (ಕಾಯಿಕಕೈಂಕರ್ಯಮೂಲಕವಾಗಿ) (೩) **ಪುನ್ದಿಯಿಲ್**-ಬುದ್ಧಿಯಲ್ಲಿ, **ಕೊಳ್ವದುಮ್**–ಧ್ಯಾನಿಸುವುದೂ (ಮಾನಸಿಕ ಕೈಂಕರ್ಯವು), **ಪೋನ್ಗುಪುಗಳ್**-ಆಚಾರ್ಯರ ಆಧಿಕ್ಯವನ್ನು ಹೊಂದಿದ ಕಲ್ಯಾಣ ಗುಣಗಳನ್ನು, **ಶಾತ್ತಿ**–ಪ್ರಕಾಶಪಡಿಸಿ, **"ಗುರುಂಪ್ರಕಾಶಯೇತ್"** ಎಂಬಲ್ಲಿ ಹೇಳಿರುವ ಹಾಗೆ ಎಂಬ ಭಾವವು, **ವಳರ್ಪ್ಪದುಮ್**-ಎಲ್ಲರೂ ತಿಳಿಯುವ ಹಾಗೆ ಮಾಡಿ, (ಇದೂ ವಾಚಕ ಕೈಂಕರ್ಯವೇ) **ಮುನ್ನಮ್**-ಮೊದಲು, **ಪೆತ್ತದರ್ಕು**-ಆಚಾರ್ಯರಿಂದ ಪಡೆದುದಕ್ಕೆ, ಅವರು ಮಾಡಿದ ಉಪದೇಶ ಮತ್ತು ಉಪಾಯಾನುಷ್ಠಾನಗಳಾದ ಮಹತ್ತಾದ ಉಪಕಾರಕ್ಕೆ, **ಶತ್ತು ಅಲ್ಲವೇ**-ನಾವು ಮಾಡುವ ಈ ಕಾಯಿಕ ವಾಚಕ ಮಾನಸಿಕ ಕೈಂಕರ್ಯಗಳು, **ಶತ್ತಲ್ಲವೋ**–ಅತ್ಯಲ್ಪವಾದುವುಗಳಲ್ಲವೇ.

ಪರಮಾಚಾರ್ಯರು ಶಿಷ್ಯನಿಗೆ ಜ್ಞಾನದೀಪವನ್ನು ಹಚ್ಚಿ ಆತನಲ್ಲಿದ್ದ ಅಂಧಕಾರವಾದ ಭ್ರಮಜ್ಞಾನಗಳನ್ನೆಲ್ಲಾ ಹೋಗಲಾಡಿಸಿದ್ದಾರೆ. ಈತನಿಗೆ, ಆತ್ಮಜ್ಞಾನ

ವಾಗಲಿ ಪರದೇವತಾ ಜ್ಞಾನವಾಗಲಿ ಇರಲಿಲ್ಲವು. ಅವುಗಳನ್ನುಂಟು ಮಾಡಿರು ತ್ತಾರೆ. ಈತನಿಗೆ ಅನ್ಯಥಾ ಜ್ಞಾನವೂ ಇತ್ತು. ದ್ರವ್ಯಗಳ ಗುಣವೇ ತಿಳಿಯದೆ, ತಾನು ಸ್ವತಂತ್ರನೆಂಬ ಭ್ರಮೆಯೂ ಇತ್ತು. ಅದನ್ನು ಹೋಗಲಾಡಿಸಿ ತಾನು ಪರಮಪುರುಷನಿಗೆ ಶೇಷಭೂತನೆಂದು ಉಪದೇಶಿಸಿ ಆ ಅನ್ಯಥಾಜ್ಞಾನವನ್ನು ಹೋಗ ಲಾಡಿಸಿದರು. ದೇಹವೇ ಆತ್ಮಾ ಎಂಬ ವಿಪರೀತಜ್ಞಾನವು ಈತನಿಗೆ ಇತ್ತು; ಒಂದು ಧರ್ಮಿಯನ್ನು ಬೇರೆ ಧರ್ಮಿ ಎಂದು ಭಾವಿಸೋಣವು ವಿಪರೀತ ಜ್ಞಾನವು. ಅದನ್ನು ಹೋಗಲಾಡಿಸಿ, ದೇಹಕ್ಕಿಂತ ಬೇರೆಯಾಗಿ ನಿತ್ಯನಾಗಿ ಪರಿಶುದ್ಧ ಸ್ವರೂಪನಾಗಿ ಆತ್ಮನಿದ್ದಾನೆಂದು ಉಪದೇಶಿಸಿದರು. ಮತ್ತು ತಾನೇ ಪರಮಾತ್ಮನೆಂಬ ವಿಪರೀತ ಜ್ಞಾನರೂಪ ಭ್ರಮೆಯನ್ನು ಹೊಂದಿದ್ದನು. ಅದನ್ನು ಹೋಗಲಾಡಿಸಿ ಅಮೋಘ ವಾದ ಸ್ವರೂಪಗುಣವಿಭವೈಶ್ವರ್ಯಗಳಿಂದ ಪರಿಪೂರ್ಣನಾಗಿರುವ ಪರಮಪುರುಷನಿಗೆ ತಾನು ದಾಸಭೂತನಾಗಿ ಬೇರೆ ಎಂಬ ಸಾರಭೂತ ಉಪದೇಶವನ್ನು ಆಚಾರ್ಯರು ಮಾಡಿ, ಆ ಭ್ರಮೆಯನ್ನು ಹೋಗಲಾಡಿಸಿದರು. ಹೀಗೆ ಶಿಷ್ಯನ ಜ್ಞಾನದೀಪವು ವೃದ್ಧಿ ಹೊಂದಿತೆಂದು ಪ್ರಥಮಪಾದದಲ್ಲಿ ಹೇಳಿದರು. ಈ ಶಿಷ್ಯನು ಅವರು ಕೊಟ್ಟ ಬೆಳಕನ್ನೇ ಹೆಚ್ಚಾಗಿ ಪ್ರಕಾಶಿಸುವ ಹಾಗೆ ಮಾಡಿ ತನ್ನ ಶಿಷ್ಯರಿಗೆ ಕೊಡತಕ್ಕದ್ದು ಮುಖ್ಯ ಕರ್ತವ್ಯವೆಂದು ಉಪದೇಶಿಸಿದರು. ಆ ಬೆಳಕನ್ನು ಆರಿಸಿಬಿಡಕೂಡದು. ಉತ್ಕೃಷ್ಟವಾದ ಯಥಾರ್ಥಜ್ಞಾನವು ಪ್ರಾಜ್ಞರಿಂದ ದೀಪಕ್ಕೆ ಹೋಲಿಸಲ್ಪಟ್ಟಿರು ತ್ತದೆ. **"ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ॥"** (ಗೀ ೧೦. ೧೧) ಎಂಬುದು ಅನುಸಂಧೇಯವು.

ಆಚಾರ್ಯರು ಮಾಡಿದ ಮಹದುಪಕಾರಕ್ಕೆ ಪ್ರತ್ಯುಪಕಾರವಿದು ಎಂದು ಭಗವಂ ತನೇ ಹೇಳಲಾರನು. ಹೀಗಿರುವಾಗ ಶಿಷ್ಯನು, ತಾನು ಪ್ರತ್ಯುಪಕಾರವನ್ನು ಮಾಡುವೆ ನೆಂದು ಹೊರಡುವುದು ತುಂಬಾ ಹಾಸ್ಯಾಸ್ಪದವಾಗುತ್ತದೆಂದು ಎರಡನೆಯ ಪಾದದಿಂದ ಹೇಳಿದರು. ಪರಮಪುರುಷನು ಸರ್ವಜ್ಞನು; ಅಂತವನಿಗೂ ತಿಳಿಯದು ಎಂದು ಹೇಳುವುದು ನ್ಯಾಯವೋ, ಆತನ ಸರ್ವಜ್ಞತೆಗೆ ಕುಂದಕವಲ್ಲವೋ? ಎಂದಾಕ್ಷೇ ಪಿಸಿದರೆ, ಆಚಾರ್ಯರು ಮಾಡಿದ ಉಪಕಾರಕ್ಕೆ ಸಮನಾಗಿರುವ ಪ್ರತ್ಯುಪಕಾರವು ಇಲ್ಲದೇ ಇರುವಂತಾದ್ದು. ಇಲ್ಲದ್ದು ಇಲ್ಲವೆಂದು ಹೇಳುವುದು ಸರ್ವಜ್ಞತೆಗೆ ಹೇಗೆ ಕುಂದುಕವಾದೀತು! ಗಗನಕುಸುಮವು ಇಲ್ಲದ ವಸ್ತು. ಅದು ಸರ್ವಜ್ಞನಿಗೂ ತಿಳಿ ಯದು, ಎಂದರೆ ಹೇಗೆ ಸರ್ವಜ್ಞತೆಗೆ ಕುಂದುಕವಿಲ್ಲವೋ ಹಾಗೆಯೇ ಇಲ್ಲೂ ಎಂದು ತಿಳಿಯತಕ್ಕದ್ದು. ಆದರೆ ಕೃತಜ್ಞತಾಭಾವವನ್ನು ಮಾತ್ರ ಅಂತಹ ನಿರತಿಶಯವಾದ ಉಪಕಾರ ಮಾಡಿದ ಮಹನೀಯರಿಗೆ ಪ್ರದರ್ಶಿಸುವ ನಿಮಿತ್ತವಾಗಿ ವಾಚಿಕ, ಮಾನ ಸಿಕ ಕಾಯಿಕ ಕೈಂಕರ್ಯಗಳನ್ನೆಸಗುವದು ಮುಖ್ಯ ಕರ್ತವ್ಯವೆಂದು ಮುಂದಿನ ಎರಡು ಪಾದಗಳಿಂದ ತಿಳಿಸಿ, ಅವರು ಮಾಡಿದ ಮಹದುಪಕಾರಕ್ಕೆ ಈ ಕೈಂಕರ್ಯಗಳೆಲ್ಲಾ

ಅತ್ಯಲ್ಪವಾದುವೆಂದು ಉಪದೇಶಿಸುತ್ತಾರೆ- ವಾಚಿಕ ಕೈಂಕರ್ಯವು ಯಾವುದೆಂದರೆ ಅವರ ತನಯುವನ್ನು ಹೇಳುವದು, ಅವರ ಕಲ್ಯಾಣ ಗುಣಗಳನ್ನು ಕೊಂಡಾಡುವದು, ಅವರು ರಚಿಸಿದ ಗ್ರಂಥಗಳನ್ನು ಪಠಿಸುವುದು, ಪ್ರಕಾಶಪಡಿಸುವುದು ಇತ್ಯಾದಿ. ಮಾನಸಿಕ ಕೈಂಕರ್ಯವು:- ಅವರನ್ನು ಮೂಲಮನ್ತ್ರದ್ವಯ ಚರಮಶ್ಲೋಕಗಳ ಜಪ ಕಾಲದಲ್ಲಿ ಧ್ಯಾನಿಸುವದು. ಕಾಯಿಕ ಕೈಂಕರ್ಯಗಳು ವ್ಯಕ್ತವಾಗಿ ಹೇಳಲ್ಪಡದಿದ್ದರೂ ಅವರಿಗೆ ಪ್ರಣಾಮಾದಿಗಳನ್ನು ಮಾಡುವದೂ, ಗುರುಶುಶ್ರೂಷೆಯನ್ನೆಸಗುವದೂ ಮತ್ತು ಅವರ ಅವತಾರ ಪುಣ್ಯದಿನಗಳಲ್ಲಿ ದ್ರಾವಿಡ ಪ್ರಬಂಧಾದಿಗಳ ಪಠಣವನ್ನು ನಡೆಸುವ ಬ್ರಾಹ್ಮಣಕೈಂಕರ್ಯವನ್ನೆಸಗುವುದು, ಇತ್ಯಾದಿಗಳು.

ಗುರುವು ಮಾಡಿದ ಉಪಕಾರವು ಮಹತ್ತಾದುದೆಂದು ಶ್ರೀ ಕೃಷ್ಣನೇ ತನ್ನ ಸಖನಾದ ಕುಚೇಲರಿಗೆ ತಾವು ಸಾಂದೀಪನಿಯವರಿಂದ ಹೊಂದಿದುದನ್ನು ಮುಂದೆ ಹೇಳಿರುವ ಹಾಗೆ ಶ್ಲಾಘಿಸುತ್ತಾರೆ. ಆಚಾರ್ಯನು **"ಯಥಾ ಹಂ ಜ್ಞಾನದೋ ಗುರುಃ"** ಎಂಬುದಾಗಿ ತಿಳಿಸಿ, **"ದ್ವಿಜೋ ವಿಜ್ಞಾಯ ವಿಜ್ಞೇಯಂ ತಮಸಃ ಪಾರಮಶ್ನುತೇ"** ಎಂದು ಸ್ವಪರ ಸ್ವರೂಪ ಯಾಥಾತ್ಮ್ಯವನ್ನು ತಿಳಿಸಿ ಆ ಉಪದೇಶವು ಮೋಕ್ಷಪ್ರಾಪ್ತಿಗೆ ಹೇತುವಾದ ಅನುಷ್ಠಾನವನ್ನುಂಟು ಮಾಡುವುದರಿಂದ ಅವರ ಉಪಕಾರವು ಮಹತ್ತಾದುದು. ಅದಕ್ಕೆ ಪ್ರತಿಯಾದುದೂ ಯಾವುದೂ ಇಲ್ಲವು. ಆದುದರಿಂದ ಗುರುಶುಶ್ರೂಷೆಯಿಂದಲೇ ತಾನು ತೃಪ್ತನಾಗುವ ಹಾಗೆ ಯಜ್ಞದಾನ ತಪಸ್ಸುಗಳಿಂದಿಲ್ಲವೆಂದು ಮುಂದೆ ಹೇಳುತ್ತಾರೆ- **"ನಾಹ ಮಿಜ್ಯಾ ಪ್ರಜಾತಿಭ್ಯಾಂ ತಪಸೋಪಶಮೇನವಾ । ತುಷ್ಯೇಯಂ ಸರ್ವಭೂತಾತ್ಮಾ ಗುರು ಶುಶ್ರೂಷಯಾ ಯಥಾ"** ಇಲ್ಲಿ ಹೇಳಿರುವ ಕಾಯಿಕ ಕೈಙ್ಕರ್ಯವಾದ ಶುಶ್ರೂಷೆಯು, ವಾಚಿಕ ಮಾನಸಿಕ ಕೈಙ್ಕರ್ಯಗಳಿಗೂ ಉಪಲಕ್ಷಣವು.

ಹಿಂದೆ ಆಚಾರ್ಯನ ವಿಷಯದಲ್ಲಿ ಅವರು ಮಾಡಿರುವ ಉಪಕಾರಕ್ಕೆ ಪ್ರತ್ಯುಪಕಾರವು ಯಾವುದೆಂಬುದನ್ನು ಶ್ರಿಯಃಪತಿಯೂ ಅರಿಯನು, ಎಂದು ತಿಳಿಸಿ, ಅವರಲ್ಲಿ ವಿಶೇಷ ಭಕ್ತಿಯಿರಬೇಕೆಂದು ಹೇಳಲ್ಪಟ್ಟು ಆತನೇ ಮೋಕ್ಷಕ್ಕೆ ಅವ್ಯವಹಿತ ಸಾಧನನಾದುದರಿಂದ ಆತನೇ ಸರ್ವಶ್ರೇಷ್ಠನೆಂದೂ ಹೇಳಲ್ಪಟ್ಟಿತು. ಆದರೆ ಭಗವಂತನೇ ಈತನ ಜನ್ಮಕಾಲದಲ್ಲಿ ಕಟಾಕ್ಷಿಸಿ, ಸಾಧುಸಮಾಗಮ ಆಚಾರ್ಯಪ್ರಾಪ್ತಿಗಳಿಗೂ ಮೋಕ್ಷೋಪಾಯಾನುಷ್ಠಾನಕ್ಕೂ ಸಿದ್ಧೋಪಾಯನಾಗಿ ಹೇತುವಾಗಿರುವಾಗ, ಆಚಾರ್ಯರ ಉಪಕಾರವೇ ಮಹದುಪಕಾರ ಭಾವನೆ ಹೇಗೆ ? ಎಂಬಾಕ್ಷೇಪಕ್ಕೆ ಈ ಶ್ಲೋಕದ ಮೂಲಕ ಸಮಾಧಾನವನ್ನು ಹೇಳುತ್ತಾರೆ.

ಭಗವಂತನೇ ಎಲ್ಲಾದಕ್ಕೂ ಹೇತುವಾದರೂ ಪ್ರತ್ಯಕ್ಷದಲ್ಲಿ ಈ ಸದಾಚಾರ್ಯರ ಮೂಲಕವಾಗಿಯೇ ತಾನು ಅದೃಶ್ಯನಾಗಿ ನಡೆಸುವುದರಿಂದ, ಆಚಾರ್ಯರಲ್ಲೇ ವಿಶೇಷ ಕೃತಜ್ಞತಾ ಭಾವವಿರಬೇಕೆಂದು ತಿಳಿಸುತ್ತಾರೆ. ಭಗವಂತನು ಪ್ರತ್ಯಕ್ಷದಲ್ಲಿ ನಿಂತು ಉಪದೇಶಾದಿಗಳನ್ನು ತಾನೇ ಮಾಡುವುದು ಯಾವಾಗಲೋ ಒಂದೊಂದು ಅವತಾರ

**ಅಧ್ಯಾಸೀನ ತುರಂಗವಕ್ತ್ರವಿಲಸಜ್ಜಿಹ್ವಾಗ್ರ ಸಿಂಹಾಸನಾತ್**
**ಆಚಾರ್ಯಾ ದಿಹ ದೇವತಾಂ ಸಮಧಿಕಾಮನ್ಯಾಂನಮನ್ಯಾಮಹೇ |**
**ಯಸ್ಯಾಸೌ ಭಜತೇ ಕದಾಚಿದಜಹದ್ಭೂಮಾ ಸ್ವಯಂಭೂಮಿಕಾಂ |**
**ಮಗ್ನಾನಾಂಭವಿನಾಂ ಭವಾರ್ಣವ ಸಮುತ್ತಾರಾಯ ನಾರಾಯಣಃ ||೭೪||**

---

**ಕಾ**ಲಗಳಲ್ಲಿ ಮಾತ್ರವೇ. ಆಚಾರ್ಯರಾದರೋ ಹಾಗಲ್ಲದೆ ಕಂಕಣಬದ್ಧರಾಗಿ ಜೀವ ಮಾನವನ್ನೆಲ್ಲಾ ಇಂತಹ ಮಹೋಪಕಾರವನ್ನು ಮಾಡುವುದರಲ್ಲೇ ವಿನಿಯೋಗಿಸು ವುದರಿಂದ, ಭಗವಂತನಿಗಿಂತ ವಿಶೇಷ ಮಾನ್ಯರೆಂದು ಹೇಳುತ್ತಾರೆ ಅಥವಾ ಭಗ ತನ ಕೃಪೆಯಿಂದಲೇ ಎಲ್ಲವೂ ನಡೆದರೂ, ಭಗವಂತನೇ ಈ ಆಚಾರ್ಯರ ಮೂಲಕ ಶಿಷ್ಯನಿಗೆ ಮಹತ್ತಾದ ಉಪಕಾರವನ್ನು ಮಾಡಿಸಿರುವದರಿಂದ, ತನ್ನನ್ನು ಕೃತಜ್ಞತಾ ಭಾವದಿಂದ ನೋಡುವುದಕ್ಕಿಂತ ಆಚಾರ್ಯರನ್ನು ಭಾವಿಸುವುದೇ ತನಗೂ ಇಷ್ಟವೆಂಬ ಭಾವವು ತೋರಿಬರುತ್ತದೆ. ಶ್ರೀ ದೇಶಿಕರವರು ಉಪಪಾದಿಸಿರುವುದು ಮೊದಲನೆಯ ಅಭಿಪ್ರಾಯವು.

**ಅರ್ಥವು-ಅದ್ಯಾಸೀನ ಸಿಂಹಾಸನಾತ್, ಅಧ್ಯಾಸೀನ** ಪ್ರತಿಷ್ಠಿತರಾಗಿ ರುವ, **ತುರುಂಗವಕ್ತ್ರ**-ಹಯಗ್ರೀವರಿಂದ, **ವಿಲಸಿ**ತ್-ಪ್ರಕಾಶಿಸುತ್ತಿರುವ, **ಜಹ್ವಾ ಗ್ರಸಿಂಹಾಸನಾತ್**-(ಉಪದೇಶ ಹೊರಡುವ) ನಾಲಿಗೆಯ ಕೊನೆ ಎಂಬ ಸಿಂಹಾಸನ ನವುಳ್ಳ, **ಆಚಾರ್ಯಾತ್**-ಆಚಾರ್ಯರಿಗಿಂತ, ಎಂದರೆ ಈ ಆಚಾರ್ಯರ ನಾಲಿಗೆಯಿಂದ ಉಪದೇಶ ರೂಪದಲ್ಲಿ ಹೊರಡುವದೆಲ್ಲಾ ಶ್ರೀ ಹಯಗ್ರೀವರು ಅಲ್ಲಿ ಪ್ರತಿಷ್ಠಿತರಾಗಿ ಕೃಪಯಾ ಪ್ರೇರಿಸುವುದರಿಂದುಂಟಾದುದು. ಅಂತಹ ಮಹಿಮೆಯುನ್ನುಳ್ಳವರು ಆಚಾರ್ಯರು ಎಂಬ ಭಾವವು, ಇಂತಹ ಆಚಾರ್ಯರಿಗಿಂತಲೂ ಎಂದರ್ಥವು; ಅಥವಾ **ಅಧ್ಯಾಸೀನ**-ಪ್ರತಿಷ್ಠಿತರಾಗಿರುವ ತುರಂಗವಕ್ತ್ರರನ್ನು ಜಹ್ವಾಗ್ರವೆಂಬ ಸಿಂಹಾಸನ ದಲ್ಲಿ ಉಳ್ಳ, ಆಚಾರ್ಯರಿಗಿಂತಲೂ, ಎಮೂ ಅರ್ಥ ಮಾಡಬಹುದು; **ಇಹ-ಈ ಲೀಲಾವಿಭೂತಿಯಲ್ಲಿ**, ಈ ಜಗತ್ತಿನಲ್ಲಿ, **ಅನ್ಯಾಂ**-ಬೇರೆಯಾದ, **ಸಮಧಿಕಾಂ**-ಶ್ರೇಷ್ಠತರವಾದ, **ದೇವತಾಂ**-ದೇವತೆಯನ್ನು, **ನಮನ್ಯಾಮಹೇ**-ನಾವು ಭಾವಿಸ ಲಾರೆವು. ಯಾವಾಗ ಅಧಿಕವಾದುದು ಇಲ್ಲವೋ ಆಗ ಸಮವೋ ? ಎಂದರೆ ಸಮ ವೆಂದು ಶ್ರುತಿಯಲ್ಲಿ ಪ್ರತಿಪಾದ್ಯವಾಗಿರುವುದರಿಂದ ಭಾವಿಸಿದರೂ ಭಾವಿಸಬಹುದು. ಆದರೆ ಸಾಕ್ಷಾದುಪದೇಶವು ಪ್ರತ್ಯಕ್ಷದಲ್ಲಿ ಈ ಆಚಾರ್ಯರಿಂದ ಲಭಿಸಿದುದರಿಂದ ಆಚಾ ರ್ಯರೇ ಹೆಚ್ಚಿನ ಮಾನಾರ್ಹರೆಂಬ ಭಾವವು. ಭಗವಂತನಿಗಿಂತಲೂ ತಮ್ಮ ಆಚಾರ್ಯರೇ ಮಾನನೀಯರೆಂಬ ಭಾವವು. ಅದೇನು ಹಾಗೆ ? ಎಂದರೆ ಉತ್ತರಾರ್ಧದಿಂದ ಅದನ್ನು ಉಪಪಾದಿಸುತ್ತಾರೆ- **ಅಸೌ**-ಈ ಶ್ರೀಯಃಪತಿಯಾದ, **ನಾರಾಯಣಃ**-ನಾರಾಯಣನು, **ಸ್ವಯಂ**-ತಾನೇ, **ಕದಾಚಿತ್**-ಯಾವುದೋ ಒಂದೊಂದು ಕಾಲ

ದಲ್ಲಿ, ಯಾವ ಉಪದೇಶವನ್ನು ಮಾಡುವ ಆಚಾರ್ಯನ, **ಅಜಹದ್ಭೂಮಾಸ್**-ತನ್ನ ದಿವ್ಯ ಸ್ವರೂಪಾದಿಗಳನ್ನು ಅವತಾರಗಳ ಕಾಲದಲ್ಲಿ ಬಿಡದೇ ಇರುವವನಾಗಿ, **ಭೂಮಿಕಾಂ**-ವೇಷವನ್ನು, **ಮಗ್ನನಾಂ ಭವಿನಾಂ**-ಸಂಸಾರ ಸಮುದ್ರದಲ್ಲಿ ಮುಳುಗಿ ಹೋದ ಬದ್ಧ ಜೀವಾತ್ಮರನ್ನು **ಸಮುತ್ತಾರಾಯ**-ಕೈ ಹಿಡಿದು ಮೇಲಕ್ಕೆ ಎತ್ತಿ ರಕ್ಷಿಸುವುದಕ್ಕಾಗಿ, **ಭಜತೇ**-ಹೊಂದುವನೋ, ಆ ಕಾರಣದಿಂದ, ನಮಗೆ ಪ್ರತ್ಯಕ್ಷದಲ್ಲಿ ಉಪದೇಶಿಸಿದ ಆಚಾರ್ಯರೇ ಸರ್ವಶ್ರೇಷ್ಠರೆಂಬ ಭಾವವು.

ಉಪಪಾದನೆಯು-ಭಗವಂತನಿಗಿಂತ ತಮ್ಮ ಸಾಕ್ಷಾದಾಚಾರ್ಯರೇ ತಮಗೆ ತುಂಬಾ ಮಾನನೀಯರೆಂದು ಹೇಳಿದರು. ಏಕೆಂದರೆ ಭಗವಂತನು **ಕದಾಚಿತ್**-ಯಾವುದೋ ಒಂದೊಂದು ಕಾಲದಲ್ಲಿ **ಸ್ವಯಂ**- ತಾನೇ ಉಪದೇಶಿಕನಾಗಿ ನಿಂತು ಈ ಲೋಕದ ಸಂಸಾರಿಗಳ ಉತ್ತಾರಿಣಿಯನ್ನು ನಡೆಸಿರುತ್ತಾನೆ. ನಮ್ಮ ಆಚಾರ್ಯರಾದರೋ ಕದಾಚಿತ್ ಅಲ್ಲದೆ, ಸದಾ ತಮ್ಮ ಜೀವಮಾನದಲ್ಲೆಲ್ಲಾ ಕಂಕಣಬಧ್ಧರಾಗಿ ಯಾವಾಗಲೂ ಸಂಸಾರಿಗಳ ಉತ್ತೀರ್ಣಕ್ಕಾಗಿಯೇ ಉಪದೇಶಿಸಿಕೊಂಡೇ ಇರುವರಾದುದರಿಂದ ಆಚಾರ್ಯರೇ ವಿಶೇಷ ಪೂಜೆಗೆ ಅರ್ಹರು ಎಂದು ಸಮರ್ಥಿಸಿ ಹೇಳಿರುತ್ತಾರೆ. **ಕದಾಚಿತ್** ಸ್ವಾಮಿಯು ಉಪದೇಶಿಕರು ಎಂದು ಹೇಳಲ್ಪಟ್ಟಿತಲ್ಲಾ ಆ ಕಾಲವು ಯಾವುದು ಎಂದರೆ ಗೀತೆಯಲ್ಲಿ ತಾವೇ ಹೇಳಿಕೊಂಡಿರುತ್ತಾರೆ:- **"ಯದಾಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ| ಅಭ್ಯುತ್ಥಾನ ಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್"** ವಿಶೇಷವಾಗಿ ಅಧರ್ಮಕ್ಕೆ ಏಳಿಗೆಯೂ ಧರ್ಮಕ್ಕೆ ಹಾನಿಯೂ ಉಂಟಾದಾಗ ಮಾತ್ರ ಭಗವಂತನು ಅವತರಿಸಿ ಅಧರ್ಮಿಗಳನ್ನು ಹಾಳು ಮಾಡಿ ಸಾಧುಗಳನ್ನು ಕಾಪಾಡಿ ಧರ್ಮಸಂಸ್ಥಾಪನವನ್ನು ಮಾಡುತ್ತಾನೆ. ಅವುಗಳಲ್ಲಿ ಕೆಲವು ಸಂದರ್ಭಗಳನ್ನು ಸಾರದೀಪರವರು ಉದಾಹರಿಸಿರುತ್ತಾರೆ. ಬದರಿಕಾಶ್ರಮದಲ್ಲಿ ನಾರಾಯಣ ರೂಪದಿಂದಲೂ, ವಿಷ್ಣುಲೋಕದಲ್ಲಿ ವಿಷ್ಣುರೂಪದಲ್ಲೂ, ಭಾರತ ಯುದ್ಧ ಕಾಲದಲ್ಲಿ ಲೀಲಾಸಾರಥಿಯಾಗಿಯೂ ಸಮುದ್ರತೀರದಲ್ಲಿ ವಿಭೀಷಣ ಪರಿಗ್ರಹ ಮಾಡಿ ಅಭಯಪ್ರದಾನಾವಸರದಲ್ಲಿ ಶ್ರೀರಾಮನಾಗಿಯೂ, ಪ್ರಳಯದಲ್ಲಿ ಸಮುದ್ರದಲ್ಲಿ ಮತ್ಸ್ಯರೂಪದಲ್ಲಿಯೂ, ವರಾಹರೂಪದಲ್ಲಿಯೂ, ದೇವಹೂತಿಗೆ ಕಪಿಲಾವತಾರಿಯಾಗಿಯೂ, ಉಪದೇಶಗಳು. ಹೀಗೆ **"ಸಾಕ್ಷಾನ್ನಾರಾಯಣೋದೇವಃ ಕೃತ್ವಾ ಮರ್ತ್ಯಮಯೀಂ ತನುಂ| ಮಗ್ನಾನುದ್ಧರತೇ ಲೋಕಾ್ ಕಾರುಣ್ಯಾಚ್ಛಾಸ್ತ್ರ ಪಾಣಿನಾ"** ಅದಕ್ಕಾಗಿಯೇ ಸರ್ವೇಶ್ವರನು ಶಾಸ್ತ್ರವೆಂಬ ಕೈಯ್ಯನ್ನು ಕೊಟ್ಟು ಚೇತನರನ್ನು ಸಂಸಾರ ಸಾಗರದಿಂದ ಮೇಲಕ್ಕೆ ಎತ್ತುತ್ತಾನೆಂದು ಹೇಳಲ್ಪಟ್ಟಿರುತ್ತದೆ. ಆದರೆ ಯಾವಾಗಲೂ ತಾನೇ ಮರ್ತ್ಯಮಯವಾದ ತನುವನ್ನು ಹೊಂದಿ ಅವತರಿಸುವುದಿಲ್ಲವಾದುದರಿಂದ, ಆತನ ದಯೆಯು ಯಾವಾಗ ಶಾಸ್ತ್ರವನ್ನು ದಯಪಾಲಿಸಿತೋ, ಆಗ ಶಾಸ್ತ್ರವನ್ನು ಯಥಾರ್ಥವಾಗಿ ಉಪದೇಶಿಸುವ ಆಚಾರ್ಯರು ಯಾವಾಗಲೂ ಈ ಲೋಕದಲ್ಲಿ ಪದೇ ಪದೇ ಅವತರಿಸಿ ಸಂಚರಿಸುವ ಹಾಗೆ ಮಾಡಿರುತ್ತಾನೆಂಬುದು

ಇತಿಹಾಸಗಳಲ್ಲಿ ಉಪಪಾದಿತವು. ಆದುದರಿಂದ **"ಕೃತ್ವಾ ಮರ್ತ್ಯಮಯೀಂ ತನುಮ್"** ಎಂಬುದಕ್ಕೆ ಎರಡು ವಿಧವಾದ ಅರ್ಥಗಳನ್ನು ಹೇಳಬಹುದು. ತಾನೇ ಮನುಷ್ಯಾವತಾರವನ್ನು ಹೊಂದಿ ಎಂಬುದು ಒಂದು ಅರ್ಥವು. ಇನ್ನೊಂದರ್ಥವು "ಆಚಾರ್ಯ ಶರೀರದಲ್ಲಿ ಅಂತರ್ಯಾಮಿಯಾಗಿ ತಾನೇ" ಎಂದೂ ಅರ್ಥ ಹೇಳಬಹುದು. ನಮ್ಮ ಆಚಾರ್ಯರಾದರೋ ಹಾಗಲ್ಲದೆ ಧರ್ಮಸಂಸ್ಥಾಪನೆಗಾಗಿಯೇ ಕಂಕಣಬದ್ಧರಾಗಿ ಶಿಷ್ಯರಿಗೆ ಸದುಪದೇಶವನ್ನು ಮಾಡಿ, ಉಪಾಯಾನುಷ್ಠಾನವನ್ನು ಎಸಗುವ ಹಾಗೆ ಮಾಡಿಸಿ ಅವರನ್ನು ಕೃತಕೃತ್ಯರನ್ನಾಗಿ ಮಾಡುವ ಮಹತ್ತಾದ ಕೆಲಸವನ್ನು ವಹಿಸಿರುವುದರಿಂದ ವಿಶೇಷ ಮಾನನೀಯರೆಂದು ಹೇಳಲ್ಪಟ್ಟಿತು. ಇಲ್ಲಿ ಮುಖ್ಯಾಭಿಪ್ರಾಯವೇನೆಂದರೆ ಪರಮಪುರುಷನಿಗಿಂತ ನಮಗೆ ಸಾಕ್ಷಾತ್ತಾಗಿ ಆಚಾರ್ಯರೇ ವಿಶೇಷ ಪ್ರಯೋಜನವನ್ನುಂಟು ಮಾಡುವುದರಿಂದ ಮೇಲಾದವರೆಂಬುದು. ಆ ಕಾರಣದಿಂದಲೇ **"ಅಸೌ"** ಎಂಬುದು ಈ ಭಗವಂತನಾದರೋ ಎಂದರ್ಥವಾಗುವುದರಿಂದ ಅವರಿಗಿಂತ ಸ್ವಲ್ಪ ಕಡಿಮೆ ಎಂಬ ಭಾವವನ್ನು ಸೂಚಿಸುತ್ತದೆ. ಇದಕ್ಕೆ ಕಾರಣಗಳೇನೆಂದರೆ- (೧) ಸರ್ವೇಶ್ವರನು ಯಾವುದೋ ಒಂದು ಕಾಲದಲ್ಲಿ ಮಾತ್ರ ಉಪದೇಶ ಮಾಡುವನು, ಇವರಾದರೋ ಸದಾ ಉಪದೇಶಕ್ಕಾಗಿ ಕಂಕಣಬದ್ಧರು. (೨) ಸ್ವಾಮಿಯಾದರೋ ಹೇಳಿರುವುದು ಭಗವದ್ಗೀತೆಯಲ್ಲಿನ ಹಾಗೆ ಪರಮ ಗುಹ್ಯವು, ಎಲ್ಲರೂ ಚೆನ್ನಾಗಿ ತಿಳಿಯಲಾರರು. ನಮ್ಮ ಆಚಾರ್ಯರಾದರೋ ವಿಶದವಾಗಿ **"ಪಕ್ಷೀಚ ಶಾಖಾ ನಿಲಯಂ ಪ್ರವಿಷ್ಟಃ"** ಎಂಬ ಶ್ಲೋಕದಲ್ಲಿ (ಸುಂದರ ೨೭. ೫೧) ಶ್ರೀ ವಾಲ್ಮೀಕಿ ಭಗವಾನ್ ಉತ್ಪ್ರೇಕ್ಷಿಸಿ ಹೇಳಿರುವ ಹಾಗೆ, **"ಪುನಃ ಪುನಶ್ಚೋದಯತೀವ ಹೃಷ್ಟಃ"** ಪುನ: ಪುನಃ ಶಿಷ್ಯನ ಮೇಧಾಶಕ್ತಿಯು ಗ್ರಹಿಸುವ ಹಾಗೆ ಉಪದೇಶಿಸಬಲ್ಲರು. ಪರಮಪುರುಷನು ಅದೃಶ್ಯನಾಗಿ ಇಂತಹ ಕೆಲಸವನ್ನು ಮಾಡುವದಿಲ್ಲವು. ಇತಿಹಾಸದಲ್ಲೂ ಶ್ರೀಕೃಷ್ಣ ಭಗವಾನರವರು ಅರ್ಜುನನಿಗೆ ಗೀತೋಪದೇಶವನ್ನು ಮಾಡಿದರು. ಅರ್ಜುನನು ಅವನ್ನು ಮರೆತು ಪುನಃ ಉಪದೇಶಿಸು ಎಂದು ಪ್ರಾರ್ಥಿಸಿದುದಕ್ಕೆ, **"ನೂನ ಮಶ್ರದ್ಧಧಾನೋಸಿ ದುರ್ಮೇಧಾ ಶ್ಚಾಸಿಪಾಂಡವ"** ಎಂದು ಕೋಪದಿಂದ ಹೇಳಿ ಉಪದೇಶಿಸಲಿಲ್ಲವೆಂದು ಅಶ್ವಮೇಧಿಕದಲ್ಲಿ ಹೇಳಲ್ಪಟ್ಟಿರುತ್ತದೆ; ಮತ್ತು ಈ ಆಚಾರ್ಯರು (೩) ಸತ್ಪಾತ್ರರಾದ ಶಿಷ್ಯರು ಬಂದರೆ ಸಾಕೆಂದು ಕಾದಿರುತ್ತಾರೆ. ಪರಮಪುರುಷರಾದರೋ ಎಲ್ಲೋ ಒಬ್ಬೊಬ್ಬ ಅರ್ಜುನ, ಉದ್ಧವ ಇಂತವರಿಗೆ ಮಾತ್ರ ಉಪದೇಶಿಸಿರುತ್ತಾರೆ. ಹಾಗಾದರೆ ಸರ್ವೇಶ್ವರನ ಕೃಪೆಯು ಬೇಕಾಗಿಯೇ ಇಲ್ಲವೋ? ಎಂದರೆ ಹಾಗಲ್ಲವು. ಇವರುಗಳು ಶಿಷ್ಯರಿಗೆ ಸದುಪದೇಶವನ್ನು ಮಾಡಿಸುವವನು ಹಯಗ್ರೀವನು ಎಂದೂ ಆತನೇ ಈ ಆಚಾರ್ಯರ ನಾಲಿಗೆ ತುದಿಯನ್ನೇ ಸಿಂಹಾಸನವನ್ನಾಗಿ ಮಾಡಿಕೊಂಡು, ಅವರುಗಳು ಯಥಾರ್ಥವಾದ ಉಪದೇಶವನ್ನು ಮಾಡುವರೆಂದು ಹೇಳಿರುತ್ತಾರೆ. ಈ ಆಚಾರ್ಯರುಗಳ ಕೃಪೆಯಿಲ್ಲದೆ ಸದುಪದೇಶವೂ ಉಪಾಯಾನುಷ್ಠಾನದ ಮೂಲಕ ಕೃತ್ಯಕೃತ್ಯಯೂ ಲಭಿಸಲಾರೆ

ದೆಂಬ ಭಾವವು. ಅವರುಗಳು ಸ್ವಾಮಿಯಿಂದಲೇ ಆಜ್ಞಪ್ತರಾಗಿ ಬಂದ ನಿತ್ಯಮುಕ್ತ ರಲ್ಲಿ ಒಬ್ಬರಾದುದರಿಂದ, ಅವರಲ್ಲಿ ಸಾಮಾನ್ಯ ಮಾನುಷಭಾವವು ಸರಿಯಲ್ಲವಾಗಿ, ಅವರುಗಳೇ ಈ ಚೇತನರಿಗೆ ಸಾಕ್ಷಾತ್ತಾಗಿ ನಿಶ್ರೇಯಸಪ್ರಾಪ್ತಿಗೆ ಹೇತುವಾದುದರಿಂದ ವಿಶೇಷ ಮರ್ಯಾದೆಯೂ ಕೃತಜ್ಞತೆಯೂ ಅವರಲ್ಲಿರತಕ್ಕದ್ದೆಂದು ಹೇಳಿರುತ್ತಾರೆ. ಆಚಾರ್ಯರ ವಿಶೇಷ ಪ್ರಭಾವಕ್ಕೆ ತಾನೇ ಹೇತುವೆಂದು ಗೀತೆಯಲ್ಲಿ "**ಯದ್ಯದ್ವಿಭೂತಿಮತ್ಸತ್ವಂ ಶ್ರೀಮದೂರ್ಜಿತಮೇವವಾ। ತತ್ತದೇವಾಗಚ್ಛತ್ವಂ ಮಮ ತೇಜೋಂಶಸಂಭವಮ್॥**"ಎಂದು ಹೇಳಿರುತ್ತಾರೆ. (ಗೀ. ೧೦-೪೧) ಆದರೆ ಅನೇಕರು ಜನರಿಗೆ ಉಪದೇಶಕರೆಂದು ವೇಷವನ್ನು ಹಾಕಿಕೊಂಡು ಬಂದು ಇತರರ ಅಜ್ಞಾನಕ್ಕೆ ತಮ್ಮ ಅಜ್ಞಾನವನ್ನೂ ಸೇರಿಸಿ, ಅವರಿಗೆ ನಿರತಿಶಯ ಸುಖವು ಅತಿ ದೂರವಾಗಿರುವ ಹಾಗೆ ಮಾಡುತ್ತಾರೆ. ಅಂತವರನ್ನು ತ್ಯಜಿಸಿ ತಮ್ಮ ವಿವೇಕದಿಂದ ಮಹಾ ಪ್ರಾಜ್ಞರಾದ ಆಚಾರ್ಯರನ್ನೇ ಹುಡುಕಿ ಆಶ್ರಯಿಸತಕ್ಕದ್ದು ಮುಮುಕ್ಷುವಿನ ಕರ್ತವ್ಯವು. ಅಂತಹ ಗುರುವು ಸರ್ವೋತ್ಕೃಷ್ಟವಾದ ಉಪಕಾರವನ್ನು ಮಾಡುವವ ನಾದುದರಿಂದ ವಿಶೇಷ ಗೌರವಾರ್ಹನೆಂದು ಹೇಳಲ್ಪಟ್ಟಿತು.

ಶ್ರೀ ಸಾರಸಂಗ್ರಹ ಸ್ವಾಮಿಗಳವರು "**ಆಚಾರ್ಯಸ್ಸಹರಿ ಸ್ಸಾಕ್ಷಾತ್**" "**ಯೋ ವಿಷ್ಣೋಃ ಪ್ರತಿಮಾಕಾರೇ ಲೋಹ ಭಾವಂ ಕರೋತಿಯಃ। ಗುರೌಚ ಮಾನುಷಂ ಭಾವಂ ಉಭೌನರಕಪಾತಿನೌ। ಸ್ವಯಂ ಮುಕ್ತೋ ನಿತ್ಯೋಪಿ ನಿತ್ಯಮುಕ್ತೇಶ್ವರೋಪಿಚ। ಸಾಜಾತ್ಯಂ ಭಾವಯತ್ಯೇಷಾಂ ಸೌಲಭ್ಯಾ ಯ್ಯೈವ ದೇಹಿನಾಮ್। ಸಜಾತೀಯೇನ ಗೃಹ್ಣಂತಿ ಸಜಾತೀನ್ಮೃಗ ಪಕ್ಷಿಣಃ। ಏವಂ ಮಾನುಷಭಾವೇನ ಮರ್ತ್ಯಾನ್ ಗೃಹ್ಣಾತಿ ಮಾಧವಃ। ತಸ್ಮಾತ್ಪ್ರಾಜ್ಞಸ್ಸದಾಚಾರ್ಯೇಸತ್ಸು ತತ್ತಸ್ಸ ದೃಶೇಷು ಚ। ತ್ಯಕ್ತ ಮರ್ತ್ಯ ಮತಿಶ್ಶೌರೇಃಪರಮ ಪ್ರೇಮಭಾಜನಮ್। ಮನುಜಾನೋರ್ಚಯೇತ್ಕಾಲೇ ತ್ವಜಹನ್ನಿಜ ವೈಭವಃ**" ಎಂಬ ಪ್ರಮಾಣಗಳನ್ನು ಉದಾಹರಿಸಿರುತ್ತಾರೆ.

ಸ್ವಾಮಿಯು ಯಾವಾಗ ಈ ಪ್ರಾಜ್ಞರಿಗೆ ಆಚಾರ್ಯ ವೇಷವನ್ನುಂಟು ಮಾಡಿ ದನೋ ಆ ಕಾರಣದಿಂದಲೇ ಇವರುಗಳು ವಿಶೇಷ ಪೂಜಾರ್ಹರೆಂಬುದು ಸಿದ್ಧವು. ಅಥವಾ ಆ ಆಚಾರ್ಯರ ಜಿಹ್ವೆಯಲ್ಲಿ ಯಾವಾಗ ಸರ್ವೇಶ್ವರನು ಅಂತರ್ಭೂತನಾಗಿ ದ್ದಾನೋ, ಆ ಕಾರಣದಿಂದಲೇ ಇಂತಹ ಆಚಾರ್ಯರಿಗೆ ಅಧಿಕರಾದವರು ಇಲ್ಲವೆಂ ಬುದು ಸಿದ್ಧವಾದುದೇ ಎಂಬ ಭಾವವು.

---

ಶ್ರಿಯೈ ನಮಃ
ಶ್ರೀಮತೇ ರಾಮಾನುಜಾಯ ನಮಃ
ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ

# ನಿಗಮನಾಧಿಕಾರಃ ೩೨

**ಕರಬದರಿತ ವಿಶ್ವಃ ಕಶ್ಚಿದಾಚಾರ್ಯದೃಷ್ಟ್ಯಾ**
**ಮುಷಿತನಿಖಿಲಮೋಹೋ ಮೂಲಮನ್ತ್ರಾದಿ ಭೋಗಃ ।**
**ಸಗುಣ ವಿಷಯಸಿದ್ಧ್ಯೈ ಸಂಪ್ರದಾಯಂ**
**ಪ್ರಯುಙ್ಕ್ತೇ ಸುಚರಿತ ಸಿಲಹಾರೀ ಸೂರಿಬೃನ್ದಾಭಿನನ್ದ್ಯಃ॥೭೫॥**

---

ಹಿಂದೆಯೆಲ್ಲಾ ಬಹು ವಿಶದವಾಗಿ ಶಾಸ್ತ್ರಗಳಲ್ಲಿ ಸಾರತಮವಾದ ಮೂರು ರಹಸ್ಯಗಳನ್ನು ಬಹು ವಿಶದವಾಗಿ ತಿಳಿಯಪಡಿಸಿದ್ದಾಯಿತು. ಹಿಂದೆ ಸಾರ ನಿಷ್ಕರ್ಷಾಧಿಕಾರದಲ್ಲಿ, ಶಾಸ್ತ್ರದಲ್ಲಿ ಅಸಾರ, ಸಾರಸಾರತರಗಳನ್ನು ತ್ಯಜಿಸಿ, ಸಾರತಮ ವಾದುದನ್ನು ಮಾತ್ರವೇ ತಿಳಿಸುವುದಾಗಿ ಪ್ರತಿಜ್ಞೆ ಮಾಡಿ, ಹಾಗೆ ಸಾರತಮವಾದುದು ರಹಸ್ಯತ್ರಯ ಜ್ಞಾನವೆಂದು ಹೇಳಿ, ಆ ಸಾರತಮವನ್ನು ಚನ್ನಾಗಿ ಗ್ರಹಿಸುವುದಕ್ಕಾಗಿ ವಿವರಣ ರೂಪದಲ್ಲಿ ಹಿಂದೆ ಹೇಳಿದ ೩೨ ಅಧಿಕಾರಗಳ ಮೂಲಕವಾಗಿ ಶಾಸ್ತ್ರದಲ್ಲಿನ ಅಮೋಘಾರ್ಥವನ್ನೆಲ್ಲಾ ಉಪದೇಶಿಸಿದುದು ಆಯಿತು. ಹಾಗೆಯೇ ಗೀತೆಯಲ್ಲೂ ಅರ್ಜುನನಿಗೆ ಲೀಲಾ ಸಾರಥಿಯೂ ಗುಹ್ಯತಮವಾದುದನ್ನೇ ತಿಳಿಸುವುದಾಗಿ ಹೇಳಿ ಅದನ್ನೇ ಅವರೂ ವಿವರಿಸಿ ಹೇಳಿದರು. ಇವುಗಳಿಗೆ ಸಾರತಮ ಗುಹ್ಯತಮವೆಂದು ವಿಶೇಷಿಸಿ ಹೇಳಿರುವುದು ಏತರಿಂದ ಎಂದರೆ ಯಾವ ಶಾಸ್ತ್ರವು ಸಾಕ್ಷಾತ್ತಾಗಿ ಪರಮನಿಶ್ಶ್ರೇಯಸ್ಸನ್ನು ಹೊಂದಲು ಸಾಧನವೋ, ಅದು ತಮ ಪ್ರತ್ಯಯದಿಂದ ಬೋಧಿತ ವೆಂದು ಭಾವಿಸತಕ್ಕದ್ದಾಗಿರುತ್ತದೆ. ಆಗಲಿ, ಹೀಗಿರುವಾಗ ಈ ನಿಗಮನಾಧಿಕಾರದ ಪ್ರಯೋಜನವೇನು? ಎಂದರೆ ಹಿಂದೆ ಹೇಳಿದುದರ ಸಾರಾಂಶ ಸರಣಿಯನ್ನು ವಿಶದ ವಾಗಿ ತೋರ್ಪಡಿಸಿ ಅಧಿಕಾರಾಧಿಕಾರಗಳಿಗೆ ಇರುವ ಪರಸ್ಪರ ಸಂಬಂಧವನ್ನು ತೋರ್ಪಡಿಸಿ, ಅವುಗಳೆಲ್ಲಾ ಸಙ್ಗ್ರಹವಾಗಿ ಸ್ಮೃತಿಪಥಕ್ಕೆ ಗೋಚರವಾಗುವದು ಅತ್ಯಾವಶ್ಯಕವಾದುದರಿಂದ ಅದನ್ನು ತಿಳಿಸಿ, ಈಅಮೋಘಗ್ರಂಥವನ್ನು ಮುಗಿಸು ತ್ತಾರೆ. ಸಙ್ಗ್ರಹವಾಗಿ ಒಂದೊಂದು ಪದಗಳಮೂಲಕವೇ ಹಿಂದಿನ ಅಧಿಕಾರಾರ್ಥ ಗಳನ್ನು ಸೂಚಿಸುತ್ತಾರೆ. ಇಷ್ಟುಮಾತ್ರವೇ ಈನಿಗಮನದ ಪ್ರಯೊಜನಾಂಶವೇ? ಎಂದರೆ, ಈಸಾಗತಮಾಂಶದ ಜ್ಞಾನದಮೂಲಕ ಉಂಟಾಗುವ ಪ್ರಯೋಜನವು

ಮಹತ್ತಾಗಿ ನಿರತಿಶಯವಾದುದರಿಂದ ಈ ಗ್ರಂಥದಮಹಾತ್ಮ್ಯೆಯು ಇಷ್ಟೆಂದು ಹೇಳಲು ಸಾಧ್ಯವಿಲ್ಲವೆಂಬ ಭಾವವನ್ನು ಸೂಚಿಸುವದಕ್ಕಾಗಿಯೂ ಎಂದು ಭಾವಿಸ ಬಹುದು. ಇದರಲ್ಲಿ ಹೇಳಿರುವ ಮಾರ್ಗವೇಪರಮಪದಾರೋಹಣೆಗಾಗಿ ಏರ್ಪಡಿಸಿದ ಸುಲಭವಾದ ಸೋಪಾನವೆಂದು ಭಾವಿಸತಕ್ಕದ್ದು. ಈಶ್ಲೋಕದಲ್ಲಾದರೋ ಬಹು ಸೂಕ್ಷ್ಮವಾಗಿ ಈ ಗ್ರಂಥದ ನಾಲ್ಕು ಭಾಗಗಳ ಅರ್ಥಗಳನ್ನು ಸಂಗ್ರಹಿಸುತ್ತಾರೆ.- ೧ರಿಂದ ಪರಿಪೂರ್ಣಬ್ರಹ್ಮಾನುಭವವೂ ಸೇರಿ ೨೨ಅಧಿಕಾರಗಳು **ಅರ್ಥಾನುಶಾಸನ ಭಾಗವು.** ಅಲ್ಲಿಂದ ೪ಅಧಿಕಾರಗಳು ಪ್ರಭಾವರಕ್ಷಾಧಿಕಾರವೂ ಸೇರಿ ಸ್ಥಿರೀಕರಣ ಭಾಗವು. ಮುಂದಕ್ಕೆ ಮೂಲಮನ್ತ್ರದ್ವಯ, ಚರಮಶ್ಲೋಕಾಧಿಕಾರಗಳೂ ಮೂರೂ **ಪದವಾಕ್ಯಯೋಜನಾಭಾಗವೆನಿಸುತ್ತವೆ.** ಆಮೇಲೆ ಆಚಾರ್ಯಕೃತ್ಯ ಶಿಷ್ಯಕೃತ್ಯ, ನಿಗಮನಾಧಿಕಾರಗಳು, ನಾಲ್ಕನೆಯ, **ಸಂಪ್ರದಾಯಪ್ರಕ್ರಿಯಾಭಾಗವು.** ಇವು ಗಳಸಙ್ಗ್ರಹಾರ್ಥಗಳು ಇಲ್ಲಿ ಸೂಚಕವು.

**ಕಶ್ಚಿತ್**-ಯಾವನೋಒಬ್ಬನು, **ಆಚಾರ್ಯದೃಷ್ಟ್ಯಾ**- "ದೇಶಿಕೋಮೇದ ಯಾಳು" ಎಂಬಲ್ಲಿ ಹೇಳಿರುವಹಾಗೆ, ಪರಮದಯಾಳುವಾದ ಆಚಾರ್ಯರ ಕಟಾಕ್ಷದಿಂದ ಎಂದರೆ ಅದರ ಮಹಿಮೆಯಿಂದ, ಮೊದಲು **ಮುಷಿತ ನಿಖಿಲಮೋಹಃ, ಮುಷಿತ** ಹೋಗಲ್ಪಟ್ಟ ಸಮಸ್ತಮೋಹವುಳ್ಳವನಾಗಿ, ಅನಂತರ, **ಕರಬದರಿತ ವಿಶ್ವಃ**-ಕೈಯಲ್ಲಿಟ್ಟ ಬೋರೆಹಣ್ಣಿನಹಾಗೆ ಮಾಡಲ್ಪಟ್ಟ, ಎಂದರೆ ಕೈಯಲ್ಲಿರುವ, ಬೋರೆಹಣ್ಣು ಹೇಗೆವ್ಯಕ್ತವೋಹಾಗೆ ಆಚಾರ್ಯೋಪದೇಶದಿಂದವ್ಯಕ್ತಪಡಿಸಲ್ಪಟ್ಟ **ವಿಶ್ವಃ** -ಪ್ರಪಂಚ ತತ್ವಗಳನ್ನುಳ್ಳ ಪ್ರಪಂಚದಲ್ಲಿರುವ ಚಿತ್ ಅಚಿತ್ ಈಶ್ವರ, ಹೀಗೆ ತತ್ವತ್ರಯಗಳ ಸ್ವರೂಪಾದಿಗಳನ್ನು ವ್ಯಕ್ತವಾಗಿತಿಳಿದ, **ಮೂಲ ಮನ್ತ್ರಾದಿ ಭೋಗಃ**-ಮೂಲಮನ್ತ್ರ ಮೊದಲಾದವುಗಳ ಅರ್ಥಾನುಸಂಧಾನರೂಪ ಆನಂದ ವನ್ನು ಹೊಂದಿದವನಾಗಿ, ಆದಿಪದದಿಂದ ದ್ವಯಚರಮಶ್ಲೋಕಗಳ ಅರ್ಥಾನು ಸಂಧಾನವು ಹೇಳಲ್ಪಟ್ಟಿತು; "**ಸಗುಣ ವಿಷಯಸಿನ್ಧೌ**"-ಒಳ್ಳೇಶಿಷ್ಯಗುಣಪೂರ್ತಿಗೆ ಆಕರನಾಗಿರುವ ಆಶ್ರಿತನಲ್ಲಿ, **ಸಂಪ್ರದಾಯಂ**-ತಾನುಆಚಾರ್ಯರಿಂದ ಗ್ರಹಿಸಿದ ಸಂಪ್ರದಾಯಾರ್ಥವನ್ನು, **ಪ್ರಯುಂಜ್ವನ್**-ಕೊಡುತ್ತಾ ಎಂದರೆ ಉಪದೇಶವನ್ನು ಮಾಡುತ್ತಾ, **ಸುಚರಿತ ಸಿಲಹಾರೀ**-ಮಹಾನುಭವರಾದ ನಡತೆಗಳೆಂಬ ಚೆಲ್ಲಿರುವ ಧಾನ್ಯಗಳನ್ನು, ಎಂದರೆ ಭತ್ತವನ್ನು ಆರಿಸಿಕೊಂಡವನಾಗಿ, **ಸೂರಿಬೃಂದಾಭಿ ವಂದ್ಯಃ**-ದಿವ್ಯವೈಕುಂಠದಲ್ಲಿರುವ ನಿತ್ಯಸೂರಿಗಳ ಸಮೂಹದಿಂದ ಕೊಂಡಾಡಲ್ಪಡುವ ನಾಗುವನು; ಎಂದರೆ ಅವರುಗಳಿಂದ ಸ್ವಾಗತಿಸಲ್ಪಟ್ಟು ಆತನನ್ನು ನಿತ್ಯಸೂರಿಗಳು ಶ್ಲಾಘಿಸುವರು ಎಂಬ ಭಾವವು.

**ಉಪಪಾದನೆಯು**-ಹೀಗೆ ತನಗೆ ಸದಾಚಾರ್ಯರಿಂದ ಅನುಗ್ರಹಿಸಲ್ಪಟ್ಟು ಬಂದ ಉಪದೇಶವನ್ನು ಸತ್ಪಾತ್ರನಾದ ಶಿಷ್ಯನನ್ನು ಹುಡಿಕಿ, ಆತನಿಗೆ ಉಪದೇಶಿಸಿ ಬಿಟ್ಟು, ತಾನು ಸುಕೃತಪರಿಪಾಕದಲ್ಲಿ ಆ ಸದಾಚಾರ್ಯರ ಸನ್ನಿಧಿಯಲ್ಲಿ ನಡೆಸಿದ

ಉಪಾಯಾನುಷ್ಠಾನದಿಂದ ಕೃತಕೃತ್ಯನಾಗಿ ದಿವ್ಯವೈಕುಂಠವನ್ನು ಸಾರಿ, ನಿತ್ಯಸೂರಿಗಳಿಂದ ಸ್ವಾಗತಿಸಲ್ಪಟ್ಟು ಶ್ಲಾಘಿಸಲ್ಪಡುವನು ಎಂದು ನಿಗಮನಮಾಡಿ ಹೇಳಿದರು. ಹಾಗೆ ಹೋಗಿಸೇರುವವನು ಎಲ್ಲೋ ಒಬ್ಬೊಬ್ಬನೆಂದು **ಕಶ್ಚಿತ್** ಎಂಬ ಪ್ರಯೋಗವು. ಹಾಗೆಯೇ ಗೀತೆಯಲ್ಲಿ **"ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿಸಿದ್ಧಯೇ। ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂವೇತ್ತಿ ತತ್ವತಃ"**(ಗೀ ) ಎಂಬಲ್ಲಿ ಸಾವಿರಕ್ಕೆಲ್ಲೋ ಒಬ್ಬೊಬ್ಬರು ಸಿದ್ಧಿಹೊಂದಲು ಉಪಾಯಾನುಷ್ಠಾನವನ್ನು ಮಾಡುವರು ಎಂದರ್ಥವಾಗಬಹುದು, ಅಥವಾ ಹೀಗೆ ಗುರುವಿನಿಂದ ಉಪದೇಶಹೊಂದಿ ಈತನಿಗಾಗಿ ಆಚಾರ್ಯರು ಮಾಡುವ ಉಪಾಯಾನುಷ್ಠಾನವಲ್ಲೇ ಶಿಷ್ಯನು ಯಾವನೇಆಗಲಿ ವರ್ಣಾಶ್ರಮಾದಿನಿಯಮವೇನೂ ಇಲ್ಲದೆ ಈ ಪ್ರಪದನ ಮೂಲಕ ಯಾರೇಆಗಲಿ ಮುಕ್ತಿಯನ್ನು ಹೊಂದಬಹುದು ಎಂಬ ಭಾವಕ್ಕಾಗಲಿ **ಕಶ್ಚಿದೆಂಬ** ಪ್ರಯೋಗವಾಗಿರಬಹುದು. ಆದರೆ ಶೂದ್ರಾದಿಗಳು ಸಾಕ್ಷಾತ್ತಾಗಿ ಉಪದೇಶಕ್ಕೆ ಅನರ್ಹರಾದುದರಿಂದ ಉತ್ತಮ ವರ್ಣನ ಆಚಾರ್ಯರು ಉಪದೇಶವನ್ನು ಹೊಂದುವಾಗ ಉಪನಿಷದಾದಿ ನಿಷೇಧಿಸಲ್ಪಟ್ಟ ಭಾಗಗಳನ್ನು ಬಿಟ್ಟು ಮಿಕ್ಕ ಉಪದೇಶವನ್ನು ಸಂಗ್ರಹಿಸಬಹುದೆಂಬುದು ಸೂಚಿಸಲ್ಪಟ್ಟಿತು.

ಇಂತಹ ನಿಃಶ್ರೇಯಸ್ಸುಂಟಾಗಬೇಕಾದರೆ ಸದಾಚಾರ್ಯರ ಕಟಾಕ್ಷವೀಕ್ಷಣವಿಲ್ಲದೆ ದೊರೆಯುವುದಿಲ್ಲವೆಂದು **"ಆಚಾರ್ಯವತ್ತಯಾ ಮುಕ್ತೌ"** ಎಂಬಲ್ಲಿ ಹೇಳಿಧ ಅಭಿಪ್ರಾಯವು ಸಙ್ಗ್ರಹೀತವು. ಇಂತಹ ಸದಾಚಾರ್ಯರಿಂದ ಉಂಟಾಗುವ ಮಹತ್ತಾದ ಉಪಕಾರಗಳು ಯಾವುವೆಂದರೆ ತಿಳಿಸುತ್ತಾರೆ- (೧) **ಕದಬದರಿತವಿಶ್ವಃ**-ಬೋರೇಹಣ್ಣನ್ನು ಅಂಗೈಯ್ಯಲ್ಲಿಟ್ಟುಕೊಂಡರೆ ಹೇಗೆ ಅದು ಸ್ಫುಟವಾಗಿ ವ್ಯಕ್ತವಾಗುತ್ತದೋ, ಹಾಗೆ ಈ ಜಗತ್ತಿನಲ್ಲಿರುವ ತತ್ತ್ವತ್ರಯಗಳ ಸ್ವರೂಪ ಸ್ವಭಾವಾದಿಗಳನ್ನು ಅವುಗಳಿಗಿರುವ ಪರಸ್ಪರ ಸಂಬಂಧವನ್ನೂ ಬಹು ಸ್ಫುಟವಾಗಿ ಆಚಾರ್ಯೋಪದೇಶದಿಂದ ತಿಳಿಯುವನು- **ಕದಬದರಿತ** ಎಂಬ ಪ್ರಯೋಗವು **"ಪಾಣಾವಾಮಲಕಂ ಯಥಾ"** ಎಂದರೆ ಅಂಗೈಯ್ಯಲ್ಲಿ ನೆಲ್ಲೀಕಾಯಿಯನ್ನು ಇಟ್ಟುಕೊಂಡರೆ ಅದು ಹೇಗೆ ಸ್ಪಷ್ಟವಾಗಿ ತೋರುತ್ತದೋ ಹಾಗೆ ವಿಶದವಾಗಿ ಆಚಾರ್ಯರು ಉಪದೇಶಿಸುವರೆಂಬ ಭಾವವು. ಇದಕ್ಕೆ **ಕರತಲಾಮಲಕ**ವೆಂದು ಹೇಳುತ್ತಾರೆ. ಆಮಲಕವೆಂದರೆ ನೆಲ್ಲಿಕಾಯಿಯು. **" ತತಃ ಪಶ್ಯತಿಧರ್ಮಾತ್ಮಾ ತತ್ಸರ್ವಂ ಯೋಗಮಾಸ್ಥಿತಃ। ಪುರಾಯತ್ತತ್ರ ನಿರ್ವೃತ್ತಂ ಪಾಣಾವಾಮಲಕಂ ಯಥಾ "** ಎಂಬುದು ಇಲ್ಲಿ ಅನುಸಂಧೇಯವು. ಈ **ಕದಬರಿತವಿಶ್ವಃ** ಎಂಬುದರಿಂದ ಅರ್ಥಾನುಶಾಸನ ಭಾಗವು, ಅವರಲ್ಲಿ ಮುಖ್ಯವಾಗಿ ತತ್ವತ್ರಯಾಧಿಕಾರದೊಂದಿಗೆ ಮೊದಲಿನ ಆರು ಅಧಿಕಾರಗಳೂ ಸೂಚಿತವು. ಈ ಆರು ಅಧಿಕಾರಗಳಿಂದುಂಟಾಂಗುವ ಪ್ರಯೋಜನವೇನೆಂದರೆ (೨) **ಮುಷಿತನಿಖಿಲಮೋಹ**ರಾಗುವರು. ಮೋಹಗಳು ಮುಖ್ಯವಾಗಿ ಮೂರು. ೧) ದೇಹಾತ್ಮಭ್ರಾಂತಿಯು, ೨) ಸ್ವತಂತ್ರಾತ್ಮಭ್ರಾಂತಿಯು,

೩) ಜೀವಪರಮಾತ್ಮೈಕ್ಯ ಭ್ರಾನ್ತಿಯು, ಇವುಗಳೆಲ್ಲಾ ಉಪದಿಷ್ಟವಾದ ತತ್ವತ್ರಯ ಜ್ಞಾನ, ಪರದೇವತಾ ಪಾರಮಾರ್ಥ್ಯ ಜ್ಞಾನಗಳಿಂದ ಉಂಟಾಗುತ್ತದೆಂದು ಅರ್ಥಾನುಶಾಸನ ಭಾಗದಲ್ಲಿ ಹೇಳಲ್ಪಟ್ಟಿರುತ್ತದೆ. ಇದೂ ಅಲ್ಲದೆ ಜಗನ್ಮಿಥ್ಯಾವೆಂದೂ ಪರಮಾತ್ಮನು ನಿರ್ಗುಣನೆಂದು ಹೇಳುವ ಅನ್ಯಥಾ ವಿಪರೀತ ಜ್ಞಾನಗಳೂ ತೊಲಗುತ್ತವೆ. ಮತ್ತು ತನಗೆ ಸದ್ಗತಿಯನ್ನು ಕೊಡುವ ಉಪಾಯಾನುಷ್ಠಾನದ ವಿಷಯದಲ್ಲಿರುವ ಸಂದೇಹಾದಿಗಳೂ ಆಚಾರ್ಯೋಪದೇಶದಿಂದ ದೂರೀಕೃತವಾಗುವುವು. ಇವು ಸ್ಥಿರೀಕರಣ ಭಾಗದ ನಾಲ್ಕು ಅಧಿಕಾರಗಳಲ್ಲಿ ಉಪಪಾದಿತವು; ಹೀಗೆ ಆಚಾರ್ಯಕೃಪೆಯಿಂದ ಇಂತಹ ಭ್ರಮವಿಪ್ರಲಂಬಾದಿಗಳು ಮಾಯವಾಗುವುವೆಂಬ ಭಾವವು. (೩) ಮೂರನೆಯ ಪ್ರಯೋಜನವನ್ನು ಹೇಳುತ್ತಾರೆ– **ಮೂಲಮಂತ್ರಾದಿಭೋಗೀ**–ರಹಸ್ಯತ್ರಯಗಳ ಅರ್ಥಾನುಸಂಧಾನದಲ್ಲಿ ಅಭಿರುಚಿಯುಳ್ಳವನಾಗುವನು; ಇವರಿಂದ ಮಂತ್ರಗಳ ಪದವಾಕ್ಯ ಯೋಜನಾ ಭಾಗದಲ್ಲಿ ಹೇಳಿರುವ ಸಕಲ ಮಂತ್ರಾರ್ಥಗಳೂ ಹೇಳಲ್ಪಟ್ಟವು. ೪) ನಾಲ್ಕನೆಯ ಮುಖ್ಯ ಪ್ರಯೋಜನವನ್ನು ಉತ್ತರಾರ್ಧದಿಂದ ಹೇಳುತ್ತಾರೆ–**ಸಗುಣವಿಷಯಸಿಂಧೌ** ಎಂಬ ಪಾಠವನ್ನು ಸಾರಸಂಗ್ರಹಾಚಾರ್ಯರು ಪರಿಗ್ರಹಿಸಿರುತ್ತಾರೆ; ಇತರರು, **ಸಗುಣವಿಷಯಸಿದ್ಧೌ** ಎಂಬ ಪಾಠವನ್ನು ಅವಲಂಬಿಸಿರುತ್ತಾರೆ. ಸಗುಣಗಳ ವಿಷಯಕ್ಕೆ ಸಮುದ್ರಪ್ರಾಯನಾದ ಶಿಷ್ಯನಲ್ಲಿ ಎಂದು ಸಿಂಧೌ ಎಂಬ ಪಾಠವನ್ನು ಹೇಳಬಹುದು. ಎಂತಹ ಗುಣಗಳು ಶಿಷ್ಯನಲ್ಲಿರತಕ್ಕದ್ದೆಂಬುದು ಆಚಾರ್ಯ, ಶಿಷ್ಯ ಕೃತ್ಯಾಧಿಕಾರಗಳಲ್ಲೂ "**ಸದ್ಬುದ್ಧಿಸ್ಸಾಧುಸೇವೀ**" ಎಂಬ ಶ್ರೀದೇಶಿಕರವರ ನ್ಯಾಸವಿಂಶತಿಯ ಎರಡನೆಯ ಶ್ಲೋಕದಲ್ಲೂ ಉಪಪಾದಿತವು. ಇನ್ನೊಂದು ಪಾಠವಾದ **ಸಗುಣವಿಷಯೆಸಿದ್ಧೌ**-ಶಿಷ್ಯನಿಗೆ ಯೋಗ್ಯವಾದ ಸಕಲ ಸದ್ಗುಣಗಳನ್ನುಳ್ಳ ಸತ್ಪಾತ್ರನಾದ ಶಿಷ್ಯನೋ ಪುತ್ರನೋ ಪ್ರಾಪ್ತವಾಗಲಿಕ್ಕಾಗಿ, **ಸಂಪ್ರದಾಯಂ ಪ್ರಯುಙ್ಕ್ತೇ**-ಗುರುಪರಂಪರಾಧಿಕಾರದಲ್ಲಿ ಪ್ರದರ್ಶಿಸಲ್ಪಟ್ಟ ಆಚಾರ್ಯನು ಶಿಷ್ಯನಿಗೆ ಉಪದೇಶಿಸುವ ಸಂಪ್ರದಾಯವನ್ನನುಸರಿಸಿ ಮಂತ್ರಾರ್ಥಗಳನ್ನು ಶಿಷ್ಯನಿಗೆ ಕೊಡುವವನಾಗಿ, ಉಪದೇಶಿಸುವವನಾಗಿ, **ಸುಚರಿತಶಿಲಹಾರೀ**–ತಮ್ಮ ಆಚಾರ್ಯರಲ್ಲಿ ಕಂಡ ಶೋಭನಕರವಾದ ಅನುಷ್ಠಾನಗಳನ್ನು, "**ಸಂವ್ಯಾಹೃತಾನಿ ಮಹತಾಂ ಸುಕೃತಾನಿ ತತಸ್ತತಃ। ಸಂಚಿನ್ವನ್ ಧೀರ ಆಸೀತ ಸಿಲಹಾರೀ ಸಿಲಂಯಥಾ**" ಎಂದರೆ ಮಹಾನುಭಾವರಲ್ಲಿರುವ ಸುಚರಿತಗಳೆಂದು ಬೋಧಿಸಲ್ಪಟ್ಟಿರುವವುಗಳನ್ನು ಅವಸರವರುಗಳಿಂದ ಆರಿಸಿ ತೆಗೆದುಕೊಂಡು, ಪ್ರಾಜ್ಞತೆಯಿಂದ ರಮಿಸುವವನಾಗಿ ಇರತಕ್ಕದ್ದು; ಹೇಗೆಂದರೆ ವನದಲ್ಲಿ ಧಾನ್ಯವನ್ನು ಆರಿಸುವವನ ಹಾಗೆ ಎಂದು ದೃಷ್ಟಾಂತವು ಹೇಳಲ್ಪಟ್ಟಿತು" ಎಂಬಲ್ಲಿ ಹೇಳಿರುವ ಹಾಗೆ ಉತ್ತರಕೃತ್ಯಾಧಿಕಾರ, ಸ್ವನಿಷ್ಠಾಭಿಜ್ಞಾನಾಧಿಕಾರ, ಪುರುಷಾರ್ಥಕಾಷ್ಠಾಧಿಕಾರ, ಸ್ಥಾನವಿಶೇಷಾಧಿಕಾರಗಳಲ್ಲಿ ಹೇಳಿರುವ ಹಾಗೆ ಪ್ರವೃತ್ತಿಗಳನ್ನುಳ್ಳವನಾಗಿ ಎಂಬ ಭಾವವು; ಅನಂತರ **ಸೂರಿಬೃಂದಾನುವಂದ್ಯಃ**- ವೈಕುಂಠದಲ್ಲಿರುವ ನಿತ್ಯಸೂರಿ

ಗಳಿಗೆ ಅಭಿಮುಖನಾಗಿ ಹೋಗಿ ಅವರಿಂದ ಸತ್ಕರಿಸಲ್ಪಡುವನು ; ಇದರಿಂದ ನಿರ್ಯಾಣ, ಗತಿಚಿಂತನ, ಪರಿಪೂರ್ಣ ಬ್ರಹ್ಮಾನುಭವಾಧಿಕಾರಗಳ ಅರ್ಥಗಳು ಸಂಗ್ರಹಿಸಲ್ಪಟ್ಟವು. **ಈ ಸೂರಿಬೃಂದಾನುವಂದ್ಯಃ** ಎಂಬ ಪ್ರಯೋಗವು, ಶ್ರೀ ನಮ್ಮಾಳ್ವಾರ್ರವರ ತಿರು ೧೦. ೯ ಪತ್ತಿನಲ್ಲಿ ಹೇಳಲ್ಪಟ್ಟಿರುವ **" ವೈಗುನ್ದಂ ಪ್ರಗುದುಲವುಮ್ ವಾಶಲಿಲ್ ವಾನವರ್ । ವೈಗುನ್ದನ್ರಮರಿಮುರಿಮುಡಿಡವಪ್ಪುಕದೆನ್ರು । ವೈಗುನ್ದತ್ತಮರರು ಮುನಿವರುಮ್ ವಿಯನ್ದನರ್ ವೈಗುನ್ದಂ ಪುಗುವದು ಮಣ್ಣವರ್ ವಿದಿಂಬೇ "** ಎಂದರೆ ಈ ಪ್ರಪನ್ನರು ನಿರ್ಯಾಣವನ್ನು ಹೊಂದಿ ಅರ್ಚಿರಾದಿ ಗತಿಯಲ್ಲಿ ಅಲ್ಲಲ್ಲಿ ಕಾದುಕೊಂಡಿರುವ ಆತಿವಾಹಿಕರಿಂದ ಸನ್ಮಾನಿಸಲ್ಪಟ್ಟು ಅವರು ತೋರಿಸಿದ ಮಾರ್ಗದಲ್ಲಿ ಹೋಗಿ ಕಡೆಗೆ ಶ್ರೀ ವೈಕುಂಠವನ್ನು ಪ್ರವೇಶಿಸುವಾಗ ದ್ವಾರದಲ್ಲಿ ಕಾಯುಕೊಂಡಿರುವ ನಿತ್ಯಸೂರಿಗಳು, ಶ್ರೀ ವೈಕುಂಠನಾಥನಿಗೆ ತುಂಬಾ ಪ್ರಿಯರಾದ ನೀವು ನಮಗೆ ಉದ್ದೇಶ್ಯರಾದುದರಿಂದ ಹೀಗೆ ದಯಮಾಡಿಸಬೇಕೆಂದು ಹೇಳಿ ಸಂತೋಷಪಡುವರು ; ಹೀಗೆ ಶ್ರೀ ವೈಕುಂಠಕ್ಕೆ ಬಂದು ಕೈಂಕರ್ಯಪರರಾಗಿಯೂ ಪರಿಪೂರ್ಣ ಬ್ರಹ್ಮಾನುಭವವನ್ನು ಮಾಡುವವರಾಗಿಯೂ ಈ ಮುಕ್ತರುಗಳು, ಹಿಂದೆ ವಿಷಯಪ್ರವಣರಾಗಿದ್ದವರು ಈಗ ವೈಕುಂಠಕ್ಕೆ ಬಂದಿರುವರು. ಇದು ಭೂಲೋಕದಲ್ಲಿರುವವರ ಒಂದು ಪರಮಸುಕೃತವಲ್ಲವೇ ಎಂದು ಅವರು ಆನಂದಪಡುವರೆಂಬುದು ತಾತ್ಪರ್ಯವು " ಎಂಬುದನ್ನು , ಅದರ ಮುಂದಿನ ಪಾಶುರದಲ್ಲಿ ಅವರುಗಳಿಗೆ ಯಾವ ಯಾವ ಸತ್ಕಾರಗಳು ಅಲ್ಲಿ ದೊರಕುತ್ತವೆ ಎಂಬುದನ್ನೂ ಸ್ಮರಿಸುವ ಹಾಗಿ ಮಾಡುತ್ತದೆ. ಹಾಗೆಯೇ ಪುರುಷಸೂಕ್ತದ **" ತೇಹ ನಾಕಂ ಮಹಿಮಾನಸ್ಸಚನ್ತೇಯತ್ರ ಪೂರ್ವೇಸಾಧ್ಯಾಸ್ಸನ್ತಿದೇವಾಃ "** (ಪುರುಷ ಸೂಕ್ತ) ಎಂದರೆ ಯಾವ ವೈಕುಂಠದಲ್ಲಿ ಮುಂದಿನಿಂದಲೂ ಇರುವ ನಿತ್ಯಸೂರಿಗಳಿರುವರೋ, ಆ ದಿವ್ಯ ವೈಕುಂಠವನ್ನು ಆ ಉಪಾಸಾನುಷ್ಠಾನ ಮಾಡಿದ ಪ್ರಪನ್ನರು ಆತಿವಾಹಕರಿಂದಲೂ ನಿತ್ಯಸೂರಿಗಳಿಂದಲೂ ಪೂಜಸಲ್ಪಟ್ಟವರಾಗಿ, ನಿತ್ಯಮುಕ್ತರ ಗುಂಪನ್ನು ಹೋಗಿ ಸೇರುವರು " ಮತ್ತು **" ತದ್ವಿಪ್ರಾಸೋ ವಿಪನ್ಯವೋ ಜಾಗೃವಾಂಸಃ ಸಮಿಂಧತೇ ವಿಷ್ಣೋರ್ಯತ್ಪರಮಂಪದಮ್ "** ಎಂದರೆ " ಮಹಾಪ್ರಾಜ್ಞರಾಗಿಯೂ, ಜ್ಞಾನಚ್ಯುತಿಯಿಲ್ಲದೆ ಜಾಗರೂಕರಾಗಿರುವ ನಿತ್ಯಸೂರಿಗಳು, ವಿಷ್ಣುವಿನ ಯಾವ ಪರಮಪದವೋ, ಅದನ್ನು ಮತ್ತು ವೈಕುಂಠಪತಿಯನ್ನು ಸ್ತೋತ್ರಮಾಡುತ್ತಾ ಆನಂದಿಸುವರು " ಇತ್ಯಾದಿ ಶ್ರುತಿಗಳನ್ನು ಜ್ಞಾಪಕಕ್ಕೆ ತರುತ್ತದೆ. ||೭೫||

ಮೇಲೆ ಸಙ್ಗ್ರಹ ಶ್ಲೋಕದಲ್ಲಿ ಹೇಳಿರುವುದನ್ನೇ ವಿವರಿಸಿ, ಹಿಂದೆ ಉಪೋದ್ಘಾತಾಧಿಕಾರ ಮೊದಲು ಶಿಷ್ಯಕೃತ್ಯಾಧಿಕಾರದಿಂದ ಮುಗಿಸಿ ಹೇಳಿದುದನ್ನೇ ನಿಗಮನ ರೂಪದಲ್ಲಿ ಮುಂದೆ ತಿಳಿಸುತ್ತಾರೆ.–

**ಮೇಲೆ ಶ್ಲೋಕದಲ್ಲಿ ಸಂಗ್ರಹಿಸಿದುದನ್ನೇ ನಿಗಮನದಲ್ಲಿ ಸ್ವಲ್ಪ ವಿವರಿಸುತ್ತಾರೆ- ಇಪ್ಪಡಿ**–ಈಗ ತಾವು ಈ ೩೦ ಅಧಿಕಾರಗಳಲ್ಲಿ ಉಪಪಾದಿಸಿದ ರೀತಿ

ಏವಂ ಶ್ಲೋಕೇ ಸಂಗೃಹೀತಂ ವಿಸ್ತರೇಣಾಹ

**ಇಪ್ಪಡಿ, ಜೀವಾತ್ಮಾ ಸೂರಿಗಳೋಡೊಕ್ಕ ಭಗವದನುಭವ ರಸತ್ತುಕ್ಕು ಸ್ವರೂಪಯೋಗ್ಯನಾಯವೈತ್ತು, ಅನಾದಿಕಾಲಮ್ ಇಳನ್ದೋರಳವಿಲ್ಪುರಿನ್ದು ಸದಾಚಾರ್ಯಸಂಬಂಧಮುಂಡಾಯ್, ತತ್ವಹಿತಙ್ಗಳೈಯರಿಯುತ್ತುಡಙ್ಗನ ಪಡಿಯುಮ್, (೨) ಇವೈಯರಿವಿಕ್ಕುಮ್ ಪ್ರಮಾಣಙ್ಗಳಿಲ್ ರಹಸ್ಯತ್ರಯಂ ಸಾರತಮಮಾನಪಡಿಯುಮ್, (೩) ಇವತ್ತೈಕೊಣ್ಡರಿಯುಮ್ ಅರ್ಥಙ್ಗಳಿಲ್ ಈ ಶೇಶಿತವ್ಯಙ್ಗಳಿನುಡೈಯ ಶರೀ**

---

ಯಲ್ಲಿ, **ಜೀವಾತ್ಮಾ**-ಇಲ್ಲಿನ ಬುದ್ಧಜೀವನು, **ಸೂರಿಗಳೋಡೊಕ್ಕ**-ಮುಕ್ತಿಯನ್ನು ನಿತ್ಯಸೂರಿವರ್ಗಕ್ಕೆ ಸಮನಾಗಿ ಅವರ ಗೋಷ್ಠಿಯೊಂದಿಗೆ ಸೇರಿ, **ಭಗವದನುಭವ ರಸತ್ತುಕ್ಕು**-ಪರಿಪೂರ್ಣ ಬ್ರಹ್ಮಾನುಭವರೂಪ ಆನಂದಕ್ಕೆ, **ಸ್ವರೂಪಯೋಗ್ಯನಾಯ್‌ವೈತ್ತು**-ಪ್ರಕೃತಿವಿಯುಕ್ತ ಪರಿಶುದ್ಧ ಸ್ವರೂಪವನ್ನು ಹೊಂದಲು ಯೋಗ್ಯನಾಗಿ ಮಾಡಿಕೊಂಡು, **ಅನಾದಿಕಾಲಮ್ ಇಳನ್ದು**-ಅನಾದಿ ಕಾಲದಿಂದಲೂ ಇದ್ದುಕೊಂಡು, ಓರಳವಿಲ್-ಒಂದು ಕಾಲದಲ್ಲಿ, **ಪುರಿನ್ದು**-ಸರ್ವೇಶ್ವರನನ್ನು ಬಿಟ್ಟಗಲಿ, ಅನಂತರ, **ಸದಾಚಾರ್ಯ ಸಂಬಂಧಮುಂಡಾಯ್**-ಸದಾಚಾರ್ಯರ ಸಂಬಂಧವು ಸರ್ವೇಶ್ವರ ಕಟಾಕ್ಷದಿಂದ ಉಂಟಾಗಿ, **ತತಿಹ್ವಿತಙ್ಗಳೈ**-ತಾನು ಆ ಪರಮಪುರುಷನ ಪುತ್ರನೆಂಬ ತತ್ವವನ್ನೂ, ಹಾಗೆ ಪಿತಾವಿನೊಂದಿಗೇನೇ ಇರುವದು ಸ್ವರೂಪವೆಂಬ ಜ್ಞಾನದಿಂದ ಆತನನ್ನು ಹೊಂದುವ ಹಿತವಾದ ಮಾರ್ಗವನ್ನು, **ಅರಿಯುತ್ತುಡಙ್ಗನಪಡಿಯುಮ್**-ತಿಳಿದ ಪ್ರಾಜ್ಞರಾದ ಆಚಾರ್ಯರ ಮೂಲಕ ತಿಳಿಯಬೇಕೆಂದು ಆರಂಭಿಸಿದ ಪ್ರಕಾರವನ್ನೂ , (ಇದರಿಂದ ರಾಜಪುತ್ರನು ರಾಜನನ್ನಗಲಿ ಹೋಗಿ, ಅನಂತರ ಈ ವಿಷಯವನ್ನು ವಿಮರ್ಶಿಸಿ ತಿಳಿದ ಪ್ರಾಜ್ಞರ ಮೂಲಕ ತಾನು ರಾಜಪುತ್ರನೇಸರಿ, ತನಗೆ ಉಪಾಧಿಯಿಂದ ಶಬರತ್ವವು ಏರ್ಪಟ್ಟಿತ್ತು, ಈ ಶಬರತ್ವವನ್ನು ಹೋಗಲಾಡಿಸಿಕೊಂಡು ತನ್ನ ತಂದೆಯಾದ ರಾಜನನ್ನೇ ಹೋಗಿ ಸೇರಲು ಸಾಧನವನ್ನು ದೃಷ್ಟಾಂತ ಮುಖೇನ ತಿಳಿಸುವ **ಉಪೋದ್ಘಾತಾಧಿಕಾರಾರ್ಥವು** ಬೋಧಿತವು, ೨) ಇವೈ-ಈ ತತ್ವಹಿತ, ಪುರುಷಾರ್ಥಗಳನ್ನು , **ಅರಿವಿಕ್ಕುಮ್ ಪ್ರಮಾಣಙ್ಗಳಿಲ್**-ಬೋಧಿಸುವ ಪ್ರಮಾಣಗಳಲ್ಲಿ, **ರಹಸ್ಯತ್ರಯಮ್**-ಈ ಮೂರು ರಹಸ್ಯಗಳೇ, **ಸಾರತಮಮಾನಪಡಿಯುಮ್**-ಸಾರತಮವಾದ ಅರ್ಥಗಳನ್ನು ಉಪಪಾದಿಸುತ್ತವೆ ಎಂಬುದನ್ನೂ ; ಇದರಿಂದ ಸಾರಾಸಿಷ್ಕರ್ಷಾಧಿಕಾರಾರ್ಥವು ಬೋಧಿತವು; (೩) **ಇವತ್ತೈಕೊಂಡರಿಯುಮ್ ಅರ್ಥಙ್ಗಳಿಲ್**-ಈ ಮೂಲ ಮಂತ್ರದ್ವಯಚರಮಶ್ಲೋಕಗಳಾದ ರಹಸ್ಯತ್ರಯದ ಮೂಲಕ ತಿಳಿಯಬೇಕಾದ ಅರ್ಥಗಳಲ್ಲಿ, **ಈಶೇಶಿತವ್ಯಙ್ಗಳಿನುಡೈಯ**-ನಿಯಾಮಕನಾದ ಸರ್ವೇಶ್ವರನೂ ಅವನಿಂದ ನಿಯಮಿಸಲ್ಪಡುವ ಚಿದಚಿತ್ತುಗಳ, **ಶರೀರಾತ್ಮಭಾವಸಂಬಂಧಾದಿಗಳ್**-ಚಿದಚಿತ್ತು

**ರಾತ್ಮಭಾವ ಸಂಬಂಧಾದಿಗಳ್ ಪ್ರಧಾನಪ್ರತಿತಂತ್ರಮಾಯ್ ಜ್ಞಾತವ್ಯಙ್ಗಳಾನಪಡಿಯುಮ್, (೪) ಇಸ್ಸಂಬಂಧತ್ತೋಡೆಕೂಡ ಜ್ಞಾತವ್ಯಮಾಗ ಪೂರ್ವಾಚಾರ್ಯಸಂಗ್ರಹೀತಮಾನ ಅರ್ಥಪಂಚಕಮ್ ರಹಸ್ಯತ್ರಯತ್ತಿಲ್ ಕಿಡಕ್ಕುಮ್ ಪಡಿಯುಮ್, (೫) ಇವರ್ಥಪಂಚಕತ್ತುಳ್ಳೇ ತತ್ವತ್ರಯಾದಿ ವಿಭಾಗಚಿಂತೈ ಪಣ್ಣುವಾರ್ಕ್ಕು ತಾತ್ಪರ್ಯಮುಮ್, (೬) ಇತತ್ತ್ವತ್ರಯತ್ತಿಲ್ ಈಶ್ವರನಾಗ ಸಾತ್ವಿಕ ಶಾಸ್ತ್ರಙ್ಗಳಿಲ್ ಚೊಲ್ಲಪಟ್ಟವನ್ ಶ್ರಿಯಃ**

---

ಗಳು ಸರ್ವೇಶ್ವರನಿಗೆ ಶರೀರವಾಗಿ, ಅವಕ್ಕೆಲ್ಲಾ ಸರ್ವೇಶ್ವರನೂ ಆತ್ಮಾವಾಗಿರುವ ಸಂಬಂಧವೇ ಮೊದಲಾದವುಗಳು, ಆದಿಶಬ್ದದಿಂದ ಶೇಷಿ ಶೇಷ ಸಂಬಂಧ, ಆಧಾರಾಧೇಯ ಸಂಬಂಧಗಳು ಹೇಳಲ್ಪಟ್ಟವು, **ಪ್ರಧಾನಪ್ರತಿತಂತ್ರಮಾಯ್**-ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಮುಖ್ಯ ತಳಹದಿಯಾಗಿದೆ ಎಂಬ, **ಜ್ಞಾತವ್ಯಙ್ಗಳಾನಪಡಿಯುಮ್**-ಮುಖ್ಯವಾಗಿ ತಿಳಿಯತಕ್ಕದ್ದೆಂಬ ಪ್ರಕಾರವನ್ನೂ ; ಇವರಿಂದ ಪ್ರಧಾನ ಪ್ರತಿತಂತ್ರಾಧಿಕಾರವು ಬೋಧಿತವು ; (೪) **ಇಸ್ಸಂಬಂಧತ್ತೋಡೆಕೂಡ**-ಈ ಶರೀರಾತ್ಮ ಸಂಬಂಧಾದಿಗಳೊಂದಿಗೆ, **ಜ್ಞಾತವ್ಯಮಾಗ**-ತಿಳಿಯಬೇಕಾಗಿ, **ಪೂರ್ವಾಚಾರ್ಯಸಂಗ್ರಹೀತಮಾನ ಅರ್ಥಪಂಚಕಮ್**-ಹಾರೀತ ಸಂಹಿತೆಯಲ್ಲಿ "**ಪ್ರಾಪ್ಯಸ್ಯಬ್ರಹ್ಮಣೋರೂಪಂ**" ಎಂದಾರಂಭಿಸಿ ಹೇಳಿದ ಹಾಗೆಯೇ ಪೂರ್ವಾಚಾರ್ಯರುಗಳ ದಿವ್ಯ ಸೂಕ್ತಿಗಳಲ್ಲಿ ಸಂಗ್ರಹಿಸಲ್ಪಟ್ಟ ಐದು ವಿಷಯಗಳೂ, **ರಹಸ್ಯತ್ರಯತ್ತಿಲ್**-ಮೂರು ರಹಸ್ಯಗಳಲ್ಲೂ, **ಕಿಡಕ್ಕುಮ್ ಪಡಿಯುಮ್**-ತೋರಿಬರುವ ಪ್ರಕಾರವನ್ನೂ (ಇವರಿಂದ ಅರ್ಥಪಂಚಕಾಧಿಕಾರಾರ್ಥವು ಸೂಚಿತವು; (೫) **ಇವರ್ಥಪಂಚಕತ್ತುಳ್ಳೇ**-ಈ ಅರ್ಥಪಂಚಕ ಬೋಧೆಯಲ್ಲೇ, **ತತ್ವತ್ರಯಾದಿವಿಭಾಗಚಿಂತೈ**-ಚಿತ್ ಅಚಿತ್ ಈಶ್ವರರೆಂಬ ಮೂರು ತತ್ವದ ಸ್ವರೂಪಸ್ವಭಾವಾದಿಗಳ ಅನುಸಂಧಾನವನ್ನು **ಪಣ್ಣುವಾರ್ಕ್ಕುತಾತ್ಪರ್ಯಮುಮ್**-ಮಾಡುವವರಿಗೆ ತೋರುವ ತಾತ್ಪರ್ಯವನ್ನು; ತತ್ವತ್ರಯಾಧಿಕಾರದಿಂದ ಉಂಟಾಗುವ ತಾತ್ಪರ್ಯವು ಯಾವುದೆಂದರೆ–ಪ್ರಕೃತ್ಯಾತ್ಮಭ್ರಾಂತಿ, ಸ್ವತಂತ್ರಾತ್ಮ ಭ್ರಾಂತಿ, ಜೀವೇಶೈಕ್ಯ ಭ್ರಾಂತಿ ಇವುಗಳು ನಿವರ್ತಿಸಿ ಹೋಗೋಣವು; ಇದು ಮುಮುಕ್ಷುವಿಗೆ ತುಂಬಾ ಮುಖ್ಯವಾದ ವಿಷಯವು; (ಇದರಿಂದ ತತ್ವತ್ರಯಾಧಿಕಾರಾರ್ಥವು ಬೋಧಿತವು. ೬) ಈ ಮೂರು ತತ್ವಗಳಲ್ಲಿ, **ಈಶ್ವರನಾಗ**-ಪರದೇವತೆಯಾದ ಸರ್ವೇಶ್ವರನೆಂದು, **ಸಾತ್ವಿಕಶಾಸ್ತ್ರಙ್ಗಳಿಲ್**-ಉಪನಿಷತ್ತುಗಳನ್ನನುಸರಿಸಿ ಸಾತ್ವಿಕರಾದ ಪರಾಶರ, ವ್ಯಾಸ, ಶುಕ, ವಾಲ್ಮೀಕಿ, ಮನು ಮುಂತಾದವರ ಶಾಸ್ತ್ರೋಪಬ್ರಹ್ಮಣಗಳಲ್ಲಿಯೂ ಮತ್ತು ಸಾತ್ವಿಕ ಪುರಾಣಗಳಾದ ಆರರಲ್ಲೂ, **ಚೊಲ್ಲಪಟ್ಟವನ್**-ಹೇಳಲ್ಪಟ್ಟವನು **ಶ್ರೀಯಃಪತಿ ಎನ್ನುಮಿಡಮ್**-ಪುರುಷಸೂಕ್ತದಲ್ಲಿ "**ಹ್ರೀಶ್ಚತೇಲಕ್ಷ್ಮೀಶ್ಚಪತ್ನ್ಯೌ**" ಎಂಬಲ್ಲಿ ಹೇಳಿರುವ ಹಾಗೆ ಲಕ್ಷ್ಮೀಪತಿಯೇ ಪರದೇವತೆಯು ಎಂಬಂಶವನ್ನೂ, (ಇದು ಪರ

**ಪತಿಯೆನ್ನು ಮಿಡಮುಮ್ (೭) ಇವ್ವರ್ಥಜ್ಞ್ಗಳೆಲ್ಲಾಮ್ ತಿಳಿನ್ದವನ್ ಮುಮುಕ್ಷುವಾಯ್ ಮೋಕ್ಷೋಪಾಯೋನ್ಮುಖನಾವ್ಪಡಿಯುಮ್, (೮) ಅಧಿಕಾರ ವಿಭಾಗಮುಮ್ (೯) ಇವ್ವಧಿಕಾರಿಗಳುಕ್ಕು ಅನುರೂಪಮಾನ ಉಪಾಯ ವಿಭಾಗಮುಮ್,**

---

ಶಚೀಪತಿಗಳು ಪರದೇವತೆಗಳಲ್ಲವೆಂಬ ಭಾವವು ಸೂಚಿತವು. ೭) **ಇವ್ವರ್ಥಜ್ಞ್ಗಳೆಲ್ಲಾ ತಿಳಿನ್ದವನ್**-ಈ ಉಪೋದ್ಘಾತ, ಸಾರನಿಷ್ಕರ್ಷಾರ್ಥ, ಪ್ರಧಾನ ಪ್ರತಿತಂತ್ರ, ಅರ್ಥಪಂಚಕ, ತತ್ವತ್ರಯ, ಪರದೇವತಾಪಾರಮಾರ್ಥ್ಯ ಈ ಆರು ಅಧಿಕಾರಗಳಲ್ಲಿ ಹೇಳಲ್ಪಟ್ಟ ಅಭಿಪ್ರಾಯಗಳನ್ನೆಲ್ಲಾ ಗ್ರಹಿಸಿದವನೇ, **ಮುಮುಕ್ಷುವಾಯ್**- ಮೋಕ್ಷಾರ್ಥಿಯಾಗಿ, **ಮೋಕ್ಷೋಪಾಯೋನ್ಮುಖನಾವ್ಪಡಿಯುಮ್**-ಹಾಗೆ ಮೋಕ್ಷವನ್ನು ಸಾಧಿಸಲು ಬೇಕಾದ ಉಪಾಯಕ್ಕೆ ಅಭಿಮುಖನಾಗುವನೆಂಬ ಅಂಶವನ್ನೂ, ಎಂದರೆ ಮೋಕ್ಷ ಹೊಂದಲು ಉಪಾಯವೇನೆಂದು ತಿಳಿದು ಅನುಷ್ಠಿಸಲು ಯತ್ನಿಸುವನು ಎಂಬಂಶವನ್ನೂ, (ಇದು ಮುಮುಕ್ಷುತ್ವಾಧಿಕಾರವು) ಅಲ್ಲಿ ಈ ಹಿಂದಿನ ಅಧಿಕಾರಗಳಿಂದುಂಟಾಗುವ ಜ್ಞಾನವೆಂತಾದ್ದು ಎಂದು ಹೇಳಲ್ಪಟ್ಟಿತು. ಈ ಪ್ರಕೃತಿಮಂಡಲ ವಸ್ತುಗಳೆಲ್ಲಾ ಕಾಲಚಕ್ರಕ್ಕೆ ಒಳಗಾಗಿ ಅಶಾಶ್ವತಗಳು, ಕಾಮ ಭೋಗಗಳೆಲ್ಲಾ ದುಃಖಪ್ರದಗಳು, ದುಃಖಮಿಶ್ರಗಳು, ಅಲ್ಪಕಾಲವಿರತಕ್ಕವುಗಳು, ದಿವ್ಯ ವೈಕುಂಠ ಭೋಗವೇ ನಿರತಿಶಯುವಾದುದು, ಸ್ಥಿರವಾದುದು; ಇಲ್ಲಿನ ಅವಸ್ಥೆಯು ಬಂಧರೂಪವಾದುದು, ಜ್ಞಾನಸಂಕೋಚ ಉಂಟಾಗಿರುವ ದುಸ್ಥಿತಿಯು; ಅಲ್ಲಿನ ದೆಶೆಯು ಹಾಗಲ್ಲದೇ ಸರ್ವಜ್ಞತೆಯೇ: ಬಂಧದಿಂದ ತಪ್ಪಿಸಿಕೊಳ್ಳುವ ಉಪಾಯವನ್ನು ಹುಡುಕಬೇಕೆಂಬ ಇಚ್ಛೆಯುಂಟಾಗುತ್ತದೆಂದು ಅಲ್ಲಿ ಹೇಳಲ್ಪಟ್ಟಿತು. ೮) **ಅಧಿಕಾರ ವಿಭಾಗವನ್ನೂ**, (ಇದು ಅಧಿಕಾರ ವಿಭಾಗದ ಅರ್ಥವು) ಮುಮುಕ್ಷುವಾಗಿ ಸಾಧನವನ್ನು ಅನುಷ್ಠಿಸುವವರು ಇಬ್ಬರೆಂದು ಇಲ್ಲಿ ವಿಭಾಗಿಸಲ್ಪಟ್ಟಿದೆ. ಅಸಮರ್ಥನಿಗೆ ಸ್ವತಂತ್ರಪ್ರಪತ್ತಿಯಾದ ಶರಣಾಗತಿಯು ಉಪಾಯವೆಂದೂ, ಶಕ್ತನಿಗೆ ಜ್ಞಾನ ಕರ್ಮಗಳಿಂದ ಅನುಗ್ರಹಿಸಲ್ಪಟ್ಟ ಉಪಾಸನೆಯೇ ಉಪಾಯವೆಂದೂ ಹೇಳಿ, ಅವೆರಡಕ್ಕೂ ಇರುವ ವೈಲಕ್ಷಣ್ಯವು ಇಲ್ಲಿ ಉಪಪಾದಿಸಲ್ಪಟ್ಟಿತು. (೮೩ನೆಯ ಪುಟ ನೋಡಿ) ೯) **ಇವ್ವಧಿಕಾರಿಗಳುಕ್ಕು ಅನುರೂಪಮಾನ**-ಹೀಗೆ ಮೋಕ್ಷಾರ್ಥಿಯಾಗಿ ಮೋಕ್ಷವನ್ನು ಹೊಂದಬೇಕೆಂಬ ಕುತೂಹಲವಿರುವ ಅಧಿಕಾರಿಗಳಿಗೆ ಯೋಗ್ಯವಾದ **ಉಪಾಯವಿಭಾಗವನ್ನೂ** (ಇದು ಉಪಾಯ ವಿಭಾಗಾಧಿಕಾರದಲ್ಲಿ ಹೇಳಿರುತ್ತದೆ) ಹೀಗೆ ಮೋಕ್ಷಾರ್ಥಿಗಳಲ್ಲಿ ಅನುಷ್ಠಿಸುವ ಉಪಾಯಗಳಾದ ಉಪಾಸನೆ ಶರಣಾಗತಿ, (ಭಕ್ತಿಪ್ರಪತ್ತಿಗಳು) ಎಂಬ ಸಾಧ್ಯೋಪಾಯಗಳೆಂದೂ, ಅದನ್ನು ನಿರ್ವಹಿಸಿ ಕೊಡುವ ಸಿದ್ಧೋಪಾಯನು ಪರಮಪುರುಷನೆಂದೂ, ಹೀಗೆ ಉಪಾಯವು ಎರಡು

**(೧೦) ಇವ್ವುಪಾಯಙ್ಗಳಿಲ್ ಸ್ವತಂತ್ರಪ್ರಪತ್ತಿನಿಷ್ಠನುಕ್ಕು ಅಧಿಕಾರ ವಿಶೇಷಮಿರುಕ್ಕುಮ್ ಕಟ್ಟಳೆಯುಮ್, (೧೧) ಸಕೃತ್ಕರ್ತ್ತವ್ಯಮಾನ ಇವ್ವುಪಾಯತ್ತುಕ್ಕು ಅನುರೂಪಮಾಗ ವಿಹಿತಮಾನವರಿಂದ ವಿಭಾಗ ಮುಮ್, (೧೨) ಮುಮುಕ್ಷುವುಕ್ಕು ಸಪರಿಕರಮಾನ ಭರನ್ಯಾಸರೂಪ**

---

ವಿಧವೆಂದೂ ಹೇಳಿ, ಉಪಾಯವೂ ಉಪೇಯವೂ ಸಹ ಪರಮಪುರುಷನೇ ಎಂದು ತಿಳಿಸಿ, ಇವೆರಡು ಸಾಧ್ಯೋಪಾಯಗಳಲ್ಲಿ ಶರಣಾಗತಿಯೇ ಉಪಾಸನೆಗೂ ಕೂಡ ಅಂಗವಾಗಿ ಶ್ರೇಷ್ಠವೆಂದೂ ಉಪದೇಶಿಸಿ, ಎರಡು ವಿಧ ಸಾಧ್ಯೋಪಾಯಗಳಲ್ಲೂ ಪರಮಪುರುಷನಲ್ಲಿ ಭಕ್ತಿಯು ವಿವೃದ್ಧವಾಗಿ, ಶ್ರೀಯತಿವರ್ಯರು ಶರಣಾಗತಿ ಗದ್ಯದಲ್ಲಿ ಉಪಪಾದಿಸಿರುವ ಹಾಗೆ ಆ ಶರಣಾಗತಿ ಮಹಾತ್ಮ್ಯೆಯಿಂದಲೇ ಪರಭಕ್ತಿ, ಪರಜ್ಞಾನ, ಪರಮಭಕ್ತಿ ರೂಪಗಳನ್ನು ಹೊಂದಿ ಪರಮಪುರುಷನೊಂದಿಗೆ ದಿವ್ಯ ವೈಕುಂಠದಲ್ಲಿ ರಲು ಯೋಗ್ಯಾವಸ್ಥೆಯುಂಟಾಗುತ್ತದೆಂದು ಹೇಳಲ್ಪಟ್ಟಿತು ; ಇಲ್ಲಿ **ಅನುರೂಪ ಮಾನ** ಎಂಬುದರಿಂದ ಮೋಕ್ಷಾರ್ಥಿಯ ಯೋಗ್ಯತಾನುಸಾರವೆಂಬರ್ಥವಾಗುವುದ ರಿಂದ, **ಅರ್ಥಿತ್ವಸಾಮರ್ಥ್ಯಗಳಿರುವ ತ್ರೈವರ್ಣಿಕರಾದ ಸಮರ್ಥರಿಗೆ** ಉಪಾಸನೆಯೂ, ಇತರರಿಗೆ ಪ್ರಪದನವೂ ಎಂಬುದನ್ನು ಸೂಚಿಸುತ್ತದೆ. (೧೦) **ಇವ್ವುಪಾಯಙ್ಗಳಿಲ್**-ಈ ಭಕ್ತಿ, ಪ್ರಪತ್ತಿ ಎಂಬೆರಡು ಉಪಾಯಗಳಲ್ಲಿ **ಸ್ವತಂತ್ರಪ್ರಪತ್ತಿನಿಷ್ಠನುಕ್ಕು**-ಪ್ರಪತ್ತಿಯನ್ನೇ ಅಂಗಿಯಾಗಿ ಉಪಾಯವೆಂದು ಭಾವಿಸಿ ಪ್ರಪದನಾನುಷ್ಠಾನವನ್ನು ಮಾಡಿದವನಿಗೆ, **ಅಧಿಕಾರವಿಶೇಷವು, ಇರುಕ್ಕುಂ ಕಟ್ಟಳೈಯುಮ್**-ಇರುವ ಕ್ರಮವನ್ನೂ ; (ಇದು ಪ್ರಪತ್ತಿ ಯೋಗ್ಯಾ ಧಿಕಾರದಲ್ಲಿ ಉಪಪಾದಿತವು) ಈ ಅಧ್ಯಾಯದಲ್ಲಿ, ಪ್ರಪದನಕ್ಕೆ ಸರ್ವರಿಗೂ ಅಧಿಕಾರ ವಿರುವದು ಒಂದು ಮುಖ್ಯ ವೈಲಕ್ಷಣ್ಯವು. ಮತ್ತು ಮೂರು ವರ್ಣಕ್ಕೆ ಸೇರದಿರೋ ಣವೂ, ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳ ಜ್ಞಾನಶೂನ್ಯತೆಯೂ, ವಿಳಂಬ ವನ್ನು ಸಹಿಸದಿರೋಣವು, ಇವುಗಳೇ ಅಧಿಕಾರ ವಿಶೇಷವನ್ನು ತಿಳಿಸುವ ಕಟ್ಟಳೆ ಗಳೆಂದು ಭಾವಿಸತಕ್ಕದ್ದು. (೧೧) **ಸಕೃತ್ಕರ್ತವ್ಯಮಾನ**-ಇನ್ನೊಂದು ಉಪಾಯ ವಾದ ಉಪಾಸನೆಯನ್ನು **ಅಸಕೃತ್**-ಪುನಃ ಪುನಃ ಪ್ರತಿದಿನವೂ ಅನುಷ್ಠಿಸುವ ಹಾಗೆ ಅಲ್ಲದೆ, ಒಂದು ಸಲ ಮಾತ್ರವೇ ಅನುಷ್ಠಿಸಬೇಕಾದ, **ಇವ್ವುಪಾಯತ್ತುಕ್ಕು**- ಈ ಭರನ್ಯಾಸಕ್ಕೆ, **ಅನುರೂಪಮಾಗ**-ಯೋಗ್ಯವಾದ, **ವಿಹಿತಮಾನ**-ಅಹಿರ್ಬುಧ್ನ್ಯ ಸಂಹಿತೆ, ಲಕ್ಷ್ಮೀತಂತ್ರಗಳನ್ನೂ, ಆನುಕೂಲ್ಯ ಸಂಕಲ್ಪಾದಿಗಳನ್ನೂ ಎಂಬ ಭಾವವು, (ಇದು ಪರಿಕರ ವಿಭಾಗಾಧಿಕಾರಾರ್ಥವು) (೧೨) **ಮುಮುಕ್ಷುವುಕ್ಕು**-ಮೋಕ್ಷಾ ರ್ಥಿಗೆ, **ಸಪರಿಕರಮಾನ**-ಈ ಐದು ಅಂಗಗಳಿಂದ ಕೂಡಿದ, **ಭರನ್ಯಾಸರೂಪ**- ಆತ್ಮಸ್ವರೂಪ, ರಕ್ಷಣ, ಫಲ ಇವುಗಳ ಭರವೆಲ್ಲಾ ತನ್ನದಲ್ಲವು, ಪರಮಾತ್ಮನಿಗೇ.

**ಪ್ರಧಾನಕರ್ತ್ತವ್ಯತ್ತುನುಡೈಯ ಸನ್ನಿವೇಶವಿರುಕ್ಕುಮ್ಪಡಿಯುಮ್, (೧೩) ಇಪ್ಪಡಿ ಸಾಙ್ಗಪ್ರಪದನಾನುಷ್ಠಾನಮ್ ಪಣ್ಣಿನವನ್ ಸರ್ವರಕ್ಷಣಾಧಿಕೃತರ್ ಪಕ್ಕಲಿಲೇ ನ್ಯಸ್ತಭರನಾಗೈಯಾಲೇ ಕೃತಕೃತ್ಯನಾಮ್ಪಡಿಯುಮ್, (೧೪) ಇನ್ನಿಷ್ಠೈ ತನಕ್ಕು ಪಿರನ್ದಮೈಕಣ್ಡು ತಾನ್ ತೇರಿಯಿರುಕ್ಕೈಕ್ಕು ಅಡಿಯಾಳಙ್ಗಳುಮ್, (೧೫) ಇವನುಕ್ಕು ಅರ್ತ್ತಿಯಿಲ್ ಮಾಂದ್ಯತ್ತಾಲೇ**

---

ಸೇರಿದುವು ಎಂಬ ಭಾವನೆಯಿಂದ ಪರಮಾತ್ಮನ ಪಾದಾರವಿಂದದಲ್ಲಿ ಈ ಆತ್ಮನನ್ನು ಸಮರ್ಪಿಸೋಣವಾದ ಆತ್ಮನಿಕ್ಷೇಪವೆಂಬ, **ಪ್ರಧಾನಕರ್ತ್ತವ್ಯತ್ತಿನುಡೈಯ**-ಮೋಕ್ಷ ಪ್ರಾಪ್ತಿಗೆ ಹೇತುವಾದ ಮುಖ್ಯಾನುಷ್ಠಾನದ, **ಸನ್ನಿವೇಶವಿರುಕ್ಕುಮ್ಪಡಿಯುಮ್**-ಸ್ವರೂಪವಿರುವ ಪ್ರಕಾರವನ್ನೂ, (ಇದು ಸಾಂಗಪ್ರಪದನಾಧಿಕಾರಾರ್ಥವು) (೧೩) **ಇಪ್ಪಡಿ**-ಹೀಗೆ ಮೇಲೆ ವಿವರಿಸದ ರೀತಿಯಲ್ಲಿ, **ಸಾಙ್ಗಪ್ರಪದನಾನುಷ್ಠಾನಮ್ ಪಣ್ಣಿನವನ್**-ಆಚಾರ್ಯರ ಮೂಲಕ ಸಾಙ್ಗಪ್ರಪದನ ರೂಪ ಭರನ್ಯಾಸಾನುಷ್ಠಾನವನ್ನು ಮಾಡಿದ ಪ್ರಪನ್ನನು, **ಸರ್ವರಕ್ಷಣಾಧಿಕೃತನ್ ಪಕ್ಕಲಿಲೇ**-ಸರ್ವರನ್ನೂ ರಕ್ಷಿಸುವ ಅಧಿಕಾರವನ್ನು ವಹಿಸಿರುವವನಲ್ಲಿ, **ನ್ಯಸ್ತಭರನಾಗೈಯಾಲೆ**-ಸಮಸ್ತ ಭರವನ್ನೂ ಇಟ್ಟವನಾದುದರಿಂದ, ಆತ್ಮರಕ್ಷಾಭರಸಮರ್ಪಣವನ್ನು ಮಾಡಿರುವದರಿಂದ, **ಕೃತಕೃತ್ಯನಾಮ್ಪಡಿಯುಮ್**-ಮಾಡಬೇಕಾದ ಉಪಾಯಾನುಷ್ಠಾನವನ್ನು ಮಾಡಿದ್ದರಿಂದ ಕೃತಾರ್ಥನಾಗಿ ಮುಂದೆ ಅದಕ್ಕಾಗಿ ಮಾಡಬೇಕಾದುದು ಏನೂ ಇಲ್ಲವು ಎಂಬ ಭಾವವು. ಆ ಕಾರಣದಿಂದ ನಿರ್ಭರನಾಗಿ, ನಿರ್ಭಯನಾಗಿ, ನಿಸ್ಸಂಶಯನಾಗಿ, ಹೃಷ್ಟಮನಸ್ಕನಾಗಿರತಕ್ಕದ್ದೆಂಬ ಭಾವವು. ಇದು ಕೃತಕೃತ್ಯಾಧಿಕಾರಾರ್ಥವು; (೧೪) **ಇನ್ನಿಷ್ಠೈ**-ಹೀಗೆ ಆತ್ಮಾರಕ್ಷಾಭರಸಮರ್ಪಣ ಮಾಡಿ ಕೃತಕೃತ್ಯನಾದ ಪ್ರಪನ್ನನಾಗಿರುವ ನಿಷ್ಠೆಯು, **ತನಕ್ಕು ಪಿರನ್ದಮೈಕ್ಕಣ್ಡು**-ತನಗೆ ಆಚಾರ್ಯಕಟಾಕ್ಷದಿಂದಲೂ ಭಗವಂತನ ಕೃಪೆಯಿಂದಲೂ ಲಭಿಸಿದುದನ್ನು ಕಂಡು **ತಾನ್ ತೇರಿಯಿರುಕ್ಕೈಕ್ಕು**-ತಾನು ಕೃತಕೃತ್ಯನಾಗಿ ಇತರರಿಗಿಂತಲೂ ಮೇಲಾದ ನಿಷ್ಠೆಯನ್ನು ಹೊಂದಿದವನೆಂಬುದಕ್ಕೆ, **ಅಡಿಯಾಳುಮ್ ಙ್ಗಳ್**-ಲಕ್ಷಣಗಳನ್ನೂ ನಿದರ್ಶನಗಳನ್ನೂ ಎಂಬರ್ಥವು. ಇದು ಸ್ವನಿಷ್ಠಾಭಿಜ್ಞಾನಾಧಿಕಾರಾರ್ಥವು. ಅವು ಯಾವುವು ಎಂದರೆ ಸ್ವರೂಪನಿಷ್ಠೆ, ಉಪಾಯನಿಷ್ಠೆ, ಫಲನಿಷ್ಠೆಗಳು ಇವು ಉಂಟಾಗಿವೆ ಎಂಬುದನ್ನು ಹೇಗೆ ಗುರ್ತಿಸಬಹುದೆಂಬುದು ಸ್ವರೂಪನಿಷ್ಠೆಯುಂಟಾಗಿದೆಯೆಂಬುದನ್ನು ೧೧೯೦-೧ನೆಯ ಪುಟಗಳಲ್ಲಿ ಹೇಳಿರುವ ಲಕ್ಷಣಗಳಿಂದಲೂ, ಉಪಾಯನಿಷ್ಠೆಯನ್ನು ೧೧೯೩-೫ನೆಯ ಪುಟಗಳಲ್ಲಿ ಹೇಳಿರುವ ಲಕ್ಷಣಗಳಿಂದಲೂ, ಪುರುಷಾರ್ಥನಿಷ್ಠೆಯನ್ನು ೧೨೦೮-೯ರಲ್ಲಿರುವ ಲಕ್ಷಣಗಳಿಂದಲೂ ತಿಳಿಯಬಹುದು. (೧೫) **ಇವನುಕ್ಕು**-ಈ ಪ್ರಪನ್ನನಿಗೆ, **ಅರ್ತ್ತಿಯಿಲ್ ಮಾಂದ್ಯತ್ತಾಲೇ**-ಭರನ್ಯಾಸ

**ಶರೀರಮ್ ಅನುವರ್ತ್ತಿದಾಗಿಲ್ ಇಙ್ಗಿರುನ್ದ ಕಾಲತ್ತುಕ್ಕು ಸ್ವಯಂ ಪ್ರಯೋಜನಮಾಯ್ ಸ್ವರೂಪಪ್ರಾಪ್ತಶೇಷವೃತ್ತಿ ರೂಪಮಾನ ಕೈಂಕರ್ಯ ಮಿರುಕ್ಕುಂಪಡಿಯುಮ್, (೧೬) ಭಗವತ್ಕೈಂಙ್ಕರ್ಯತ್ತುಕ್ಕೆಲ್ಲೈನಿಲಮ್ ಭಾಗವತಕೈಙ್ಕರ್ಯಮಾನಪಡಿಯುಮ್, (೧೭) ಶಾಸಿತಾವಾನ ಸ್ವಾಮಿಕ್ಕು**

---

ವಾದ ಒಡನೆಯೇ ಸ್ವಾಮಿಯನ್ನು ಹೋಗಿ ಸೇರಬೇಕೆಂಬ ಆರ್ತ್ತಿಯಲ್ಲಿ ನ್ಯೂನತೆ ಯಿಂದ ಎಂದರೆ, ದೃಪ್ತಪ್ರಪನ್ನನಾಗಿ, **ಶರೀರಮ್ ಅನುವರ್ತ್ತಿದಾಗಿಲ್**-ವಿಳಂಬ ವನ್ನು ಸಹಿಸುವನಾದುದರಿಂದ ಶರೀರವು ಇನ್ನೂ ಕೆಲವು ಕಾಲವು ಅನುವರ್ತ್ತಿಸಿ ಕೊಂಡು ಬಂದರೆ, ಸ್ವಲ್ಪ ಕಾಲ ವಿಳಂಬಿಸಿ ಶರೀರಧಾರಣೆಯು ಪ್ರಾಪ್ತವಾದ ಪಕ್ಷದಲ್ಲಿ **ಇಙ್ಗು ಇರುನ್ದ ಕಾಲತ್ತುಕ್ಕು**-ಈ ಲೋಕದಲ್ಲೇ ಇರುವ ಕಾಲಕ್ಕೆ, **ಸ್ವಯಂ ಪ್ರಯೋಜನಮಾನ**-ಭಗವತ್ಕೈಂಕರ್ಯ ಮಾಡೋಣವೇ ಅಲ್ಲದೆ ಇನ್ನ್ಯಾವ ಪ್ರಯೋಜನದ ಆಶೆ ಇಲ್ಲದ ಹಾಗೆ, **ಸ್ವರೂಪಪ್ರಾಪ್ತಶೇಷವೃತ್ತಿರೂಪ ಮಾನ**-ಪರಮಪುರುಷನಿಗೆ ದಾಸನಾಗಿರುವುದೇ ತನಗೆ ಸ್ವರೂಪವಾಗಿ, ಅದರಿಂದುಂ ಟಾದ ಶೇಷವೃತ್ತಿಗೆ ಉಚಿತವಾದ, **ಕೈಂಕರ್ಯಮಿರುಕುಮ್ಪಡಿಯುಮ್**-ಆಜ್ಞಾ ನುಜ್ಞಾ ಕೈಂಕರ್ಯಗಳಾದ ನಿತ್ಯನೈಮಿತ್ತಿಕ ಕರ್ಮಗಳ ಅನುಷ್ಠಾನದ ಕ್ರಮವನ್ನೂ; ಇದು ಉತ್ತರಕೃತ್ಯಾಧಿಕಾರಾರ್ಥವು. ಇಲ್ಲಿ ಕೃತಕೃತ್ಯನಾದ ಪ್ರಪನ್ನನು ಇನ್ನೇನೂ ಮೋಕ್ಷಪ್ರಾಪ್ತಿಗೆ ಮಾಡಬೇಕಾದುದಿಲ್ಲವಾದುದರಿಂದ, ಊಟ, ತಿರುಗಾಡುವುದು, ಮಲಗುವುದು ಇವುಗಳಲ್ಲೇ ಕಾಲ ಕಳೆಯಬಹುದೇ? ಎಂದರೆ ೧೨ ವಿಧಗಳಾದ ಉತ್ತರಕೃತ್ಯಗಳನ್ನು ಉಪದೇಶಿಸಿರುತ್ತಾರೆ. ಅವೆಲ್ಲವನ್ನೂ ಆಚರಿಸತಕ್ಕದ್ದು ಪ್ರಪ ನ್ನನಿಗೆ ಸ್ವರೂಪಯೋಗ್ಯವಾದುವೆಂದು ಅಮೋಘೋಪದೇಶವಿರುತ್ತದೆ. **(೧೬)ಭಗ ವತ್ಕೈಂಕರ್ಯತ್ತುಕ್ಕು**-ಭಗವಂತನ ಕೈಂಕರ್ಯದ, **ಎಲ್ಲೈನಿಲಮ್**-ಪರಾಕಾಷ್ಠಾ ದೆಶೆಯು, **ಭಾಗವತಕೈಂಙ್ಕರ್ಯಮಾನಪಡಿಯುಮ್**-ಭಾಗವತ ಕೈಂಙ್ಕರ್ಯವೇ ಆಗಿರುತ್ತೆಂಬ ಪ್ರಕಾರವನ್ನೂ, (ಇದು ಪುರುಷಾರ್ಥಕಾಷ್ಠಾಧಿಕಾರದ ಅರ್ಥವು) **"ಮದ್ಭಕ್ತಭಕ್ತಾಶ್ಚ ಪೂಜನೀಯಾ ವಿಶೇಷತಃ" "ತಸ್ಮಾತ್ಪರತರಂ ಪ್ರೋಕ್ತಂತದೀಯಾರಾಧನಂ ಪರಮ್" "ಜ್ಞಾನೀತ್ವಾತ್ಮೈವಮೇ ಮತಮ್"** ಇತ್ಯಾದಿಗಳಿಂದ ಸಮರ್ಥಿಸಿ, ಈ ಭಾಗವತ ಕೈಂಕರ್ಯವೇ ಸ್ವಾಮಿಗೆ ತುಂಬಾ ಇಷ್ಟವಾದುದೆಂದು ಹೇಳಿ, ಇದು ಪ್ರಪನ್ನನಿಗೆ ಉಪಾಧಿಪ್ರಾಪ್ತವಲ್ಲದೆ ಸ್ವಾಭಾವಿಕವಾಗಿಯೇ, ತನಗೆ ಶೇಷಭೂತರೂ ತದೀಯರಿಗೂ ಶೇಷಭೂತರೆಂದು ಉಪಪಾದಿಸಲ್ಪಟ್ಟಿರುತ್ತದೆ; **(೧೭) ಶಾಸಿತಾವಾನ ಸ್ವಾಮಿಕ್ಕು-ಶಾಸನಾತ್ ಶಾಸ್ತ್ರಂ** ಎಂಬಲ್ಲಿ ಹೇಳಿರುವ ಹಾಗೆ, ಸ್ವಾಮಿಯು ತನ್ನ ಶಾಸ್ತ್ರದ ವಿಧಿ ನಿಷೇಧವಾಕ್ಯ ಗಳಿಂದ ಧರ್ಮಗಳನ್ನು ಬೋಧಿಸಿ, ಅದಕ್ಕೆ ವ್ಯತ್ಯಸ್ತವಾಗಿ ಕೃತ್ಯಾಕರಣ, ಅಕೃತ್ಯ ಕರಣಕ್ಕೆ ಒಳಗಾದವರನ್ನು, ಶಾಸಿತವಾನ ಸ್ವಾಮಿಗೆ, ಶಿಕ್ಷಿಸುವ ಸ್ವಾಮಿಗೆ, **ಅಭಿಮತ**

**ಅಭಿಮತಮಲ್ಲಾದುದು ಕೈಂಕರ್ಯಮಲ್ಲಾನ್ನೈಯಾಲೇ ಯಥಾಶಾಸ್ತ್ರಮ್ ಕೈಂಕರ್ಯಮ್ ಅನುಷ್ಠಿಕ್ಕವೇಣ್ಡಿನ ಪಡಿಯುಮ್, (೧೮) ಇಶ್ಶಾಸ್ತ್ರೀಯ ಕೈಂಕರ್ಯಪ್ರವೃತ್ತನುಕ್ಕು ಅಪರಾಧಙ್ಗಳ್ ಪುಗುರಾನ್ನೈಕ್ಕುಮ್, ಪುಗುನ್ದವೈ ಕಳಿಗೈಕ್ಕುಮ್ ವಿರುಗುಗಳುಮ್; (೧೯) ಇನ್ನಿರಪರಾಭ ಕೈಂಕರ್ಯತ್ತುಕ್ಕು ಸ್ಥಾನಮಾಗ ಅನಾಪತ್ತಿಲುಮ್ ಉಚಿತಮಾವದು ಭಾಗವತಾ**

---

**ಮಲ್ಲಾದುದು**-ಶಾಸ್ತ್ರಗಳಿಗೆ ವಿರುದ್ಧವಾಗಿ ನಡೆಯುವುದರ ಮೂಲಕ ಅವರಿಗೆ ಇಷ್ಟವಿಲ್ಲದ್ದು, **ಕೈಂಕರ್ಯಮಲ್ಲಾನ್ನೈಯಾಲೇ**-ಕೈಂಕರ್ಯವಲ್ಲವಾದುದರಿಂದ, **ಯಥಾಶಾಸ್ತ್ರಂ**-ಶಾಸ್ತ್ರಗಳಲ್ಲಿ ಹೇಳಿರುವ ಹಾಗೂ, **ಕೈಂಕರ್ಯವನ್ನು, ಅನುಷ್ಠಿಕ್ಕವೇಣ್ಡಿನ ಪಡಿಯುಮ್**-ಅನುಷ್ಠಿಸಬೇಕೆಂಬುದರ ಪ್ರಕಾರವನ್ನೂ, (ಇದು ಶಾಸ್ತ್ರೀಯ ನಿಯಮನಾಧಿಕಾರಾರ್ಥವು) ಸರ್ವೇಶ್ವರನೇ ರಾಮಕೃಷ್ಣಾದ್ಯವತಾರಗಳನ್ನು ಮಾಡಿ, ಶಾಸ್ತಾವಾದ ತಾನೇ ತನ್ನ ಶಾಸ್ತ್ರವನ್ನು ಅತಿಕ್ರಮಿಸಲಿಲ್ಲವು. ಹಾಗೆಯೇ ಧುರ್ಯೋಧನ ಋಷಿಗಳು ಮುಂತಾದವರ ಎದುರಿಗೆ ಪ್ರತಿಜ್ಞೆ ಮಾಡಿರುತ್ತಾರೆ. ಹೀಗಿರುವಾಗ ಆ ಶಾಸ್ತ್ರಗಳು ನಮಗಾಗಿಯೇ ಏರ್ಪಟ್ಟು ಹಾಗೆಯೇ "**ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ ಕಾರ್ಯಾಕಾರ್ಯ ವ್ಯವಸ್ಥಿತೌ**" ಎಂದು ತಾನೇ ಶಾಸನ ಮಾಡಿರುವಾಗ ಶಾಸ್ತ್ರೀಯ ನಿಯಮನಾನುರೀತ್ಯಾ ನಡೆಯತಕ್ಕದ್ದೆಂಬುದು ಕೈಮುತಿಕ ನ್ಯಾಯ ಸಿದ್ಧವು.

(೧೮) **ಇಶ್ಶಾಸ್ತ್ರೀಯಕೈಂಕರ್ಯಪ್ರವೃತ್ತನುಕ್ಕು**-ಹೀಗೆ ಶಾಸ್ತ್ರನಿಯಮನ ಪ್ರಕಾರ ಭಗವದ್ಭಾಗವತ ಕೈಂಕರ್ಯಗಳಲ್ಲೂ-ಆಜ್ಞಾಕೈಂಕರ್ಯಗಳಲ್ಲೂ ಪ್ರವೃತ್ತಿಯುಳ್ಳ ಪ್ರಪನ್ನನಿಗೆ, **ಅಪರಾಧಙ್ಗಳ್**–ಅಕೃತ್ಯಕರಣ ಕೃತ್ಯಾಕರಣ ದೋಷಗಳು, **ಪುಗುರಾನ್ನೈಕ್ಕುಮ್**–ಬಂದು ಸೇರಿಕೊಳ್ಳದಿರುವದಕ್ಕೂ ಮುಂದಕ್ಕೆ ಅಪರಾಧಗಳು ಸಂಬಂಧಿಸದೇ ಇರುವುದಕ್ಕೂ ಮತ್ತು **ಪುಗುನ್ದವೈ**-ಬಂದು ಸೇರಿರುವ ದೋಷಗಳು, **ಕಳಿಗೈಕ್ಕುಂ**-ನಿವೃತ್ತಿಸಿ ಹೋಗುವದಕ್ಕೂ, **ವಿರುಗುಗಳುಮ್**-ಪ್ರಾಯಶ್ಚಿತ್ತಗಳೂ ಅಥವಾ ಅಪರಾಧ ಪರಿಹಾರಕ್ಕಾಗಿ "**ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ**" ಎಂಬಲ್ಲಿ ಸರ್ವಭಾವೇನ ಎಂಬ ಪದದಲ್ಲಿ ತೋರಿಬರುವ, ಪುನಃ ಶರಣಾಗತಿಯನ್ನು ಅನುಷ್ಠಾನ ಮಾಡಬೇಕೆಂಬುದನ್ನೂ, ಇದು ಅಪರಾಧ ಪರಿಹಾರಾಧಿಕಾರಾರ್ಥವು, **(೧೯) ಇನ್ನಿರಪರಾಧಕೈಂಕರ್ಯತ್ತುಕ್ಕು**-ಈ ಪ್ರಪನ್ನನು ದೇಹಾವಸಾನದವರೆಗೂ ಮಾಡಬೇಕಾದ ಅಪರಾಧಗಳಿಲ್ಲದ ಮೇಲೆ ಹೇಳಿದ ಕೈಙ್ಕರ್ಯಗಳಿಗೆ **ಸ್ಥಾನಮಾಗ**-ಸ್ಥಾನವಾಗಿ, **ಉಚಿತಮಾವದು**-ಯೋಗ್ಯವಾದ ಸ್ಥಳ ಯಾವುದೆಂದರೆ **ಅನಾಪತ್ತಿಲುಮ್**-ಆಪತ್ತಿಲ್ಲದ ಕಾಲದಲ್ಲೂ, **ಭಾಗವತಾಶ್ರೀತಮಾನ**-ಭಾಗವತರುಗಳು ಆಶ್ರಯಿಸಿರುವ, **ಭಗವತ್ಕ್ಷೇತ್ರಮೆನ್ನು ಮಿಡಮುಮ್.**

**ಶ್ರಿತಮಾನ ಭಗವತ್ಕ್ಷೇತ್ರಮೆನ್ನುಮಿಡಮುಮ್ (೨೦) ಇಪ್ಪಡಿ ಇರುನ್ದ ಇವ್ವಧಿಕಾರಿಕ್ಕು ಶರಣ್ಯಸಂಕಲ್ಪ ವಿಶೇಷತ್ತಾಲೇ ಪ್ರಶಸ್ತದೇಶ ಕಾಲಾದಿ ನಿಯತಿ ನಿರಪೇಕ್ಷ ಮಾಕಸ್ಥೂಲಶರೀರತ್ತಿಲ್ ನಿನ್ರುಮ್ ನಿರ್ಯಾಣ ಮಿರುಕ್ಕುಂಪಡಿಯುಮ್, (೨೧) ಇಪ್ಪಡಿ ಪುರಪಟ್ಟಾಲ್ ಪಿತಾ ಯೌವ ರಾಜ್ಯತ್ತುಕ್ಕು ಮುಡಿಶೂಡವಳೈತ್ತು ವರವಿಟ್ಟ ರಾಜಕುಮಾರನ್ ಪೋಲೇ ಪೆರಿಯ ಮೆನ್ಮೈಯೋಡೆ ಪರಮಪದಪರ್ಯನ್ತಮಾಗ ಅರ್ಚಿರಾದಿ ಮಾರ್ಗ**

---

ಶ್ರೀರಂಗ, ತಿರುಮಲೆ, ಕಾಂಚೀಪುರ, ತಿರುನಾರಾಯಣಪುರವೇ ಮೊದಲಾದ ಭಗವತ್ಕ್ಷೇತ್ರವೆಂಬ ಸಂದರ್ಭವನ್ನೂ, ಇದು ಸ್ಥಾನವಿಶೇಷಾಧಿಕಾರಾರ್ಥವು, ಇಲ್ಲಿ **ಅನಾಪತ್ತಿಲುಮ್** ಎಂದು ಏಕೆ ಹೇಳಲ್ಪಟ್ಟಿತೆಂದರೆ, ಆಪತ್ತು ಒದಗಿದ ಕಾಲದಲ್ಲಿ, "ಸಂಕಟ ಬಂದರೆ ವೆಂಕಟರಮಣ" ಎಂಬ ಲೋಕದ ನುಡಿಗನುಸಾರವಾಗಿ ದಿವ್ಯದೇಶಗಳಿಗೆ ಹೋಗಿ ಸೇವೆ ಮಾಡುತ್ತೇನೆಂಬ ಹರಕೆಗೆ ಅನುಸಾರವಾಗಿ ಮಾತ್ರವೇ ಅಲ್ಲದೆ ಯಾವಾಗಲೂ ದೇಹವಿಯೋಗಪರ್ಯಂತವೂ ಅಲ್ಲೇ ವಸಿಸತಕ್ಕದೆಂಬುದನ್ನು ಸೂಚಿಸುವುದಕ್ಕಾಗಿ. ಇಲ್ಲಿ **ಭಾಗವತಾಶ್ರಿತಮಾನ** ಎಂದು ಏಕೆ ಹೇಳಲ್ಪಟ್ಟಿತೆಂದರೆ, ಪ್ರಪನ್ನನಿಗೆ ಭಾಗವತರೊಂದಿಗೆ ಸಲ್ಲಾಪ, ಅವರಿಂದ ಸಮುಪದೇಶ, ಮೊದಲಾದುವುಗಳು ದೊರೆಯುವುದರಿಂದ, ಅಂತಹ ಸತ್ಸಂಗಕ್ಕಾಗಿ ಅಂತಹ ಸ್ಥಳದಲ್ಲಿ ವಾಸ ಮಾಡತಕ್ಕದ್ದು ಎಂಬ ಭಾವವು. ಅಂತಹ ಭಾಗವತರಿಂದ ಆಶ್ರಿತವಲ್ಲದಿದ್ದರೆ ಅದು ಹಿಂದೆ ಎಷ್ಟು ಮಹಿಮೆಯುಳ್ಳ ಪುಣ್ಯ ಕ್ಷೇತ್ರವಾಗಿದ್ದರೂ ಅದು ತಮಗೆ ಉಪಾದೇಯವಲ್ಲವೆಂದು ಉಪಪಾದಿಸಿರುತ್ತಾರೆ. (೨೦) **ಇಪ್ಪಡಿ ಇರುನ್ದ ಇವ್ವಧಿಕಾರಿಕ್ಕು**-ಹೀಗೆ ಕೃತ್ಯಾಕೃತ್ಯ ಉತ್ತರ ಕೃತ್ಯಗಳನ್ನು ಶಾಸ್ತ್ರನಿಯಮಾನುಸಾರ ನಡೆಸುತ್ತಿರುವ ಈ ಅಧಿಕಾರಿಗೆ, **ಶರಣ್ಯಸಙ್ಕಲ್ಪವಿಶೇಷತ್ತಾಲೇ**-ಸರ್ವರಕ್ಷಕನ ಸಂಕಲ್ಪವಿಶೇಷದಿಂದ, **ಪ್ರಶಸ್ತದೇಶಕಾಲಾಧಿನಿಯತಿ ನಿರಪೇಕ್ಷಮಾಗ**-ಉತ್ಕೃಷ್ಟವಾದ ದೇಶ, ಉತ್ಕೃಷ್ಟಕಾಲ, ಉತ್ಕೃಷ್ಟಾವಸ್ಥೆ ಮೊದಲಾದವುಗಳ ಆವಶ್ಯಕತೆಯ ಅಪೇಕ್ಷೆ ಇಲ್ಲದೆ, **ಸ್ಥೂಲಶರೀರದಿಂದ** ಎಂದರೆ ಸ್ಥೂಲಶರೀರವನ್ನು ಬಿಟ್ಟು ಸೂಕ್ಷ್ಮಶರೀರವನ್ನು ಹೊಂದಿ ದೇಹಾವಸಾನ ಉಂಟಾಗುವ ಪ್ರಕಾರವನ್ನೂ ಪರಮಾತ್ಮನೊಂದಿಗೆ ಸಂಪತ್ತಿಯುಂಟಾಗಿ ಆತನ ಕೃಪೆಯಿಂದ ಮಿಕ್ಕ ನೂರು ನಾಡಿಗಳನ್ನು ಬಿಟ್ಟು ಸುಷುಮ್ನಾ ನಾಡಿಯ ಮೂಲಕ ದೇಹವನ್ನು ಬಿಟ್ಟು ಹೊರಗೆ ಬರುವ ಪ್ರಕಾರವನ್ನೂ, ಇದು ನಿರ್ಯಾಣಾಧಿಕಾರಾರ್ಥವು. (೨೧) **ಇಪ್ಪಡಿ ಪುರಪಟ್ಟಾಲ್**-ಹೀಗೆ ನಿರ್ಯಾಣ ಹೊಂದಿ ಸ್ಥೂಲಶರೀರವನ್ನು ಬಿಟ್ಟು ಹೊರಗೆ ಬಂದರೆ, **ಪಿತಾ**-ತಂದೆಯಾದವನು, **ಯೌವವರಾಜ್ಯತ್ತುಕ್ಕುಮುಡಿಶೂಡ**-ಯೌವ ರಾಜ್ಯಪದವಿಯಲ್ಲಿ ಮೂರ್ಧಾಭಿಷಿಕ್ತನನ್ನಾಗಿ ಮಾಡಲು, **ಅಳೈತ್ತುವರವಿಟ್ಟ**-ಕರೆದುಕೊಂಡು ಬನ್ನಿ ಎಂದು ಆಜ್ಞಾಪಿಸಲ್ಪಟ್ಟ, **ರಾಜಕುಮಾರನ ಹಾಗೆ, ಪೆರಿಯಮೆನ್ಮೈಯೋಡೆ**-

**ತ್ತಾಲೇ ಪೋವಪ್ಪಡಿಯುಮ್; (೨೨)ಇಪ್ಪಡಿ ಪೋನಾಲ್ ಅಙ್ಗಿರಕ್ಕುಂ ಸ್ವಚ್ಛಂದ ಕೈಙ್ಕರ್ಯ ಪರ್ಯನ್ತ ಪರಿಪೂರ್ಣಾನುಭವರೂಪಮಾನ ಮುಕ್ತೈಶ್ವರ್ಯಮಿರುಕ್ಕುಮಪ್ಪಡಿಯುಮ್; (೨೩) ಇಪ್ಪಡಿ ಉಕ್ತಮಾನ ಜ್ಞಾತವ್ಯಙ್ಗಳಿಲ್ ಪ್ರಧಾನಮಾನ ಸಿದ್ಧೋಪಾಯತ್ತೈಯುಮ್, (೨೪) ಕರ್ತವ್ಯಂಗಳಿಲ್ ಪ್ರಧಾನಮಾನ ಸಾಧ್ಯೋಪಾಯತ್ತೈಯುಮ್; (೨೫-೨೬) ಇವ್ವು**

---

ಹೆಚ್ಚಾದ ಮಹಿಮೆ, ಸಂಭ್ರಮದಿಂದ ಎಂದರೆ ರಥದಲ್ಲಿ ಕೂರಿಸಿ, ಹಸ್ತ್ಯಶ್ವ ಗಜವರೂಥಗಳೊಂದಿಗೆ ಮೆರವಣಿಗೆ ಮಾಡಿಸುತ್ತಾ ವಿಶೇಷ ಸತ್ಕರಿಸಿ ಎಂಬರ್ಥವು, **ಪರಮಪದಪರ್ಯನ್ತಮಾಗ**-ದಿವ್ಯ ವೈಕುಂಠವರೆಗೂ ಸತ್ಕರಿಸಿ ಕರೆದುಕೊಂಡು ಹೋಗುವ, **ಅರ್ಚಿರಾದಿ ಮಾರ್ಗತ್ತಾಲೇ ಪೋವಪ್ಪಡಿಯುಮ್**-ಅರ್ಚಿಯೇ ಮೊದಲಾದ ೧೨ ಆತಿವಾಹಕರು ತೋರಿಸುವ ಮಾರ್ಗದಲ್ಲಿ ಹೋಗುವ ಪ್ರಕಾರವನ್ನೂ, ಇದು ಗತಿಚಿನ್ತನಾಧಿಕಾರಾರ್ಥವು; (೨೨) **ಇಪ್ಪಡಿಪೋನಾಲ್**–ಹೀಗೆ ಪ್ರಪನ್ನನು ನಿರ್ಯಾಣವನ್ನು ಹೊಂದಿ ಅರ್ಚಿರಾದಿ ಮಾರ್ಗದಲ್ಲಿ ಹೊರಟು ಪರಮಪುರುಷನಾದ ಶ್ರಿಯಃಪತಿಯ ಸನ್ನಿಧಿಗೆ ಅಮಾನವನಿಂದ ಕರೆದುಕೊಂಡು ಹೋದವನಾದರೆ, **ಅಙ್ಗಿರಕ್ಕುಮ್**-ಆ ದಿವ್ಯ ವೈಕುಂಠದಲ್ಲಿ ಲಭಿಸುವ, **ಸ್ವಚ್ಛಂದ ಕೈಂಕರ್ಯಪರ್ಯನ್ತ**–ತನ್ನಿಷ್ಟಾನುಸಾರ ಮಾಡುವ ನಿತ್ಯಕೈಂಕರ್ಯಪರ್ಯಂತವಾದ, **ಪರಿಪೂರ್ಣಬ್ರಹ್ಮಾನುಭವರೂಪವಾದ, ಮುಕ್ತೈಶ್ವರ್ಯಮಿರುಕ್ಕುಮಪ್ಪಡಿಯುಮ್**- ಮುಕ್ತೈಶ್ವರವು ನಮ್ಮ ಸಿದ್ಧಾನ್ತ ಪ್ರಕಾರ ಇರುವ ಮಾಹಾತ್ಮ್ಯೆಯ ವೈಲಕ್ಷಣ್ಯವನ್ನು, ಇತರ ಸಿದ್ಧಾಂತಗಳು, ಶಾಸ್ತ್ರದಲ್ಲಿ ಹೇಳುವ ಹಾಗೆ ಮುಕ್ತೈಶ್ವರ್ಯವು ಹೀನವಾದುದಲ್ಲವು. ಹಾಗಲ್ಲದೆ ತುಂಬಾ ಮಹತ್ತಾದುದು ಎಂಬುದು **ಮುಕ್ತೈಶ್ವರ್ಯ**ವೆಂಬ ಪ್ರಯೋಗದಿಂದ ತೋರಿಬರುತ್ತದೆ; **(೨೩) ಇಪ್ಪಡಿ ಉಕ್ತಮಾನ ಜ್ಞಾತವ್ಯಙ್ಗಳಿಲ್**-ಗ್ರಂಥಾದಿಯಲ್ಲಿ ಹೇಳಲ್ಪಟ್ಟ ಮೋಕ್ಷಾರ್ಥಿಯೂ ಮತ್ತು ಪ್ರಪನ್ನನೂ ತಿಳಿಯಬೇಕಾದ ಅಂಶಗಳಲ್ಲಿ, **ಪ್ರಧಾನಮಾನ**-ಮುಖ್ಯವಾದ, **ಸಾಧ್ಯೋಪಾಯವು** ವ್ಯಾಜಮಾತ್ರವಾದುದಾಗಿ, ಫಲಪ್ರದನು ಸಿದ್ಧೋಪಾಯನೇಯಾದುದರಿಂದ ಪ್ರಧಾನಮಾನ ಎಂಬ ಪ್ರಯೋಗವು; ಅಥವಾ ಸಿದ್ಧೋಪಾಯನೆಂದು ತಿಳಿಯುವದು ಜ್ಞಾತವ್ಯದಲ್ಲಿ ಪ್ರಧಾನವು, ಸಾಧ್ಯೋಪಾಯವು ಕರ್ತವ್ಯದಲ್ಲಿ ಪ್ರಧಾನವು; ಹೀಗೆ ಮುಖ್ಯವಾದ **ಸಿದ್ಧೋಪಾಯತ್ತೈಯುಮ್**-ಸಿದ್ಧೋಪಾಯನೇ ಎಂಬುದನ್ನು, ಇದರಲ್ಲಿ ಸಿದ್ಧೋಪಾಯನೆಂಬ ವಿಷಯದಲ್ಲಿ ಉಂಟಾಗಬಹುದಾದ ಸಂಶಯ ಪೂರ್ವಪಕ್ಷಗಳ ನಿರಸನವು ಅಂತರ್ಗತವು; ಇದು ಸಿದ್ಧೋಪಾಯ ಶೋಧನಾಧಿಕಾರಾರ್ಥವು; **(೨೪) ಕರ್ತವ್ಯಙ್ಗಳಿಲ್**-ಅನುಷ್ಠಿಸಬೇಕಾದವುಗಳಲ್ಲಿ, **ಪ್ರಧಾನಮಾನ ಸಾಧ್ಯೋಪಾಯತ್ತೈಯುಮ್**-ಮುಖ್ಯವಾದ ಸಾಧ್ಯೋಪಾಯವನ್ನೂ ಭಕ್ತಿ ಪ್ರಪತ್ತಿಗಳಲ್ಲಿ ಒಂದನ್ನೂ, ಇಲ್ಲಿ **ಪ್ರಧಾನಮಾನ**ವೆಂಬ ಪ್ರಯೋಗದಿಂದ ಈ ಸಾಧ್ಯೋಪಾಯಾನುಷ್ಠಾನವಿಲ್ಲದೆ ಮೋಕ್ಷವಿಲ್ಲ

**ಪಾಯನಿಷ್ಠನುಡೈಯ ಪ್ರಭಾವತ್ತಿಲ್ ಶಾಸ್ತ್ರಂಗಳಿಶೈಯಾದ ಏತ್ತಚ್ಚು ರುಕ್ಕಂಗಳುಮ್ಪತ್ತಿ ಆಹಾರದೋಷಹೈತುಕಸಂಸರ್ಗಯುಗ ಸ್ವಭಾವಾದಿ ಗಳಾಲೇ ವರುಮ್ ಕಲಕ್ಕಂಗಳುಕ್ಕುಪ್ಪಣ್ಣುಮ್ ಪರಿಹಾರಪ್ರಕಾರ ಙ್ಗಳುಮ್ (೨೭, ೨೮, ೨೯) ಇವೈಎಲ್ಲಾಮ್ ಅನುಸಂಧಿಕ್ಕೈಕ್ಕು ಮುಖ ಮಾನ ರಹಸ್ಯತ್ರಯತ್ತಿಲ್ ಪದವಾಕ್ಯ ಯೋಜನೈಗಳುಮ್; (೩೦)ಇವ್ವ**

---

ವೆಂಬುದನ್ನು ಸೂಚಿಸುವುದಕ್ಕಾಗಿ, ಕರುಣಾಳುವಾದ ಭಗವಂತನು, ಹೆತ್ತ ತಾಯಿಯು ಮಗುವನ್ನು ತಾನೇ ರಕ್ಷಿಸುವ ಹಾಗೆ, ತಾನೇ ಸ್ವತಂತ್ರಿಸಿ ರಕ್ಷಿಸೆಂಬ ಅಭಿಪ್ರಾಯ ಯವನ್ನು ನಿರಾಕರಿಸುವುದಕ್ಕಾಗಿಯೂ ಎಂದು ಭಾವಿಸಬಹುದು ; ಇಷ್ಟು ಮಾತ್ರವೇ ಅಲ್ಲದೆ ಇನ್ನೂ ಇತರ ಸಂಶಯಪೂರ್ವಪಕ್ಷಗಳಿಗೂ ಈ ಅಧಿಕಾರದಲ್ಲಿ ಉಪಪಾದಿತ ವೆಂಬುದು ಸೂಚಿತವು. ಇದು ಸಾಧ್ಯೋಪಾಯ ಶೋಧನಾಧಿಕಾರಾರ್ಥವು; (೨೫-೨೬) **ಇವ್ವುಪಾಯನಿಷ್ಠನುಡೈಯ**-ಈ ಭರನ್ಯಾಸವನ್ನು ಅನುಷ್ಠಿಸಿದ ಪ್ರಪನ್ನನ, **ಪ್ರಭಾವತ್ತಿಲ್**-ಮಾಹಾತ್ಮ್ಯೆಯಲ್ಲಿ, **ಶಾಸ್ತ್ರಙ್ಗಳ್ ಇಶೈಯಾದ**-ಶಾಸ್ತ್ರಗಳು ಅನುಮತಿಯನ್ನು ಕೊಡದ, **ಏತ್ತಚುರುಕ್ಕಂಙ್ಗಳಮ್ಪತ್ತಿ**-ಆ ಮಹಾತ್ಮ್ಯೆಯನ್ನು ಅತಿಶಯಿಸಿ ಮತ್ತು ತಗ್ಗಿಸಿ ಹೇಳಿಕೆಗಳನ್ನು ಕುರಿತು, **ಆಹಾರ ದೋಷ**-ಆಹಾರದೋಷಗಳೇನು, **ಹೈತುಕಸಂಸರ್ಗ**-ಕುತರ್ಕಿಗಳೊಂದಿಗೆ ಸಂಬಂಧ ವೇನು, **ಯುಗಸ್ವಭಾವಾದಿಗಳಾಲೇ**-ಕಲಿಯುಗ ಧರ್ಮ ಮೊದಲಾದುವುಗಳಿಂದ, **ವರುಮ್ ಕಲಕ್ಕಂಗಳುಮ್**-ಉಂಟಾಗುವ ಆಕ್ಷೇಪಗಳಿಗೆ, **ಪಣ್ಣುಮ್ ಪರಿ ಹಾರ ಪ್ರಕಾರಙ್ಗಳುಮ್**-ಮಾಡುವ ಪರಿಹಾರ ಕ್ರಮಗಳನ್ನೂ, ಇಲ್ಲಿ ಆದಿಪದ ದಿಂದ **ಜಾತಿವ್ಯವಸ್ಥೆಯಿಲ್ಲದೆ ಭಗವದ್ಭಕ್ತ ಶೂದ್ರನೂ** ಮಹಾಭಾಗವತನೇ, ಪ್ರಪನ್ನನಿಗೆ ಬುದ್ಧಿಪೂರ್ವಾಘದ ಅಲೇಪನ, ಇತ್ಯಾದಿಗಳು ಹೇಳಲ್ಪಟ್ಟವು, ಇಂತಹ ಶಾಸ್ತ್ರಸಮ್ಮತವಲ್ಲದ ವಾದಗಳಿಗೆಲ್ಲಾ ಸಮಾಧಾನಗಳು ಹೇಳಲ್ಪಟ್ಟವೆ; ಶಾಸ್ತ್ರದುಷ್ಟ ವಾದ ಆಹಾರವು ಶೂದ್ರ ಭಾಗವತನು ಸ್ಪರ್ಶಿಸಿದರೆ ಅದು ಉಪಾದೇಯವಾಗುತ್ತದೆ, ಇವೇ ಮೊದಲಾದ ಕುತರ್ಕಗಳಿಗೆಲ್ಲಾ ಶಾಸ್ತ್ರಪ್ರಮಾಣಗಳೊಂದಿಗೆ ಸಮಾಧಾನ ಗಳು ಹೇಳಲ್ಪಟ್ಟವೆ ಎಂಬ ಭಾವವು. ಇವು ಪ್ರಭಾವ ವ್ಯವಸ್ಥಾ ಮತ್ತು ಪ್ರಭಾವರ ಕಾಧಿಕಾರಗಳ ಅರ್ಥಗಳು.

**(೨೭, ೨೮, ೨೯) ಇವೈಎಲ್ಲಾಮ್**-ಹೀಗೆ ಇಪ್ಪತ್ತಾರು ಅಧಿಕಾರದಲ್ಲಿ ಹೇಳಿ ರುವುದೆಲ್ಲವನ್ನೂ, **ಅನುಸಂಧಿಕ್ಕೈಕ್ಕು**, ಅನುಸಂಧಾನ ಮಾಡುವುದಕ್ಕೆ, **ಮುಖ ಮಾನ**-ಮೂಲಭೂತವಾಗಿರುವ, **ರಹಸ್ಯತ್ರಯತ್ತಿಲ್**– ಮೂಲಮನ್ತ್ರದ್ವಯ ಚರಮಶ್ಲೋಕದಲ್ಲಿ, **ಪದ, ವಾಕ್ಯ ಮತ್ತು ಯೋಜನೈಗಳುಮ್**-ಇವುಗಳ ಪದ ಗಳಿಂದುಂಟಾಗುವ ವಾಕ್ಯಾರ್ಥಗಳೂ, ಪದಗಳನ್ನು ಸೇರಿಸುವುದರಿಂದ ಉಂಟಾಗುವ

**ರ್ಥಂಗಳುಕ್ಕೆಲ್ಲಾವುಮ್ ಯಥಾಶಾಸ್ತ್ರಂ ಸಂಪ್ರದಾಯ ಪ್ರವರ್ತನವುಮ್ ಪಣ್ಣುವುಮ್ ಆಚಾರ್ಯನುಕ್ಕು ಉಪದೇಶಾದಿಪ್ರವೃತ್ತಿ ನಿವೃತ್ತಿ ವಿಷಯಂಗಳಿರುಕ್ಕುಮ್ಪಡಿಯುಮ್; (೩೧) ಇಪ್ಪಡಿ ಪರಮೋಪಕಾರನಾನ ಆಚಾರನ್ ತಿರತ್ತಿಲ್ ತಕುದಿಯಾನ ಪ್ರತ್ಯುಪಕಾರಮಿಲ್ಲಾಮೆಯಾಲೇ ನಿತ್ಯಋಣಿಯಾನ ಶಿಷ್ಯನುಕ್ಕು ಚೆಯ್ಯುವದುಕ್ಕುಮನೈಯುಮೆಲ್ಲಾಮ್; ಶ್ರುತಿಸ್ಮೃತಿ ಸೂತ್ರಸಂಪ್ರದಾಯಙ್ಗಳಾಲುಮ್, ಇವತ್ತುಕ್ಕು ಅನುಕೂಲಙ್ಗಳಾನ ಸಮೀಚೀನ ನ್ಯಾಯಙ್ಗಳಾಲುಮ್ ಅಜ್ಞಾನ ಸಂಶಯ ವಿಪರ್ಯಯಙ್ಗಳರ ಯಥಾಶ್ರುತಂ ಯಥಾಹೃದಯಂ ಉಪಪಾದಿತ್ತೋಮ್.**

---

ರಹಸ್ಯ ಶಾಸ್ತ್ರಾರ್ಥಗಳನ್ನೂ; ಇವರಿಂದ ಮೂಲಮನ್ತ್ರದ್ವಯ ಚರಮಶ್ಲೋಕಾರ್ಥಗಳು ಹೇಳಲ್ಪಟ್ಟವು. ಇದು ಮೂಲಮನ್ತ್ರ, ದ್ವಯ, ಚರಮ ಶ್ಲೋಕಾಧಿಕಾರಗಳ ಅರ್ಥವು. (೩೦) **ಇವ್ವರ್ಥಙ್ಗಳುಕ್ಕೆಲ್ಲಾವುಮ್**-ಈ ಅರ್ಥಾನುಶಾಸನ, ಸ್ಥಿರೀಕರಣ, ಮಂತ್ರಗಳ ಪದವಾಕ್ಯ ಯೋಜನೆ ಇವುಗಳಲ್ಲಿ ಹೇಳಲ್ಪಟ್ಟ ಅಭಿಪ್ರಾಯಗಳನ್ನೆಲ್ಲಾ, **ಯಥಾಶಾಸ್ತ್ರಂ**-ಶಾಸ್ತ್ರಪ್ರಮಾಣಗಳಲ್ಲಿ ಹೇಗೆ ಹೇಳಿದೆಯೋ ಹಾಗೆ, **ಸಂಪ್ರದಾಯಪ್ರವರ್ತನಂ ಪಣ್ಣುವುಮ್**-ತಮ್ಮ ಆಚಾರ್ಯರಿಂದ ತಮಗೆ ಉಪದಿಷ್ಟವಾದ ರೀತಿಯಲ್ಲೇ ತಾವೂ ನಡೆಸುವ, **ಆಚಾರ್ಯನಿಗೆ, ಉಪದೇಶಾದಿ ಪ್ರವೃತ್ತಿನಿವೃತ್ತಿ ವಿಷಯಙ್ಗಳಿರುಕ್ಕುಮ್ಪಡಿಯುಮ್**-ಶಿಷ್ಯನಿಗೆ ಮನ್ತ್ರಾರ್ಥಗಳ ಉಪದೇಶವೇನು, ಆತನಿಗಾಗಿ ಉಪಾಯಾನುಷ್ಠಾನವನ್ನು ಮಾಡಿಸುವುದೇ ಇವೇ ಮೊದಲಾದುವುಗಳಲ್ಲಿ ಹೇಗೆ ಪ್ರವರ್ತಿಸತಕ್ಕದ್ದು ಮತ್ತು ಎಂತಹ ಸಂದರ್ಭದಲ್ಲಿ ಪ್ರವರ್ತಿಸಬಾರದು ಇವೇ ಮೊದಲಾದ ವಿಷಯಗಳಿರುವ ಪ್ರಕಾರವನ್ನೂ, ಇದು ಆಚಾರ್ಯಕೃತ್ಯಾಧಿಕಾರಾರ್ಥವು. (೩೧) **ಇಪ್ಪಡಿ**-ಹೀಗೆ ಸಂಪ್ರದಾಯಕ್ಕನುಗುಣವಾಗಿ ಆಚಾರ್ಯರು ಹಿಂದೆ ಉಪಪಾದಿಸಲ್ಪಟ್ಟ ಅರ್ಥಗಳನ್ನೆಲ್ಲಾ ತನ್ನ ಶಿಷ್ಯರಿಗೆ ಉಪದೇಶಿಸಿ, ಹೀಗೆ **ಪರಮೋಪಕಾರನಾನ**-ನಿರತಿಶಯ ಉಪಕಾರ ಮಾಡಿದ, **ಆಚಾರ್ಯತಿರತ್ತಿಲ್**-ಆಚಾರ್ಯರ ವಿಷಯದಲ್ಲಿ, **ತಕುದಿಯಾನ**-ಯೋಗ್ಯವಾದ, **ಪ್ರತ್ಯುಪಕಾರಂ**-ಶಿಷ್ಯನು ಮಾಡಬೇಕಾದ ಪ್ರತ್ಯುಪಕಾರವು, **ಇಲ್ಲಾಮೈಯಾಲೇ**-ಇಲ್ಲವಾದುದರಿಂದ, **ನಿತ್ಯಋಣಿಯಾನ**-ಮುಂದಕ್ಕೆಲ್ಲಾ ಯಾವಾಗಲೂ ಋಣಿಯಾದ, **ಶಿಷ್ಯನುಕ್ಕು**-ಶಿಷ್ಯನಿಗೆ, **ಚೆಯ್ಯುವದಕ್ಕುಮನೈಯುಮ್**-ಆತನ ಇತಿಕರ್ತವ್ಯತಾವಾದವೆಲ್ಲವನ್ನೂ; ಇದು ಶಿಷ್ಯಕೃತ್ಯಾಧಿಕಾರಾರ್ಥವು; ಹೀಗೆ ೩೧ ಅಧಿಕಾರಾರ್ಥಗಳನ್ನೆಲ್ಲಾ, **ಉಪಪಾದಿತ್ತೋಮ್** ಎಂಬುದರೊಂದಿಗೆ ಅನ್ವಯವು; ೩೨ನೆ **ಅಧಿಕಾರಾರ್ಥವೇ** ಇದು; ಅವುಗಳ ಸಂಗ್ರಹವು; ಹೇಗೆ ಉಪಪಾದಿಸಿ ಹೇಳಿದರೆಂದರೆ ತಿಳಿಸುತ್ತಾರೆ. **ಶ್ರುತಿಸ್ಮೃತಿಸೂತ್ರಸಂಪ್ರದಾಯಙ್ಗಳಾಲುಮ್**-ಶ್ರುತಿ ಪ್ರಮಾಣಗಳಿಂದಲೂ, ಸ್ಮೃತಿ ಪ್ರಮಾಣಗಳಿಂದಲೂ, ಬ್ರಹ್ಮಸೂತ್ರಗಳನ್ನು

## ನಿಗಮನೇ ಫಲಶ್ರುತಿವ್ಯೂಹ

**ಇವ್ವರ್ಥಙ್ಗಳೈಯೆಲ್ಲಾಮ್ ಮುನ್ಬಡ ಸತ್ಸಂಪ್ರದಾಯಮುಡೈಯ ಸದಾಚಾರ್ಯರ್ಗಳ್ ಪಕ್ಕಲಿಲೇ ಸಮ್ಯಗುಪಸನ್ನನಾಯ್, (೧) "ಶಿಷ್ಯಸ್ತೇಹಂ**

---

ಉದಾಹರಿಸುವುದರಿಂದ, ಹಿಂದಿನ ಆಚಾರ್ಯರುಗಳ ದಿವ್ಯಸೂಕ್ತಿ ಪ್ರವೃತ್ತಿ ಮೊದಲಾದುವುಗಳಿಂದಲೂ, **ಇವತ್ತುಕ್ಕು** ಈ ಪ್ರಮಾಣಗಳಿಗೆ, **ಅನುಕೂಲಙ್ಗಳಾನ**-ಅನುಸರಿಸಿದ, **ಸಮೀಚೀನ ನ್ಯಾಯಙ್ಗಳಾಲುಮ್**-ಒಳ್ಳೆಯ ತರ್ಕವೆಂದರೆ ಸತ್ತರ್ಕಗಳಿಂದಲೂ, ಶಾಸ್ತ್ರ ಪ್ರಮಾಣಗಳನ್ನು ಅನುಸರಿಸಿದ ತರ್ಕವು ಸತ್ತರ್ಕವೆನಿಸುತ್ತದೆ. ಶಾಸ್ತ್ರವನ್ನು ಬಿಟ್ಟುವಾಡುವ ತರ್ಕವು ಕುತರ್ಕವು, ಇವು ಗ್ರಾಹ್ಯವಲ್ಲವು. ಇಂತಹ ಸತ್ತರ್ಕಗಳಿಂದಲೂ, **ಅಜ್ಞಾನ, ಸಂಶಯ, ವಿಪರ್ಯಯ**ವೆಂದರೆ ಶಾಸ್ತ್ರಕ್ಕೆ ವ್ಯತ್ಯಸ್ತವಾದ ಭ್ರಮೆಗಳು, **ಅರ**-ಇಲ್ಲದ ಹಾಗೆ, **ಯಥಾಶ್ರುತಂ**-ತಾವು ತಮ್ಮ ಆಚಾರ್ಯರ ಮೂಲಕ ಹೇಗೆ ಕೇಳಿ ತಿಳಿದರೋ ಹಾಗೆಯೂ, ಮತ್ತು **ಯಥಾಹೃದಯಂ**-ತಮ್ಮ ಆಚಾರ್ಯರ ಕೃಪಾಪ್ರಭಾವ ಮೂಲಕವಾಗಿ ಅವರ ಅಭಿಪ್ರಾಯವಿದು ಎಂದು ಹೇಗೆ ತಮ್ಮ ಮನಸ್ಸಿಗೆ ನಿಸ್ಸಂಶಯವಾಗಿ ತೋರಿತೋ ಆ ಮೇರಿಗೆ, **ಉಪಪಾದಿತ್ತೋಮ್**-ಉಪಪಾದಿಸಿ ಹೇಳಿದೆವು. ಇದುವರೆಗೂ ಹೇಳಿದುದೆಲ್ಲಾ ಈ ಅಧಿಕಾರದ ಸಂಸ್ಕೃತ ಶ್ಲೋಕದ ಪೂರ್ವಾರ್ಧದ ವಿವರಣೆಯಾಯಿತು. ಮುಂದೆ ಉತ್ತರಾರ್ಧದ ವಿವರಣೆಯು ಉಪದೇಶಿಸಲ್ಪಡುತ್ತದೆ.

ತಾವು ಈಗ ಉಪದೇಶಿಸಿದುದು ಮಹತ್ತಾದುದು. ಶ್ರುತಿಸ್ಮೃತಿ ಸೂತ್ರಗಳ ಬಲವಿರುವಂತಾದ್ದು; ತಮಗೆ ಬಂದಿರುವ ಉಪದೇಶವೆಲ್ಲಾ ಪರಮ ಪ್ರಾಜ್ಞರೆಂದು ಪ್ರಶಸ್ತಿಯುಳ್ಳ ನಡಾದೂರಮ್ಮಾಳ್‌ರವರ ಪರಮಶಿಷ್ಯರಾದ ಆತ್ರೇಯ ರಾಮಾನುಜರೆಂದೂ ಮತ್ತು ಕಿಡಾಂಬಿ ಅಪ್ಪುಳ್ಳಾರೆಂದೂ ಅಪರ ನಾಮಧೇಯವನ್ನುಳ್ಳ ಪ್ರಾಜ್ಞರಾದ ಮಹಾನುಭಾವರಿಂದ ಕೇಳಿ ತಿಳಿದುದು. ಹೀಗೆ ಶಾಸ್ತ್ರ ಬಲವೂ ಸಂಪ್ರದಾಯ ಬಲವೂ, ಎರಡಕ್ಕೂ ಸಾಮಂಜಸ್ಯವಿರುವ ಅಮೋಘ ವಾದ ಗ್ರಂಥವು, ಹೀಗಿರುವಾಗ ಇನ್ನು ಬೇರೆ ಆಚಾರ್ಯರನ್ನು ಆಶ್ರಯಿಸುವುದು ಏತಕ್ಕೆ? ಎಂಬ ಪ್ರಶ್ನೆಯು ಒದಗಬಹುದಾದುದರಿಂದ ಅದಕ್ಕೆ ಸಮಾಧಾನವಾಗಿ ಆಚಾರ್ಯೋಪದೇಶದ ಆವಶ್ಯಕತೆಯನ್ನು ಪ್ರದರ್ಶಿಸಿ, ಅದರಿಂದುಂಟಾಗುವ ಪ್ರಯೋಜನಗಳನ್ನು ತಿಳಿಸುತ್ತಾರೆ. ಈ ಗ್ರಂಥವನ್ನೂ ಕೂಡ ಆಚಾರ್ಯರ ಮೂಲಕವಾಗಿಯೇ ಅಧಿಕರಿಸತಕ್ಕದ್ದೆಂಬಂಶವನ್ನು ಉಪದೇಶಿಸುತ್ತಾರೆ. ಆಚಾರ್ಯೋಪದೇಶವು ಇದಕ್ಕೆ ಅನುಗುಣವಾಗಿಯೇ ಇರಬೇಕೆಂಬ ಭಾವವನ್ನು ಉಪದೇಶಿಸುತ್ತಾರೆ. ,ಆಚಾರ್ಯೋಪದೇಶವು ಇದಕ್ಕೆ ಅನುಗುಣವಾಗಿಯೇ ಇರಬೇಕೆಂಬ ಭಾವವನ್ನು ನಾವು ಗ್ರಹಿಸಬಹುದು.

**ನಿಗಮನದಲ್ಲಿ ಫಲಶ್ರುತಿಯನ್ನು ಹೇಳುತ್ತಾರೆ.**

**ಇವ್ವರ್ಥಙ್ಗಳೈಯೆಲ್ಲಾಮ್**-ಈ ಗ್ರಂಥದಲ್ಲಿ ಹೇಳಿರುವ ಅಭಿಪ್ರಾಯ

**ಶಾಧಿವಮಾಂ ತ್ವಾಂ ಪ್ರಪನ್ನಮ್" ಎನ್ರು ವಿಣ್ಣಪ್ಪಂ ಶೆಯ್‌ದು ಸಾದರ ನಾಯ್ ವಿಶದವಾಕ ಶ್ರವಣಂ ಪಣ್ಣಿ ಇವತ್ತುಕ್ಕು ಉಪಯುಕ್ತಙ್ಗ ಳಾನ ನಲ್‌ವಾರ್ತ್ತೈಗಳೈಯುಮ್, (೨) "ಸುವ್ಯಾಹೃತಾನಿ ಮಹತಾಂ ಸುಕೃತಾನಿ ತತಸ್ತತಃ। ಸಂಚಿನ್ವನ್ ಧೀರ ಆಸೀತ ಸಿಲಹಾರೀ ಸಿಲಂ ಯಥಾ" ಎಙ್ಗರಪಡಿಯೇ ಆಯ್‌ನ್ದೆಡುತ್ತು ಅಭ್ಯಾಸಭೂಯಸ್ತೈ ಯಾಲೇ ತೆಳಿನ್ದುಕೊಳ್ವದು.**

---

ಗಳನ್ನೆಲ್ಲಾ, **ಮುರ್ಪಡ**-ಪ್ರಥಮತಃ, **ಸತ್ಸಂಪ್ರದಾಯಮುಡೈಯ**-ಸದ್ಗುರುವಿನ ಮೂಲಕವಾಗಿ ಉಪದೇಶವನ್ನು ಹೊಂದಿದ, **ಸದಾಚಾರ್ಯರ್ಪಕ್ಕಲಿಲೇ**-ಒಳ್ಳೆ ಪ್ರಾಜ್ಞರಾಗಿ ಕರ್ಮನಿಷ್ಠೆ ಜ್ಞಾನನಿಷ್ಠೆಗಳಿಂದ ಶೋಭಿಸುವ ಆಚಾರ್ಯರ ಸನ್ನಿಧಿಯಲ್ಲಿ **ಸಮ್ಯಗುಪಸನ್ನನಾಯ್**-ಚೆನ್ನಾಗಿ ಹೋಗಿ ಸೇರಿದವನಾಗಿ ಎಂದರೆ **"ಪ್ರಣಿ ಪ್ರತ್ಯಾಭಿವಾದ್ಯ ಚ"** ಎಂಬಲ್ಲಿ ಹೇಳಿರುವ ಹಾಗೆ ಆಚಾರ್ಯರಲ್ಲಿ ಹೋಗಿ ಅವರಿಗೆ ನಮುಸ್ಕರಿಸಿ, ಅವರು ಗೃಹಸ್ಥರಾಗಿದ್ದರೆ ಅಭಿವಾದನವನ್ನು ಮಾಡಿ, ಯತಿಯಾಗಿದ್ದರೆ ನಮುಸ್ಕಾರ ಮಾಡಿ ದೈನ್ಯದಿಂದ ಪ್ರಾರ್ಥಿಸತಕ್ಕದ್ದೇದೆಂದರೆ? **"ಶಿಷ್ಯಸ್ತೇಽಹಂ ಶಾಧಿಮಾಮ್‌ತ್ವಾ ಪ್ರಪನ್ನಮ್"** ತಮ್ಮ ಶಿಷ್ಯನನ್ನಾಗಿ ಮಾಡಿಕೊಂಡು ಉಪ ದೇಶಿಸಬೇಕು, ಪ್ರಪನ್ನನಾಗಬೇಕೆಂಬ ಅಭಿಲಾಷೆಯಿಂದ ಬಂದಿರುವೆನೆಂಬಲ್ಲಿ ದಾಸನು ಬರೆದಿರುವ ಗೀತಾ ಕನ್ನಡ ವ್ಯಾಖ್ಯಾನವನ್ನು ಪರಾಂಬರಿಸಿ. **ಎಙ್ಗರಪಡಿಯೇ**-ಎಂಬಲ್ಲಿ ಹೇಳಿರುವ ಹಾಗೆ, **ವಿಣ್ಣಪ್ಪಂಶೆಯ್‌ದು**-ವಿಜ್ಞಾಪಿಸಿಕೊಂಡು, ಎಂದರೆ ಪ್ರಾರ್ಥನೆಯನ್ನು ಮಾಡಿ, **ಸಾದರನಾಯ್**-ತುಂಬಾ ಆದರವುಳ್ಳವನಾಗಿ, ತುಂಬಾ ಶ್ರದ್ಧೆಯಿಂದ, **ವಿಶದಮಾಗ**-ಚೆನ್ನಾಗಿ ಮನಸ್ಸಿಗೆ ಹಿಡಿಯುವ ಹಾಗೆ ವಿಶದವಾಗಿ, **ಶ್ರವಣಂ ಪಣ್ಣಿ**-ಈ ಗ್ರಂಥವನ್ನು ಅವರಲ್ಲಿ ಕಾಲಕ್ಷೇಪ ಮೂಲಕ ಕೇಳಿ ತಿಳಿದು, **ಇವತ್ತುಕ್ಕು ಉಪಯುಕ್ತಂಗಳಾನ**-ಇಲ್ಲಿರುವ ಅಭಿಪ್ರಾಯಗಳಿಗೆ ಸಮರ್ಥ ನೆಯ ರೂಪದಲ್ಲಿ ಉಪಯೋಗಗಳಾದ, **ನಲ್‌ವಾರ್ತ್ತೈಗಳೈಯುಮ್**-ಶ್ರುತಿಸ್ಮೃತಿ ಪೂರ್ವಾಚಾರ್ಯ ಆಳ್ವಾರ್ ದಿವ್ಯಸೂಕ್ತಿಗಳನ್ನು,(೨) **ಮಹತಾಂ**-ಮಹಾಪ್ರಾಜ್ಞರುಗಳ, **ಸುವ್ಯಾಹೃತಾನಿ**-ದಿವ್ಯ ಸೂಕ್ತಿಗಳನ್ನೂ, **ಸುಕೃತಾನಿ**-ಸಮೀಚೀನವಾದ ಅನುಷ್ಠಾ ನಗಳನ್ನೂ, **ತತಸ್ತತಃ**-ಆ ಪ್ರಾಜ್ಞರುಗಳ ಜ್ಞಾನಾನುಷ್ಠಾನಗಳಿಂದ, **ಸಿಲಹಾರೀ**-ಧಾನ್ಯವು ಬಿದ್ದಿರುವುದನ್ನು ಆರಿಸುವವನು, **ಸಿಲಂ ಯಥಾ**-ಹೇಗೆ ಭತ್ತವನ್ನು ಆರಿ ಸುತ್ತಾನೋ, ಹಾಗೆ, **ಸಂಚಿನ್ವನ್**-ಹ ಡುಕಿ ಆರಿಸಿಕೊಂಡು, **ಧೀರಂ- ಧಿಯಾ ರಮತೀತಿ ಧೀರಃ** ಎಂಬವ್ಯುತ್ಪತ್ತಿ ರೀತ್ಯಾ ಪ್ರಾಜ್ಞತೆಯಿಂದ ರಮಿಸುವವನಾಗಿ, **ಆಸೀತ್**-ಇರತಕ್ಕದ್ದು" **ಎಙ್ಗರಪಡಿಯೇ**-ಎಂಬಲ್ಲಿ ಹೇಳಿರುವ ಹಾಗೆ, **ಆಯ್‌ನ್ದುಎಡೆತ್ತು**-ಆ ದಿವ್ಯ ಸೂಕ್ತಿಗಳನ್ನೂ ಅನುಷ್ಠಾನ ಕ್ರಮಗಳನ್ನೂ ಆರಿಸಿ ತೆಗೆದು,

---

(೧) ಗೀ. ೨.೭ (೨) ಭಾರ. ಉದ್ಯೋಗ ೩೪.೩೪

**ಅಭ್ಯಾಸಭೂಯಸ್ತ್ವಯಾಲೇ**-ಅವುಗಳನ್ನೇ ಅಧಿಕವಾಗಿ ಅಭ್ಯಾಸ ಮಾಡುವುದರ ಮೂಲಕ, **ತೆಳಿನ್ದುಕೊಳ್ವದು**-ಜ್ಞಾನವನ್ನು ಹೊಂದತಕ್ಕದ್ದು. ಇದು ವಿದುರ ವಾಕ್ಯವು. ಧೃತರಾಷ್ಟ್ರನು ವಿದುರರನ್ನು ಪ್ರಶ್ನಿಸುತ್ತಾನೇನೆಂದರೆ; ದುರ್ಯೋಧನನಿಗೆ ಏನನ್ನುಪದೇಶಿಸಿದರೆ ಪಾಂಡವರಿಗೆ ರಾಜ್ಯವನ್ನು ಕೊಟ್ಟುಬಿಟ್ಟಾನು, ಅದನ್ನು ತಿಳಿಸು ಎಂದು ಕೇಳಿದ ಸಂದರ್ಭದಲ್ಲಿ ಹೇಳುವ ಮಾತು; ಹೇಳುವವರು ಎಷ್ಟು ನಿಕೃಷ್ಟರಾದರೂ ಅದರಲ್ಲಿ ಸಾರವಾದ ಭಾಗವಿದ್ದರೆ ಗ್ರಹಿಸತಕ್ಕದ್ದಾಗಿರುವಾಗ ಮಹಾಪ್ರಾಜ್ಞರಾದವರ ದಿವ್ಯಸೂಕ್ತಿಗಳನ್ನೂ ಅನುಷ್ಠಾನಗಳನ್ನೂ ಪರಿಶೀಲಿಸಿ ಸಾರವಾದುವುಗಳನ್ನೂ ಆರಿಸಿ ತೆಗೆದುಕೊಂಡು ಅದರ ಹಾಗೆ ನಡೆಯಬೇಕೆಂದು ಹೇಳುವ ಸಂದರ್ಭವು.

ಹೀಗೆ ತಾವು ಬರೆದಿರುವ ಗ್ರಂಥವನ್ನೂ ಸ್ವಾಚಾರ್ಯಮುಖೇನ ಕಾಲಕ್ಷೇಪವನ್ನು ಮಾಡಿಯೇ ಕೇಳಿ ತಿಳಿಯತಕ್ಕದ್ದು. ಹಾಗೆ ಮಾಡುವುದರಲ್ಲಿ ಈ ಗ್ರಂಥದಲ್ಲಿನ ಅಭಿಪ್ರಾಯಗಳ ಸಮರ್ಥನೆಗಾಗಿ ಆ ಪ್ರಾಜ್ಞರಾದ ಆಚಾರ್ಯರುಗಳು ಆಳ್ವಾರ್ರವರ ದಿವ್ಯಸೂಕ್ತಿಗಳನ್ನೂ ಪ್ರಾಜ್ಞರಾದ ಪೂರ್ವಾಚಾರ್ಯರುಗಳೂ ಮಹರ್ಷಿಗಳೂ ಮೊದಲಾದವರುಗಳ ದಿವ್ಯಸೂಕ್ತಿಗಳನ್ನೂ ಅನುಷ್ಠಾನಗಳನ್ನೂ ಉದಾಹರಿಸುವುದರಿಂದ ಅವುಗಳಲ್ಲಿ ಸಾರವಾದವುಗಳನ್ನು ಆರಿಸಿ ತೆಗೆದಿಟ್ಟುಕೊಂಡು, ಗ್ರಂಥದಲ್ಲಿ ಬರೆದಿರುವ ತತ್ವಜ್ಞಾನವನ್ನು ಹೊಂದಿ ಹಿತವನ್ನು ಆಚರಿಸಿ, ಪುರುಷಾರ್ಥವನ್ನು ಹೊಂದತಕ್ಕದ್ದೆಂಬ ಭಾವವನ್ನು ಸೂಚಿಸಿದರು.

ಆಗಲಿ ಧರ್ಮವು ಅತಿಸೂಕ್ಷ್ಮವೆಂದೂ, ತುಂಬಾ ಗುಹ್ಯತಮವೆಂದೂ, ಮಹಾಪ್ರಾಜ್ಞರಿಗೂ ಕೂಡ ದುರ್ಜ್ಞೇಯವೆಂದೂ ಹೀಗೆಲ್ಲಾ ಹೇಳಿರುವಾಗ ತಾವು ಬರೆದ ಅಭಿಪ್ರಾಯಗಳ ಯಾಥಾತ್ಮ್ಯ ತಾನೇ ಹೇಗೆ? ಎಂದು ಯಾರಾದರೂ ಸಂಶಯಪಟ್ಟಾರೋ ಎಂದು ಭಾವಿಸಿ, ಅಂತಹ ಪೂರ್ವಪಕ್ಷವನ್ನು ಉಪಪಾದಿಸಿ ಸಮಾಧಾನವನ್ನು ಹೇಳುತ್ತಾರೆ– ಈ ಗ್ರಂಥವನ್ನು ರಚಿಸುವ ಸಂದರ್ಭದಲ್ಲಿ ಸ್ವಾಮಿ ಶ್ರೀನಿವಾಸನು ಕೊಟ್ಟ ಪ್ರಜ್ಞಾಬಲ ಮಾತ್ರದಿಂದಲೇ ಬರೆಯಲಿಲ್ಲವು. ಧರ್ಮವು ಅತಿ ಸೂಕ್ಷ್ಮವೆಂಬುದನ್ನೂ ದುರ್ಜ್ಞೇಯವೆಂಬುದನ್ನೂ ಒಪ್ಪಿದೆನು; ಆದರೆ ಮಹಾಜನರಾದ ಪೂರ್ವಾಚಾರ್ಯರುಗಳು ಹೀಗೆ ದುರ್ಜ್ಞೇಯವಾಗಿ ಮುಳ್ಳುಗಳಿಂದ ಆವೃತವಾದ ಮಾರ್ಗವನ್ನು ಶೋಧಿಸಿ, ರಾಜಮಾರ್ಗವಾಗಿ ಮಾಡಿದ ಸುಪಥವನ್ನು ತಾವು ಅವಲಂಬಿಸಿರುವುದರಿಂದ ಶಾಸ್ತ್ರಾನುಜ್ಞೆಯೂ ಪರಮಾಚಾರ್ಯರುಗಳ ಉಪದೇಶವೂ ಎರಡೂ ಕಲೆತಿರುವುದು ಆ ರಾಜಮಾರ್ಗವಾದುದರಿಂದ ನಿಸ್ಸಂಶಯವಾಗಿ ಆದನ್ನು ಪರಿಗ್ರಹಿಸಬಹುದೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. ಪೂರ್ವ ಪಕ್ಷಕ್ಕೆ ಮೂರು ಪ್ರಮಾಣಗಳನ್ನೂ, ಅದಕ್ಕೆ ಸಮಾಧಾನವಾಗಿ ಎರಡು ಪ್ರಮಾಣಗಳನ್ನೂ ಉದಾಹರಿಸಿರುತ್ತಾರೆ– (೩) ಇದು ವಾಲಿಯು ಮಾಡುವ ಆಕ್ಷೇಪಣೆಗೆ ಶ್ರೀರಾಮಚಂದ್ರಪ್ರಭುವಿನ

**(೩) "ಸೂಕ್ಷ್ಮಃ ಪರಮದುರ್ಜ್ಞೇಯಸ್ಸತಾಂ ಧರ್ಮಃ ಪ್ಲವಂಗಮ" ಎನ್ರುವಮ್ (೪) "ಧರ್ಮಸ್ಯತತ್ವಂ ನಿಹಿತಂ ಗುಹಾಯಾಮ್" ಎನ್ರುವಮ್, (೫) "ಅಣೀಯರ್ಾಕ್ಷುರಧಾರಾಯಾಃ ಕೋಧರ್ಮಂ ವಕ್ತುಮರ್ಹತಿ?"**

---

ಸಮಾಧಾನ ವಾಕ್ಯವು. ವಾಲಿಯು ನಿನ್ನ ವಿಷಯದಲ್ಲಿ ನಿರಪರಾಧಿಯಾದ ನನ್ನನ್ನು ರಾಜನೀತಿಗೆ ವಿರುದ್ಧವಾಗಿ ಮರೆಯಲ್ಲಿ ನಿಂತು ಕೊಲ್ಲುವುದು ಧರ್ಮವೇ ಎಂದು ಆಕ್ಷೇಪಿಸುತ್ತಾನೆ. ಅದಕ್ಕೆ ಶ್ರೀರಾಮ ಪ್ರಭುವೇ ಸರ್ವಸಮಂಜಸವಾದ ಉತ್ತರವನ್ನು ಹೇಳುವ ಸಂದರ್ಭದಲ್ಲಿನ ವಾಕ್ಯವು. **ಸತಾಂ ಧರ್ಮಃ**–ಪ್ರಾಜ್ಞರಾಗಿ ಸತ್ಪುರುಷರೆನಿಸುವವರ ಧರ್ಮವು, ಇಲ್ಲಿ **ಸತಾಂ ಧರ್ಮಃ** ಎಂಬುದಕ್ಕೆ ಸಾರದೀಪಿಕೆ, ಸಾರಾಸ್ವಾದಿನಿಯವರುಗಳು ಶರಣಾಗತಿಧರ್ಮವೆಂದು ಅರ್ಥ ಮಾಡಿರುತ್ತಾರೆ; ವಾಲಿಯು ಶರಣಾಗತಿ ಧರ್ಮವನ್ನು ತಿಳಿಯದೇ ಹೋದನೆಂಬುದು ಸೂಚಿತವು ; ಅದನ್ನು ತಿಳಿದಿದ್ದ ಪಕ್ಷದಲ್ಲಿ ಆತನಿಗೆ ಹಾನಿ ಇರುತ್ತಿರಲಿಲ್ಲವು. **ಹೇ ಪ್ಲವಂಗಮ**–ಓ ವಾನರನಾದ ವಾಲಿಯೇ **ಸೂಕ್ಷ್ಮಃ**–ತುಂಬಾ ಗೂಢವಾದುದು, ಆದುದರಿಂದ, **ಪರಮದುರ್ಜ್ಞೇಯಃ**–ವಿಶೇಷವಾಗಿ ಎಲ್ಲರಿಂದಲೂ ತಿಳಿಯತಕ್ಕದ್ದಲ್ಲವು; **ಪ್ಲವಂಗಮ** ಎಂಬ ಸಂಬೋಧನೆಯಿಂದ ಸಾಧಾರಣವಾಗಿ ಹೆಚ್ಚು ಜ್ಞಾನವುಳ್ಳ ಮನುಷ್ಯರಿಂದಲೇ ತಿಳಿಯಲಶಕ್ಯವಾದ ಧರ್ಮಸೂಕ್ಷ್ಮವನ್ನು ನಿನ್ನಂತಹ ವಾನರನು ತಿಳಿಯಲಾದೀತೇ ? ಹಾಗಾದರೆ ಯಾರಿಗೆ ತಿಳಿದೀತು ? ಎಂದರೆ, **ಸತಾಂ** ಪ್ರಾಜ್ಞರಾದ ಸತ್ಪುರುಷರಿಗೆ ತಿಳಿಯುವುದು. ಇನ್ನೂ ಯಾರಿಗೆ ಚೆನ್ನಾಗಿ ವ್ಯಕ್ತವಾಗಿ ತಿಳಿಯುವುದು ಎಂದರೆ ಪರತತ್ವವಾದ ತಮಗೆ ತಿಳಿಯುವುದು ಎಂದು ಹೇಳುವದಕ್ಕಾಗಿ ತಿಳಿಸುತ್ತಾರೆ– **ಹೃದಿಸ್ಥಸ್ಸರ್ವಭೂತಾನಾಂ ಆತ್ಮಾವೇದ ಶುಭಾಶುಭಮ್**–ನಿನ್ನ ಹೃದಯ ಗುಹೆಯಲ್ಲೂ ಹಾಗೆಯೇ ಸರ್ವಪ್ರಾಣಿಗಳ ಹೃದಯ ಗುಹೆಯಲ್ಲೂ ಇರುವ ಪರಮಾತ್ಮನು ಶುಭಾಶುಭ ಫಲಗಳಿಗೆ ಕಾರಣಭೂತಗಳಾದ ಧರ್ಮಾಧರ್ಮಗಳನ್ನು ತಿಳಿಯುತ್ತಾನೆ. ಆದುದರಿಂದ ಹುಟ್ಟು ಕುರುಡನು ಹುಟ್ಟು ಕುರುಡನೊಂದಿಗೆ ಆಲೋಚಿಸುವ ಹಾಗೆ ನೀನೇನನ್ನು ಕಂಡಿದ್ದೀ ಎಂದು ಹೇಳಿ ಧರ್ಮಸೂಕ್ಷ್ಮವನ್ನು ತಿಳಿಸುತ್ತಾರೆ. ಅನೇಕರಿಗೆ ಶ್ರೀರಾಮನು ಹೇಳಿರುವ ಸಮಂಜಸವಾದ ಸಮಾಧಾನವು ಸರಿಬೀಳದೆ ತಾವು ಸಮಾಧಾನವನ್ನು ಹೇಳುವವರಾಗಿ ಬಂದು ತಮ್ಮ ಅಹಂಭಾವವನ್ನು ಪ್ರಕಟಿಸಿರುವರೆಂಬುದನ್ನು ಕಂಡಿರುವೆವು." ಸುಗ್ರೀವನು ಶರಣಾಗತನು. ಅಂತವನಿಗೆ ವಾಲಿಯು ಅಧರ್ಮಿಯು ದ್ವೇಷಿಯು.ಅಕಾರಣಹತನು. **ಎನ್ರುವಮ್**-ಎಂಬುದಾಗಿಯೂ, (೪) **ಧರ್ಮಸ್ಯತತ್ವಂ** ಇತ್ಯಾದಿ. **ಧರ್ಮಸ್ಯತತ್ವಂ**–ಧರ್ಮದ ತತ್ವವು, **ನಿಹಿತಂ ಗುಹಾಯಾಂ**-ಗುಹೆಯಲ್ಲಿ ಅಡಗಿರುವುದರ ಹಾಗೆ ಬಹು ರಹಸ್ಯವಾದುದು ಎಲ್ಲರಿಗೂ ವೇದ್ಯವಲ್ಲವು, ಪ್ರಾಜ್ಞರಾದ ಮಹಾಜನಗಳಿಗೆ ಮಾತ್ರವೇ ವೇದ್ಯವು; ಆದುದರಿಂದ ಮುಂದಕ್ಕೆ

---

(೩) ರಾಮಾ, ಕಿಷ್ಕಿಂಧಾ. ೧೮. ೧೫. (೪) ವ್ಯಾಸೋಕ್ತಿಯು

“ **ಮಹಾಜನೋಯೇನ ಗತಸ್ಸಪನ್ಥಾಃ** ” ಎಂದು ಇರುತ್ತದೆ. ಅದನ್ನೇ ಮುಂದಕ್ಕೆ ಉದಾಹರಿಸಿರುತ್ತಾರೆ. ಮಹಾಪ್ರಾಜ್ಞರಾದವರು, **ಯೇನ ಗತಃ**-ಯಾವ ಮಾರ್ಗದಿಂದ ಹೋದರೋ, **ಸಃ**-ಅದೇ, **ಪನ್ಥಾಃ**-ಸರಿಯಾದ ಮಾರ್ಗವು. ಏಕೆಂದರೆ ಮಹರ್ಷಿಯರುಗಳು ಶಾಸ್ತ್ರಾರ್ಥವನ್ನು ವಿಮರ್ಶಿಸಿ ತಿಳಿದು **ಇದಮಿತ್ಥಂ**-ಎಂದು ಸ್ಥಾಪಿಸಿರುತ್ತಾರಾದ ಪ್ರಯುಕ್ತ, ಅವರು ಹೇಳಿದ ಮಾರ್ಗವನ್ನು ಅವಲಂಬಿಸುವುದು ನಮ್ಮ ಕರ್ತವ್ಯವು ಶ್ರೀ ವ್ಯಾಸ ಮಹರ್ಷಿಯು “ **ಆಲೋಡ್ಯ ಸರ್ವ ಶಾಸ್ತ್ರಾಣಿ ವಿಚಾರ್ಯಚ ಪುನಃ ಪುನಃ** ” ಎಂಬಲ್ಲಿ ಹೇಳಿರುವ ಹಾಗೆ ಸರ್ವಶಾಸ್ತ್ರವನ್ನೂ ಅವಲೋಕಿಸಿ ಪರಸ್ಪರ ವಿರೋಧವಿಲ್ಲದ ಹಾಗೆ ಅನ್ವಯಿಸಿ ಧರ್ಮಗಳನ್ನು ಸ್ಥಾಪಿಸಿರುವವರು. ಅಂತವರ ಅಭಿಪ್ರಾಯಗಳೂ ಮತ್ತು ಪ್ರವೃತ್ತಿಗಳೂ ನಮಗೆ ಸರಿಯಾದ ಮಾರ್ಗವನ್ನು ಪ್ರದರ್ಶಿಸುವುವು ಎಂಬ ಭಾವವು. ಇದಕ್ಕೆ ಕಾರಣವನ್ನು ಶ್ರೀ ದೇಶಿಕೇಂದ್ರರು ಸಂಙ್ಕಲ್ಪ ಸೂರ್ಯೋದಲ್ಲಿ.

**“ ತರ್ಕೋ ನ ಪ್ರತಿತಿಷ್ಠತಿ ಪ್ರಭವತಿ ತ್ರಯ್ಯಾಪಿ ವ್ಯೈಯ್ಯಾಕುಲೀ ।**
**ಕ್ಷೋಭಂಯಾನ್ತಿ ಮಿಥಃಕ್ಷತಾ ಋಷಿಗಿರಃ ಕ್ಷುದ್ರೋಕ್ತಯಃ ಕಿಂಪುನಃ।**
**ಇತ್ಥಂ ತತ್ತ್ವವಿನಿಶ್ಚಯೋ ನಿಧಿರಿವ ಕ್ಷಿಪ್ತೋ ಗುಹಾಭ್ಯಾನ್ತರೇ ।**
**ಪನ್ಥಾನಸ್ತು ಮಹಾಜನಸ್ಯ ನಿಪುಣಃ ಪ್ರತ್ಯಂಚ ಮಧ್ಯಂಚತಿ ॥ ೯೦ ॥**

ಇದರ ತಾತ್ಪರ್ಯವೇನೆಂದರೆ– ಬ್ರಹ್ಮಸೂತ್ರದಲ್ಲಿ **“ತರ್ಕ್ಯಾಪ್ರತಿಷ್ಠಾನಾತ್”** ಎಂಬ ಬ್ರಹ್ಮಸೂತ್ರದಲ್ಲಿ ಹೇಳಿರುವ ಹಾಗೆ ಶಾಸ್ತ್ರಬಲವಿಲ್ಲದ ಬರೀ ತರ್ಕದಿಂದ ಪ್ರತಿಷ್ಠಿತವಾದ ಭಾವವು ದೊರೆಯುವುದಿಲ್ಲವು. ವೇದವೂ ಅದರ ಸಾರಭೂತ ಭಾಗವಾದ ಉಪನಿಷತ್ತುಗಳು ಐಕಕಂಠ್ಯದಿಂದ ಅರ್ಥ ಹೇಳುತ್ತವೆ ಎಂದು ಗ್ರಹಿಸುವುದು ಕಷ್ಟವಾಗಿ ಚಿತ್ತಕ್ಕೆ ವ್ಯಾಕುಲವನ್ನುಂಟು ಮಾಡುತ್ತವೆ; ಹೇಗೆಂದರೆ **“ಸದೇವ ಸೋಮ್ಯೇದಮಗ್ರ ಆಸೀತ್ ಏಕಮೇವಾದ್ವಿತೀಯಮ್” “ ದ್ವಾಸುಪರ್ಣಾಸಯುಜಾ ” “ ಭೋಕ್ತಾ ಭೋಗ್ಯಂ ಪ್ರೇರಿತಾರಂಚಮತ್ವಾ ” “ ಆನೀತವಾತಂ ಸ್ವಧಯಾತದೇಕಂ ”** ಇತ್ಯಾದಿ ಶ್ರುತಿಗಳೂ, ೧, ೨, ೩, ೪ ತತ್ತ್ವಗಳುಂಟು ಎಂದು ಹೇಳುತ್ತವೆಯಾದುದರಿಂದ, **ವ್ಯೈಯಾಕುಲೀ**-ಆದರೆ ಪ್ರಾಜ್ಞರು ಇವುಗಳಿಗೆ ಐಕಕಂಠ್ಯವನ್ನೇ ಸ್ಥಾಪಿಸುವರು. ಇವರೇ ವ್ಯಾಸಾದಿಗಳು. ಕಣಾದ, ಕಪಿಲ ಮೊದಲಾದ ಮಹರ್ಷಿಗಳು ಪರಸ್ಪರ ವಿರುದ್ಧಾಭಿಪ್ರಾಯಗಳನ್ನು ಹೇಳಿದರು. ಚಾರ್ವಾಕಾದಿ ವೇದಬಾಹ್ಯರ ಮತ್ತು ವೇದಕ್ಕೆ ಅಪಾರ್ಥಗಳನ್ನು ಹೇಳಿ ವೇದವು ನಡಗುವ ಹಾಗೆ ಮಾಡುವ ಕುದೃಷ್ಟಿಗಳ ಅಭಿಪ್ರಾಯಗಳೆಲ್ಲಾ ಕ್ಷುದ್ರೋಕ್ತಿಗಳೆಂದು ಹೇಳಿದರು. ಆದುದರಿಂದ ಪರಾಶರ ವೇದವ್ಯಾಸ, ಮನು, ವಾಲ್ಮೀಕಿ ಮೊದಲಾದವರೂ, ನಮ್ಮ ಪೂರ್ವಾಚಾರ್ಯರುಗಳಾದ ನಾಥಮುನಿ, ನಮ್ಮ ದರ್ಶನ ಸ್ಥಾಪಕರಾದ ಯತಿವರ್ಯರು ಇವರುಗಳ ಮಾರ್ಗವೇ ನಮಗೆ ಪರ

ವೋಪಾದೇಯವಾದ ಮಾರ್ಗವು ಎಂಬುದು ಈ ಶ್ಲೋಕಾರ್ಥವು.” **ಎನ್ರುವರ್**–
ಎಂಬುದಾಗಿಯೂ

(೫) **ಕ್ಷುರಧಾರಾಯಾಃ**–ಕತ್ತಿಯ ಅಲಗುಗಿಂತಲೂ, **ಅಣೀಯಾನ್**-ಹೆಚ್ಚಾದ ತೀಕ್ಷ್ಣವಾದುದು ಧರ್ಮವು; ಹೀಗಿರುವಾಗ, **ಕಃ**-ಯಾವನು, **ಧರ್ಮಂ**–ಸತ್ಯವಾಗಿ ಧರ್ಮವನ್ನು, **ವಕ್ತುಮರ್ಹತಿ**-ಹೇಳಲು ಯೋಗ್ಯನಾಗುವನು. ತುಂಬಾ ಪ್ರಾಜ್ಞರಿಗೂ ಕೂಡ ಅತಿ ದುರ್ಜ್ಞೇಯವಾದುದರಿಂದ ಕತ್ತಿಯ ಅಲಗಿಗಿಂತ ಸೂಕ್ಷ್ಮವಾದುದು ಎಂದು ಹೇಳಲ್ಪಟ್ಟಿತು. ಭರ್ತೃಲಹರಿಯಲ್ಲಿ ಇಂತಹ ಸತ್ಪುರುಷರು ಎಷ್ಟು ಕಷ್ಟವಾದರೂ ಧರ್ಮವನ್ನು ತ್ಯಜಿಸುವುದಿಲ್ಲವೆಂದು **“ಸತಾಂ ಕೇನೋದ್ದಿಷ್ಟಂ ವಿಷಮಮಸಿಧಾರಾವ್ರತಮಿದಮ್”** ಇಂತಹ ತುಂಬಾ ಕಷ್ಟತರವಾದ ಕತ್ತಿಯ ತೀಕ್ಷ್ಣವಾದ ಅಲಗಿನೋಪಾದಿಯಲ್ಲಿ ತೀಕ್ಷ್ಣವಾದ ಧರ್ಮ ಪರಿಪಾಲನವನ್ನು ಯಾರು ಈ ಸತ್ಪುರುಷರಿಗೆ ಉಪದೇಶಿಸಿದರೋ ತಿಳಿಯದು ಎಂದು ಕವಿಯು ಆಶ್ಚರ್ಯವನ್ನು ಪ್ರದರ್ಶಿಸಿರುತ್ತಾರೆ. ಇದು ಪ್ರಹ್ಲಾದ ವಚನವು. ಪ್ರಹ್ಲಾದನ ಒಬ್ಬನೇ ಮಗನಾದ ವಿರೋಚನನೂ ಸುಧನ್ವನೆಂಬ ಬ್ರಾಹ್ಮಣನೂ **ಕೇಶಿನೀ** ಎಂಬ ತುಂಬಾ ಲಾವಣ್ಯಯುತ ಸ್ತ್ರೀಯನ್ನು ಮದುವೆ ಮಾಡಿಕೊಳ್ಳಬೇಕೆಂದು ಬಂದು, ಇವರಿಬ್ಬರಲ್ಲಿ ಯಾರು ಶ್ರೇಷ್ಠರೆಂಬ ವಿವಾದ ಬಂದು, ಯಾರು ಜಿತರಾದರೆ ಅವರ ಪ್ರಾಣವು ಜಯಿಸಿದವನ ವಶವೆಂದು ಶಪಥ ಮಾಡಿಕೊಂಡು ಪ್ರಹ್ಲಾದನು ತುಂಬಾ ಸತ್ಯವಾದಿಯು ಎಂದು ತೋರಿ ಸುಧನ್ವನೂ ವಿರೋಚನನೂ ಇಬ್ಬರೂ ಪ್ರಹ್ಲಾದನಲ್ಲಿಗೆ ಬಂದು ಇವರಿಬ್ಬರಲ್ಲಿ ಯಾರು ಶ್ರೇಷ್ಠರು ಎಂದು ಕೇಳಲು; ಆಗ ವಿರೋಚನನು ತನ್ನ ಸ್ವಂತ ಪುತ್ರನಾಗಿರುವದರಿಂದ ಆತನಿಗೆ ವಿರುದ್ಧವಾಗಿ ಬ್ರಾಹ್ಮಣನಾದ ಸುಧನ್ವನೇ ಶ್ರೇಷ್ಠನೆಂದು ಹೇಳಲು ಶಂಕಿಸುತ್ತಿದ್ದಾಗ ಸುಧನ್ವನು ಪ್ರಹ್ಲಾದನನ್ನು ಕುರಿತು ಹೇಳುತ್ತಾನೇನೆಂದರೆ- ನೀನು ಸತ್ಯವನ್ನು ಹೇಳದೆ ಹೋದರೆ ನಿನ್ನ ಶಿರಸ್ಸು ಶೀಳಿಹೋಗುತ್ತದೆಂದು ಹೇಳಲು; ಆಗ ಪ್ರಹ್ಲಾದನು ಆದಿತ್ಯನೊಂದಿಗೆ ಬರುತ್ತಿದ್ದ ಹಂಸನನ್ನು ನೋಡಿ, ಧರ್ಮವಿಷಯದಲ್ಲಿ ವಿವಾದ ಮಾಡಿ ಬಂದಿರುವುದರಿಂದ ನೀನು ಅನೃತವನ್ನು ಹೇಳುವುದು ಸರಿಯಲ್ಲವು; ಸತ್ಯವನ್ನೇ ಹೇಳತಕ್ಕದ್ದೆಂದು ತಿಳಿಸಿದ್ದರಿಂದ, ಪ್ರಹ್ಲಾದನು, ತನ್ನ ಮಗನಿಗೆ ತೊಂದರೆಯುಂಟಾಗುತ್ತದೆಂದು ತಿಳಿದಿದ್ದರೂ ಸತ್ಯವನ್ನಾಡಿ ಸುಧನ್ವನೇ ಬ್ರಾಹ್ಮಣನಾಗಿ ಶ್ರೇಷ್ಠನೆಂದು ತೀರ್ಪನ್ನಿತ್ತು, ವಿರೋಚನನ ಪ್ರಾಣವನ್ನು ಸುಧನ್ವನ ವಶ ಮಾಡಿದನು. ಆಗ ಸುಧನ್ವನು ಪ್ರಹ್ಲಾದ ಸತ್ಯಕ್ಕೆ ಮೆಚ್ಚಿ ಆತನ ಮಗನ ಪ್ರಾಣವನ್ನುಳಿಸಿ, ಆದರೆ ನಿನ್ನ ಮಗನಾದ ವಿರೋಚನನು, ಬ್ರಾಹ್ಮಣನೇ ಶ್ರೇಷ್ಠನೆಂದು ಕೇಶಿನಿಗೆ ತಿಳಿಯುವುದಕ್ಕಾಗಿ ಆಕೆಯ ಎದುರಿಗೆ ನನ್ನ ಕಾಲನ್ನು ತೊಳೆಯತಕ್ಕದ್ದೆಂದು ಹೇಳಿದನು ಎಂಬುದು ಇತಿಹಾಸವು, **ಈ** ಇತಿಹಾಸವನ್ನು ಧೃತರಾಷ್ಟ್ರನಿಗೆ ಶ್ರೀ ವಿದುರರು ಬುದ್ಧಿವಾದವನ್ನು ಹೇಳುತ್ತಾರೇನೆಂದರೆ–

(೫) ಭಾರ. ಉದ್ಯೋಗ ೩೫. ೨೯

**ಎನ್ರುಮ್ ಋಷಿಗಳುಕ್ಕುಂ ಕೂಡ ವರುನ್ದಿ ಪದವಿನ್ಯಾಸಂ ಪಣ್ಣವೇಣ್ಡಿಯಿರುಕ್ಕಿರ ನಿಲಙ್ಗಳಿಲ್ (೧) "ಮಹಾಜನೋಯೇನಗತಸ್ಸಪನ್ಥಾಃ" ಎನ್ರುಮ್ (೨) ಧರ್ಮಶಾಸ್ತ್ರರಥಾರೂಢಾ ವೇದಖಡ್ಗಧರಾ ದ್ವಿಜಾಃ | ಕ್ರೀಡಾರ್ಥಮಪಿಯದ್ಬ್ರೂಯುಸ್ಸಧರ್ಮಃ ಪರಮೋಮತಃ" ಎನ್ರುಮ್ ಶೊಲ್ಲುಗಿರಪಡಿಯೇ ಶ್ರುತಿಸ್ಮೃತಿ ಶರಣರಾನ ಪೂರ್ವಾಚಾರ್ಯರುಗಳ್ ಕಂಟಕಶೋಧನಮ್ ಪಣ್ಣಿ ನಡನ್ದವಳಿಯಿಲೇ ನಡಕ್ಕೈಯಾಲೇ ನಮಕ್ಕು ವರುವದೊರು ತಪ್ಪಿಲ್ಲೈ.**

---

"ತಸ್ಮಾದ್ರಾಜೇನ್ದ್ರ ಭೂಮ್ಯರ್ಥೇನಾನೃತ್ಯಂವಕ್ತುಮರ್ಹಸಿ" "ಪಾಂಡವರಿಗೆ ಸಲ್ಲತಕ್ಕ ಭೂಮಿ ವಿಭಾಗದ ವಿಷಯದಲ್ಲಿ ಅನೃತವನ್ನು ಹೇಳಬಾರದು'' ಎಂಬುದಾಗಿ. ಶ್ರೀ ವಿದುರರು ಈ ಇತಿಹಾಸದಿಂದ ಆರ್ಜವವೆಂದರೆ ಋಜು ಮಾರ್ಗವನ್ನು ಅವಲಂಬಿಸತಕ್ಕದ್ದೆಂದು ಇಲ್ಲಿ ಬೋಧಿಸುತ್ತಾರೆ-

**ಯಥಾ ಯಥಾಹಿ ಪುರುಷಃ ಕಲ್ಯಾಣೇ ಕುರುತೇ ಮನಃ |**
**ತಥಾ ತಥಾಸ್ಯ ಸರ್ವಾರ್ಥಾಃ ಸಿಧ್ಯನ್ತೇನಾತ್ರ ಸಂಶಯಃ ||**

**ಋಷಿಗಳಕ್ಕುಂಕೂಡ**-ಮಹಾ ಜ್ಞಾನಾಗ್ರೇಸರರಿಗೂ ಕೂಡ, **ವರುನ್ದಿ**-ಕಷ್ಟಪಟ್ಟು, **ಪದವಿನ್ಯಾಸಂಪಣ್ಣವೇಣ್ಡಿರುಕ್ಕಿರ**-ತುಂಬಾ ಜಾಗರೂಕತೆಯಿಂದ ಕಾಲಿಡಬೇಕಾದ ಎಂದರೆ ಬಹುಜಾಗ್ರತೆಯಿಂದ ತಪ್ಪು ಮಾರ್ಗವೆಲ್ಲಿಯಾದೀತೋ ಎಂಬ ಭಯದಿಂದ ಪ್ರವರ್ತಿಸಬೇಕಾದ, **ನಿಲಙ್ಗಳಿಲ್**-ಸಂದರ್ಭಗಳಲ್ಲಿ, **(೧)ಮಹಾಜನಃ**-ತುಂಬಾ ಪ್ರಾಜ್ಞರಾದವರು, **ಯೇನಗತಃ**-ಯಾವ ಮಾರ್ಗದಿಂದ ಹೋಗುವರೋ, **ಸಪನ್ಥಾಃ**-ಅದೇ ಸರಿಯಾದ ಮಾರ್ಗವು" ಇದು ಹಿಂದೆಯೇ ಉಪಪಾದಿತವು. **ಎನ್ರುಂ**-ಎಂಬುದಾಗಿಯೂ, **(೨) ಧರ್ಮಶಾಸ್ತ್ರರಥಾರೂಢಾಃ**-ಧರ್ಮಶಾಸ್ತ್ರವೆಂಬ ರಥವನ್ನು ಹತ್ತಿದವರಾದ, ಎಂದರೆ ಧರ್ಮಶಾಸ್ತ್ರ ಪ್ರಮಾಣವನ್ನವಲಂಬಿಸಿದ, **ವೇದಖಡ್ಗಧರಾಃ**-ಶಾಸ್ತ್ರಗಳಲ್ಲಿ ವೇದವೇ ಮುಖ್ಯವಾಗಿ ಅದೂ ಶಾಸನ ಮಾಡುವವರಿಂದ, ವೇದವೆಂಬ ಕತ್ತಿಯನ್ನು ಧರಿಸಿರುವ, **ದ್ವಿಜಾಃ**-ಬ್ರಾಹ್ಮಣರು **ಕ್ರೀಡಾರ್ಥಮಪಿ**-ಆಟಕ್ಕಾಗಿ ಕೂಡ, **ಯದ್ಬ್ರೂಯುಃ**-ಯಾವುದನ್ನು ಹೇಳುತ್ತಾರೋ, **ಸಃ**-ಅದೇ, **ಪರಮೋ ಧರ್ಮಃ**-ಸರ್ವೋತ್ಕೃಷ್ಟ ಧರ್ಮವೆಂಬುದು, **ಮತಃ**-ಅಭಿಪ್ರಾಯವು. ಆಟಕ್ಕಾಗಿ ಹೇಳುವುದು ಧರ್ಮಕ್ಕಿಂತ ಸ್ವಲ್ಪ ದೂರವಾಗಿರುವುದುಂಟು; ಆದರೆ ಧರ್ಮ ಶಾಸ್ತ್ರಗಳೆಲ್ಲಾ ವೇದದ ಉಪಬ್ರಂಹಣಗಳು; ವೇದವೆಂಬ ಖಡ್ಗವನ್ನು ಧರಿಸಿ ಧರ್ಮಶಾಸ್ತ್ರವೆಂಬ ರಥದಲ್ಲಿ ಕುಳಿತಿರುವರು ಪ್ರಮಾಣಶರಣರು; ಅವರು ಆಟಕ್ಕಾಗಿ

---

(೨) ಬೋಧಾಯನ ೧೪. ೧. ೨.

## ಏತದ್ರಹಸ್ಯತ್ರಯೋಕ್ತ ಪ್ರಕಾರೇಣಾನುಷ್ಠಾತೃಣಾಂ ಸರ್ವಾನಿಷ್ಟ ನಿವೃತ್ತಿಪೂರ್ವಕೇಷ್ಟ ಪ್ರಾಪ್ತಿರೇವ ಫಲಮಿತ್ಯಾಹ

**ಇವ್ವಳಿ ನಡನ್ದವರ್‌ಗಳುಕ್ಕು (೧) "ಅವಿಶ್ರಾನ್ತ ಮನಾಲಂಬ ಮಪಾಥೇಯಮದೇಶಿಕಮ್ । ತಮಃ ಕಾನ್ತಾರ ಪನ್ಥಾನಂ ಕಥಮೇಕೋ**

---

ಹೇಳುವುದೂ ಕೂಡ ಧರ್ಮಶಾಸ್ತ್ರಾನುಸಾರವಾದುದರಿಂದ, ಅವರುಗಳ ಹೇಳಿಕೆಗಳೆಲ್ಲಾ ಪರಮ ಧರ್ಮಾನುಸಾರವಾದವೇ ಎಂಬ ಭಾವವು." **ಎನ್ರುವಮ್**-ಎಂಬುದಾಗಿಯೂ, **ಶೊಲ್ಲುಗಿರಪಡಿಯೇ**-ಹೇಳಿರುವ ಹಾಗೆಯೇ, **ಶ್ರುತಿಸ್ಮೃತಿಶರಣರಾನ**-ಶ್ರುತಿ ಸ್ಮೃತಿಗಳನ್ನು ಪ್ರಮಾಣವಾಗಿ ನಂಬಿರುವ, **ಪೂರ್ವಾಚಾರ್ಯರುಗಳ್**-ನಾಥಮುನಿ, ಯಾಮುನ ಮುನಿ, ರಾಮಾನುಜಮುನಿ ಮೊದಲಾದ ಪೂರ್ವಾಚಾರ್ಯರುಗಳು **ಕಂಟಕ ಶೋಧನಮ್ ಪಣ್ಣಿ**-ಮಾರ್ಗದಲ್ಲಿ ಬಿದ್ದಿರುವ ಮುಳ್ಳುಗಳನ್ನೆಲ್ಲಾ ತೆಗೆದು ಹಾಕಿ, ಇದರಿಂದ ಇತರರು ತಮ್ಮ ಅಪಸಿದ್ಧಾನ್ತಗಳೇ ಸರಿಯಾದ ಮಾರ್ಗವೆಂದು ಹೇಳಿರುವದನ್ನೆಲ್ಲಾ ಕಿತ್ತು ಹಾಕಿ, ಮಾರ್ಗವನ್ನು ಸರಿಪಡಿಸಿ, **ನಡನ್ದವಳಿಯಿಲೇ**-ಅವರುಗಳು ಪ್ರವರ್ತಿಸಿದ ಮಾರ್ಗದಲ್ಲಿ, **ನಡಕ್ಕೈಯಾಲೇ**-ನಾವು ನಡೆಯುವದರಿಂದ, **ನಮುಕ್ಕು**-ನಮಗೆ, **ವರುವದೊರು ತಪ್ಪಿಲ್ಲೈ**-ಬರುವ ದೋಷವೇನೂ ಇಲ್ಲವು. ಇಂತಹ ಪ್ರಮಾಣಶರಣರಾದ ಆಚಾರ್ಯರು ಅವಲಂಬಿಸಿದ ಮಾರ್ಗವನ್ನು ನಾವೂ ಅವಲಂಬಿಸಿ ನಡೆದರೆ ಏನೊಂದೂ ಪ್ರತ್ಯವಾಯವೂ ಉಂಟಾಗುವುದಿಲ್ಲವೆಂಬ ಭಾವವು.

ಈ ಪ್ರಬಂಧದಲ್ಲಿ ಹೇಳಲ್ಪಟ್ಟಿರುವ ಪ್ರಕಾರ ಅನುಷ್ಠಿಸುವವರಿಗೆ ಸಮಸ್ತಾನಿಷ್ಟ ನಿವೃತ್ತಿ **ಪೂರ್ವಕವಾದ ಇಷ್ಟಪ್ರಾಪ್ತಿಯೇ ಫಲವೆನ್ನುತ್ತಾರೆ.**

ಈ ರಹಸ್ಯತ್ರಯಸಾರವೆಂಬ ಗ್ರಂಥದಲ್ಲಿ ಉಪಪಾದಿತಗಳಾದ ಪರಮಾಚಾರ್ಯರುಗಳ ಮಾರ್ಗದಲ್ಲಿ ನಡೆಯುವವರಿಗೆ ನರಕಪ್ರಾಪ್ತಿಯು ಎಂದಿಗೂ ಇಲ್ಲವೆಂದೂ, ಅದರಲ್ಲಿ ಉಪದಿಷ್ಟವಾದ ಉಪಾಯಾನುಷ್ಠಾನವನ್ನು ಮಾಡಿದವರಿಗೆ ದೇಹಾವಸಾನಾನಂತರ ಅರ್ಚಿರಾದಿ ಮಾರ್ಗದಲ್ಲಿ ಹೊರಟು, ಪರಮಪದವನ್ನು ಸಾರಿ ಶ್ರೀಮನ್ನಾರಾಯಣ ಪಾದ ಕಮಲಗಳಲ್ಲಿ ಪರಿಪೂರ್ಣ ಬ್ರಹ್ಮಾನುಭವ ರೂಪವಾದ ಆನಂದದೊಂದಿಗೆ ಸರ್ವ ವಿಧ ಕೈಂಕರ್ಯಗಳನ್ನು ಎಸಗುವ ಪರಮ ಸುಕೃತವು ಲಭಿಸುತ್ತದೆಂದು ಒಂದು ಮಹಾವಾಕ್ಯದ ಮೂಲಕ ತಿಳಿಸುತ್ತಾರೆ- **ಇವ್ವಳಿನಡನ್ದವರ್‌ಗಳುಕ್ಕು**-ಈ ಗ್ರಂಥದಲ್ಲಿ ಉಪಪಾದಿತವಾದ ಪರಮಾಚಾರ್ಯರು ತೋರಿಸಿದ ಸುಪಥವಾದ ಮಾರ್ಗದಲ್ಲಿ ನಡೆದವರಿಗೆ, " **ಅವಿಶ್ರಾನ್ತಂ**-ವಿಶ್ರಮಿಸಿಕೊಳ್ಳಲು ಸ್ಥಳವಿಲ್ಲದೆ, **ಈ**

---

(೧) ಭಾರತ, ಶಾನ್ತಿ, ೩೩೭. ೩೪

**ಗಮಿಷ್ಯಸಿ" ಎನ್ರುಮ್, (೨) "ನಿಷ್ಪಾನೀಯೇ ನಿರಾಲಂಬೇ ನಿಶ್ಛಾಯೇ ನಿರಪಾಶ್ರಯೇ। ದ್ರಾಘೀಯಸ್ಯಶುಭೇಮಾರ್ಗೇಯಮಸ್ಯ ಸದನಂಪ್ರತಿ" ಎನ್ರುಮ್, ಮಹರ್ಷಿಗಳ್ ನೆಂಜಾರಲ್ಪಡುಮ್‌ವಳಿಗಳ್ ಕಾಣವೇಣ್ಡಾ, ಪಂಚಾಗ್ನಿವಿದ್ಯೈಯಿಗ್ಜೊನ್ನಪಡಿಯೇ ವರುತ್ತಿಪಟ್ಟ್ ಪನ್ನಿರಣ್ಣು ಪಾಡು ಪ್ಪಟ್ಟು ಪೂಟ್ಟೈಕ್ಕುಣ್ಡಿಕೈಪ್ಪೋಲೆ ಏರುವತಿಳಿಯು ತಾಕಕ ಧೂಮಾದಿ ಮಾರ್ಗತ್ತಿಲೇ ಪರಿಭ್ರಮಿಕ್ಕವುಮ್‌ವೇಣ್ಡಾ.**

---

ಸಂಸಾರದಲ್ಲಿ ಬಹು ಆಯಾಸಪಟ್ಟವನಿಗೆ ವಿಶ್ರಾನ್ತಿಗೆ ಸ್ಥಳವು ಆವಶ್ಯಕವು. ಅಂತಹ ಸ್ಥಳವಿಲ್ಲದಿರುವ, **ಅನಾಲಂಬಂ**-ಏನೊಂದೂ ಆಧಾರವಿಲ್ಲದಿರುವ, ಆಶ್ರಯವೇ ಇಲ್ಲ ದಿರುವ ಎಂಬರ್ಥವು, **ಅಪಾಥೇಯಂ**-ಪಾಥೇಯವೆಂದರೆ ಮಾರ್ಗದಲ್ಲಿ ಶ್ರಮ ಪರಿ ಹಾರಕ್ಕಾಗಿ ಆಹಾರಕ್ಕೆ ಹೆಸರು, ಅದಿಲ್ಲದಿರುವ, **ಅದೇಶಿಕಂ**-ದೇಶಿಕನು ಮಾರ್ಗ ತೋರಿ ಸುವವನು, ಅಂತಹಅರಿತವನು ಯಾವನೂ ಇಲ್ಲದಿರುವ, **ತಮಃಕಾನ್ತಾರಪನ್ಥಾನಂ**-ಕತ್ತಲಾಗಿ ಕಣ್ಣು ಕಾಣದಿರುವ ಕಾಡು ಮಾರ್ಗವಾದ ನರಕಮಾರ್ಗವನ್ನು, **ಕಥಂ ಏಕೋಗಮಿಷ್ಯಸಿ**-ಹೇಗೆ ಒಬ್ಬನೇ ಹೋಗುವಿ?" ಹೀಗೆ ನರಕ ಮಾರ್ಗವನ್ನು ಮಹರ್ಷಿಗಳು ವರ್ಣಿಸಿರುತ್ತಾರೆ. ಹೀಗೆ ಪರಮಾಚಾರ್ಯರುಗಳ ಸಂಪ್ರದಾಯಾನು ಗುಣವಾಗಿ ವರ್ತಿಸಿದವನಿಗೆ ನರಕಮಾರ್ಗ ಭಯ ಬೇಕಿಲ್ಲವೆಂದು ಹೇಳುತ್ತಾರೆ. ಈ ಶ್ಲೋಕವು ಶ್ರೀ ನಾರದರು ಶುಕರಿಗೆ ಹೇಳುವ ಉಪದೇಶವು. ಋಷಿಗಳಿಗಾಗಿ ಸನ ತ್ಕುಮಾರರು ಮಾಡಿದ ಅಮೋಘವಾದ ಹಿತೋಪದೇಶವನ್ನು ನಿನಗೆ ತಿಳಿಸುವೆನು ಎಂದು ನಾರದರು ಹೇಳುವ ಪ್ರಕರಣವು" **ಎನ್ರುಂ**-ಎಂಬುದಾಗಿಯೂ, ಮುಂದೆ ನರಕ ಮಾರ್ಗದ ದುಃಖದ ವಿಷಯವಾಗಿ ಇನ್ನೊಂದು ಪ್ರಮಾಣವನ್ನೂ ಉದಾಹರಿ ಸಿರುತ್ತಾರೆ. (೨) " **ನಿಷ್ಪಾನೀಯೇ**-ಮಾರ್ಗದಲ್ಲಿ ಕುಡಿಯುವುದಕ್ಕೆ ನೀರಿಲ್ಲದ, **ನಿರಾಲಂಬೇ**-ಆಧಾರವಿಲ್ಲದೆ, **ನಿಶ್ಛಾಯೇ**-ನೆರಳು ಇಲ್ಲದಿರುವ, **ನಿರಪಾಶ್ರಯೇ**-ವಿಶ್ರಮಿಸಿಕೊಳ್ಳಲು ಸ್ಥಳವಿಲ್ಲದೇ, **ಅಶುಭೇ**-ಶುಭವಲ್ಲದ ಎಂದರೆ ದುಃಖೋದರ್ಕ ವುಳ್ಳ, **ದ್ರಾಘೀಯಸಿ**-ಅತಿದೂರವಾದ, **ಯಮಸ್ಯಸದನಂಪ್ರತಿ**-ಯಮನ ಮನೆ ಎಂದರೆ ಲೋಕವನ್ನು ಕುರಿತು ಹೋಗುವ, **ಮಾರ್ಗೇ**-ಮಾರ್ಗದಲ್ಲಿ" ಮುಂದೆ **ಗಚ್ಛತೋಮೇ ಸಹಾಯಸ್ಯವರ್ಧಯೆಂತೀ ಭಯಮ್ ಮಹತ್** ಎಂದಿರು ತ್ತದೆ." **ಎನ್ರುಮ್**-ಎಂಬುದಾಗಿಯೂ, **ಮಹರ್ಷಿಗಳು** ಎಂದರೆ ವ್ಯಾಸಾದಿಗಳು, **ನೆಂಜಾರಲ್ಪಡುಮ್‌ವಳಿಗಳ್**-ದುಃಖಪಡುವ ಮಾರ್ಗಗಳನ್ನು **ಕಾಣವೇಣ್ಡಾ**-ನೋಡಬೇಕಾದುದಿಲ್ಲವು. ಹಿಂದಿನ ಪೂರ್ವಾಚಾರ್ಯರುಗಳ ಸಂಪ್ರದಾಯರೀತ್ಯಾ ನಡೆಯುವವರಿಗೆ "**ನರಕಪಾತಭೀತಿಃ ಕುತಃ**"ಎಂಬಲ್ಲಿ ಹೇಳಿರುವ ಹಾಗೆ, ನರಕ

---

(೨) ವಂಗಿ ನಿತ್ಯಂ.

ಗಮನ ಭಯವು ಈಷದಪಿ ಇಲ್ಲವು. ಇಷ್ಟು ಮಾತ್ರವೇ ಅಲ್ಲವು. ಅಂತವರಿಗೆ ಪುನಸ್ಸಂಸಾರ ಭೀತಿಯೂ ಕೂಡ ಬೇಕಾಗಿಲ್ಲವೆಂದು ಹೇಳುತ್ತಾರೆ- **ಪಂಚಾಗ್ನಿವಿದ್ಯೈಯಿರ್ಲ್ಪೊನ್ನಪಡಿಯೇ**- ಛಾಂದೋಗ್ಯದ ಪಂಚಮ ಪ್ರಪಾಠಕದ ಮೂರನೆಯ ಖಂಡದಲ್ಲಿ ಆರಂಭಿಸಿ ಹೇಳಿರುವ ಪಂಚಾಗ್ನಿ ವಿದ್ಯೆಯಲ್ಲಿ ಹೇಳಲ್ಪಟ್ಟ ಹಾಗೆಯೇ, **ಪರುತ್ತಿಪಟ್ಟು**- ಹತ್ತಿಯು ನೂಲಾಗಲಿ ಬಟ್ಟೆಯಾಗಲಿ ಆಗಲು ಎಷ್ಟು ಸಲ ಅವಸ್ಥೆಯನ್ನು ಹೊಂದಬೇಕೋ ಹಾಗೆ, **ಪನ್ನಿರಣ್ಡು ಪಾಡುಪ್ಪಟ್ಟು**- ಹನ್ನೆರಡು ಸಲ ದುರವಸ್ಥೆಗಳನ್ನು ಹೊಂದಿ, ಮತ್ತು **ಪೂಟ್ಟೈಕುಣ್ಡಿಕೈಪ್ಪೋಲೇ**- ಯಾತದ ಭಾವಿಗೆ ಹಾಕುವ ಘಟೀಯಂತ್ರದ ಎರಡು ಘಟಗಳ ಹಾಗೆ, ಇವುಗಳಲ್ಲಿ ಒಂದು ಭಾವಿಯಿಂದ ಮೇಲಕ್ಕೆ ಬರುತ್ತದೆ, ಇನ್ನೊಂದು ಮೇಲಿಂದ ಕೆಳಕ್ಕೆ ಭಾವಿಗೆ ಇಳಿಯುತ್ತದೆ. ಈ ಘಟಗಳ ಹಾಗೆ, **ಏರುವದಿಳಿಯುವಾಗ**– ಆರೋಹಣ ಅವರೋಹಣ, ಮೇಲಕ್ಕೆ ಹತ್ತುವುದು ಕೆಳಕ್ಕೆ ಇಳಿಯುವುದು, ಹೀಗಿರುವ, **ಧೂಮಾದಿ ಮಾರ್ಗತ್ತಿಲೇ**- ಪುನರಾವೃತ್ತಿಯನ್ನು ಪುನಃ ಪುನಃ ಜನ್ಮವೆತ್ತುವ ಧೂಮಾದಿ ಮಾರ್ಗದಲ್ಲಿ, **ಪರಿಭ್ರಮಿಕ್ಕುಮ್‌ವೇಂಡಾ**- ತಲೆ ಹುಳುತ ನಾಯಿಯ ಹಾಗೆ ಸುತ್ತಬೇಕಾದುದೂ ಇಲ್ಲವು. ಯಾರಿಗೆ ಹೀಗೆ ಹೇಳಿದುದು ಎಂದರೆ **ಇವ್ವಳಿನಡನ್ದವರ್‌ಗಳಕ್ಕು**- ಈ ಮಾರ್ಗದಲ್ಲಿ ನಡೆದವರಿಗೆ ಹೀಗೆ ಛಾಂದೋಗ್ಯದ ಪಂಚಾಗ್ನಿ ವಿದ್ಯೆಯಲ್ಲಿ ಹೇಳಿರುವ ಪುನಃ ಪುನಃ ಜನ್ಮಪ್ರಾಪ್ತಿಯುಂಟಾಗಿ ಈ ಚೇತನನಿಗೆ **ಪುರುಷವಚಸ್ತ್ವ** ಉಂಟಾಗಿ ಶರೀರಪ್ರಾಪ್ತಿಯುಂಟಾಗುವ ೧೨ ದುರವಸ್ಥೆಗಳು, ಆ ಕಾಲದಲ್ಲಿ ಉಂಟಾಗುವ ದುಃಖಗಳೂ ಉಂಟಾಗುವುದಿಲ್ಲವೆಂದು ಹೇಳಿದರು. ಯಾವ ಮಾರ್ಗದಲ್ಲಿ ನಡೆದವರಿಗೆ ಎಂದರೆ **ಶ್ರುತಿಸ್ಮೃತಿ ಪ್ರಮಾಣಶರಣರಾದ ಪೂರ್ವಾಚಾರ್ಯರುಗಳು ಕಂಟಕ** ಶೋಧನ ಮಾಡಿ ನಡೆದ ಸತ್ಸಂಪ್ರದಾಯ ಮಾರ್ಗದಲ್ಲಿ ನಡೆದವರಿಗೆ, ಎಂದರೆ ಅಂತವರನ್ನು ಆಶ್ರಯಿಸಿ ವೈರಾಗ್ಯ ಹೊಂದಿ ಉಪಾಯಾನುಷ್ಠಾನವನ್ನು ಮಾಡಿ ಪ್ರಪನ್ನರೆನಿಸಿದವರಿಗೆ ಇಂತಹ ಪುನಸ್ಸಂಸಾರಪ್ರಾಪ್ತಿ ಎಂಬ ಅತಿ ದುಸ್ಸಹವಾದ **ಪುರುಷವಚಸ್ತ್ವವು** ಪ್ರಾಪ್ತವಾಗುವುದಿಲ್ಲವು. **ಪಂಚಾಗ್ನಿವಿದ್ಯೆಯು** ಬ್ರಹ್ಮವಿದ್ಯೆಗಳಲ್ಲಿ ಒಂದು ; ಇದರ ಜ್ಞಾನದಿಂದ ಮಹತ್ತಾದ ವೈರಾಗ್ಯ ಉಂಟಾಗಿ, ಶರೀರಪ್ರಾಪ್ತಿಯಲ್ಲಿ ಜಿಗುಪ್ಸೆಯು ತೋರಿ, ಪುನಃ ತನಗೆ ಶರೀರವು ಉಂಟಾಗದ ಹಾಗೂ ಶರೀರದಿಂದ ಬಿಡಲ್ಪಟ್ಟ ಪರಿಶುದ್ಧಾತ್ಮ ಸ್ವರೂಪ ಉಂಟಾಗಲು ಏನನ್ನು ಮಾಡತಕ್ಕದ್ದೆಂಬುದನ್ನು ತಿಳಿಸುತ್ತದೆ. ಇವನು ಗೀತೆಯಲ್ಲಿ ಜಿಜ್ಞಾಸುವೆಂದು ಹೇಳಲ್ಪಟ್ಟು ಇವನಿಗೂ ಪುನಃ ದೇಹಪ್ರಾಪ್ತಿ ಇಲ್ಲದೆ, ಮೋಕ್ಷವನ್ನು ಹೊಂದುವನೆಂದು ಛಾಂದೋಗ್ಯದಲ್ಲೂ, ಗೀತೆಯ ೮ನೆಯ ಅಧ್ಯಾಯದಲ್ಲೂ ಹೇಳಲ್ಪಟ್ಟಿರುತ್ತದೆ- (ಶ್ಲೋ ) ಛಾಂದೋಗ್ಯದಲ್ಲಿ ಹೇಳಿರುವದೇನೆಂದರೆ, ಗೌತಮಗೋತ್ರದ ಅರುಣರೆಂಬುವರ ಪುತ್ರರಾದ ಶ್ವೇತಕೇತು ಎಂಬುವರು ಜೈಬಲಿ ಎಂಬ ಪಾಂಚಾಲರಾಜ (ಕ್ಷತ್ರಿಯ) ನಲ್ಲಿಗೆ ಹೋದರು. ರಾಜನು ಆತನನ್ನು ಕುರಿತು ನಿಮ್ಮ ತಂದೆಯು

ನಿಮಗೆ ಬ್ರಹ್ಮವಿದ್ಯೆಯನ್ನೆಲ್ಲಾ ಉಪದೇಶಿಸಿರುತ್ತಾರೆಯೇ ಎಂದು ಪ್ರಶ್ನಿಸಲು, ಹೌದು ಉಪದಿಷ್ಟನಾಗಿರುವೆನು ಎನ್ನಲು; ಹಾಗಾದರೆ ದೇವಯಾನ ಪಿತೃಯಾಣವು ಯಾವುದೆಂಬುದೂ, ಮತ್ತು ಈ ಚೇತನನು ಪುರುಷನೆಂದು ಕರೆಯಲ್ಪಟ್ಟು ಪುನಸ್ಸಂಸಾರಿ ಹೇಗಾಗುವನೆಂಬುದೂ ನಿನಗೆ ತಿಳಿಯುವುದೋ? ಎನ್ನಲು, ಓ ಪೂಜ್ಯನಾದ ರಾಜನೇ ನನಗೆ ತಿಳಿಯದು ಎಂದು ಹೇಳಿ, ತಮ್ಮ ತಂದೆಯಾದ ಅರುಣರಲ್ಲಿ ತಿಳಿಸಲು, ಈ ಪಂಚಾಗ್ನಿ ವಿದ್ಯೆಯು ಮುಖ್ಯವಾಗಿ ಕ್ಷತ್ರಿಯರಿಗೇ ಉಚಿತವಾದುದೆಂದು "**ತಸ್ಮಾದು ಸರ್ವೇಷು ಲೋಕೇಷು ಕ್ಷತ್ರಸ್ಯೈವ ಪ್ರಶಾಸನ ಮಭೂತ್**" ಎಂಬಲ್ಲಿ ಹೇಳಿರುವ ಹಾಗೆ ಈ ಬ್ರಹ್ಮವಿತ್ತಾದ ಆರುಣರಿಗೆ ತಿಳಿಯದೇ ಹೋದುದರಿಂದ, ಅವರೇ ಆ ರಾಜನಲ್ಲಿಗೆ ಹೋಗಿ ತಿಳಿಯುತ್ತಾರೆ- ಉಪದೇಶವೇನೆಂದರೆ ನಿರ್ಯಾಣವನ್ನು ಹೊಂದಿ ಧೂಮಾದಿ ಮಾರ್ಗದಲ್ಲಿ ಹೋದ ಭೂತಸೂಕ್ಷ್ಮ ಇಂದ್ರಿಯಗಳೊಂದಿಗೆ ನಿರ್ಯಾಣ ಹೊಂದಿದ ಚೇತನನು ಪುನಃ ದೇಹಪ್ರಾಪ್ತಿ ಬಂದು ಪುರುಷನೆಂದು ಹೇಳಿಸಿಕೊಳ್ಳಬೇಕಾದರೆ ಐದು ಅಗ್ನಿಗಳಲ್ಲಿ ಐದು ಸಲ ಹೋಮ ಮಾಡಲ್ಪಟ್ಟರೆ ಪುರುಷ ವಚಸ್ತ್ವವು ಉಂಟಾಗುತ್ತದೆ. **ದ್ಯುಃ**-(ಸ್ವರ್ಗ), ಪರ್ಜ್ಜನ್ಯ (ಮಳೆ) ಪೃಥಿವಿ ಪುರುಷ, ಯೋಷಿತ್ (ಹೆಂಗಸು) ಎಂಬ ಅಗ್ನಿಗಳಲ್ಲಿ ಕ್ರಮವಾಗಿ ಶ್ರದ್ಧಾ, ಸೋಮ, ವೃಷ್ಟಿ, ಅನ್ನ, ತೇಜಸ್ಸು ಎಂಬ ಹವಿಸ್ಸುಗಳ ಸಮರ್ಪಣೆಯು; ಪುರುಷನ ರೇತಸ್ಸಿನಲ್ಲಿ ಈ ಜೀವಾತ್ಮನು ಸೇರಿಕೊಂಡು ಸ್ತ್ರೀ ಯೋನಿಯನ್ನು ಸೇರಿದರೆ, ಜೀವಾತ್ಮನಿಗೆ ದೇಹೋತ್ಪತ್ತಿಯುಂಟಾದಾಗ ಪುರುಷ ವಚಸ್ತ್ವವು ಬಂದು, ಹೆಣ್ಣು ಶಿಶುವೋ ಗಂಡು ಶಿಶುವೋ ಆಗುವನು. ಪುರುಷ ಶಬ್ದಕ್ಕೆ ದೇಹವೆಂಬ ಪುರಿಯಲ್ಲಿ ಮಲಗಿರುವನು ಎಂಬರ್ಥವು. ಇದು ಗೀತಾ ೮ನೆಯ ಅಧ್ಯಾಯದಲ್ಲಿ ಜಿಜ್ಞಾಸುವು ತಿಳಿಯಬೇಕಾದ ವಿಷಯಗಳನ್ನು ಹೇಳುವಾಗ ಈ ಐದನೆಯ ಹೋಮವನ್ನು "**ಕರ್ಮ**" ವೆಂದು ಹೇಳಿ, ಅದನ್ನು ಅರ್ಜುನನು "**ಕಿಂ ಕರ್ಮ ಪುರುಷೋತ್ತಮ**" ಎಂದು ಪ್ರಶ್ನಿಸಿ, ಅದಕೆ ಶ್ರೀಕೃಷ್ಣಭಗವಾನರವರು "**ಭೂತಭಾವೋದ್ಭವ ಕರೋ ವಿಸರ್ಗಃ ಕರ್ಮ ಸಂಜ್ಞಿತಃ**" ಭೂತ ಭಾವವೆಂದರೆ ಪ್ರಾಣಿಭಾವವನ್ನುಂಟು ಮಾಡುವ ರೇತೋತ್ಸರ್ಜನವೆಂದು ಗೂಢವಾಗಿ ಹೇಳಿರುತ್ತಾರೆ. ಇದರರ್ಥ ತಿಳಿಯದೆ ಅನೇಕರು ಅಪಾರ್ಥಗಳನ್ನು ಮಾಡಿರುತ್ತಾರೆ. **ಬ್ರಹ್ಮವಿಧ್ಯಾನಿಷ್ಠನಿಗೆ** ಈ ಹೇಯ ವಿಷಯವೇತಕ್ಕೆ ? ಎಂದರೆ ಅದು ಅತಿ ಹೇಯ ವಿಷಯವಾದ ಜುಗುಪ್ಸಿತವಾದದು ಎಂದೂ, ಅನೇಕ ದುಃಖಗಳು ಗರ್ಭವಾಸ ಮೊದಲು ನಿರ್ಯಾಣಾದಿಗಳವರೆಗೂ, ಹತ್ತಿ ಬೀಜಕ್ಕೆ ತಂತುಗಳು ಸುತ್ತಿಕೊಂಡ ಹಾಗೆ, ಈ ಜೀವಾತ್ಮನು ಈ ದೇಹಾವಾಪ್ತಿಯಿಂದ ದುಸ್ಸಹಗಳಾದ ದುಃಖಗಳಿಗೆ ಒಳಗಾಗುವನಾದುದರಿಂದ ಅದರಿಂದ ಮೋಕ್ಷಾರ್ಥಿಯು ತಪ್ಪಿಸಿಕೊಳ್ಳಲು ಯತ್ನಿಸುವನು. ಶ್ರೀರಂಗರಾಮಾನುಜ ಭಾಷ್ಯದಲ್ಲಿ "**ಅಯಂಚೋಪನ್ಯಾಸೋ ವೈರಾಗ್ಯಹೇತೋಃ**" ಎಂದು ಅಪ್ಪಣೆ ಕೊಡಿಸಿರುತ್ತಾರೆ.

ಹಾಗೆಯೇ ಉಪನಿಷತ್ತಿನಲ್ಲೂ, **"ತಸ್ಮಾಜ್ಜುಗುಪ್ಸೇತ ತದೇಷಶ್ಲೋಕಃ"** ಈ ವಿದ್ಯೆಯ ಫಲವೇನೆಂದರೆ ಪರಿಶುದ್ಧಾತ್ಮ ಸ್ವರೂಪವು ಕೈವಲ್ಯದಲ್ಲುಂಟಾಗಿ ಅಲ್ಲಿಂದ ಪುನರಾವರ್ತಿಯಿಲ್ಲದೆ ಮೋಕ್ಷವು. ಹಾಗೆಯೇ **"ಅಪ್ರತೀಕಾಲಂಬನಾನ್ನಯತೀತಿ ಬಾದರಾಯಣಃ, ಉಭಯಥಾಪಿದೋಷಾತ್, ತತ್ಕ್ರತುಶ್ಚಃ"** ಎಂಬ ಶಾರೀರಸೂತ್ರದಲ್ಲಿ ಶ್ರೀ ವ್ಯಾಸರು ಉಪಪಾದಿಸಿರುತ್ತಾರೆ.

ಈ ಪಂಚಾಗ್ನಿ ವಿದ್ಯೆಯಲ್ಲಿ ಉಪಪಾದಿತನಾದ ಜೀವನಿಗೆ ಉಂಟಾಗುವ **"ಪರುತ್ತಿಪಟ್ಟ ಪನ್ನಿರಣ್ಡು ಪಾಡುಪ್ಪಟ್ಟು"** ಎಂದು ಹೇಳಲ್ಪಟ್ಟ ೧೨ ದುರವಸ್ಥೆಗಳು ಯಾವುವು ಎಂಬ ಸಂದರ್ಭದಲ್ಲಿ, ಛಾಂದೋಗ್ಯದಲ್ಲಿ ವಿಶದವಾಗಿ ೧೨ ಎಂದು ಹೇಳಿಲ್ಲವು. ಸಾರದೀಪಿಕೆಯವರು "ಗರ್ಭವಾಸ, ಜನನ, ಬಾಲ್ಯ, ಕೌಮಾರ, ಯವ್ವನ, ವಾರ್ಧಕ, ಉತ್ಕ್ರಾಂತಿ, ನರಕ ಮಾರ್ಗಗಮನ, ನರಕಾನುಭವ"ವೆಂದು ೯ ಮಾತ್ರ ತಿಳಿಸಿರುತ್ತಾರೆ. ಸಾರಾಸ್ವಾದಿನಿಯವರು "ಬೀಜಾದುತ್ಪಾಟನ, ಉತ್ಕರ್ಷಣ, ಅಪಕರ್ಷಣ, ಆಕುಂಚನ, ಪ್ರಸಾರಣೆ, ಗ್ರಂಥಿಶ್ಲಥನ, ಸಂಘಟನ, ಸಮಾಕರಣ, ಪುಂಜೀಭವನ, ವಿಕಸನ, ವಿಮಲೀಕರಣ, ಚತುಷ್ಕೋಷಕರಣ" ಹೀಗೆ ೧೨ ಎಂದು ತಿಳಿಸಿರುತ್ತಾರೆ. ಇವೆಲ್ಲಾ ಛಾಂದೋಗ್ಯದಲ್ಲಿಲ್ಲವು; ಸಾರಸಂಗ್ರಹದವರೂ ಇವರು ಹೇಳಿದ ಹಾಗೆಯೇ ಹೇಳಿರುತ್ತಾರೆ. ಸಾರಪ್ರಕಾಶಿಕೆಯವರು ಹತ್ತಿಯು ಹೇಗೆ ಯಂತ್ರಗಳ ಬಂಧಕ್ಕೆ ಸಿಕ್ಕಿ ಅನೇಕ ಅವಸ್ಥೆಗಳನ್ನು ಹೊಂದಿ ಕೊನೆಗೆ ಬಟ್ಟೆಯಾಗುತ್ತದೋ, ಹಾಗೆಯೇ ಜೀವಾತ್ಮನು **"ಅನಂತಾವಸ್ಥೆ"**ಗಳನ್ನು ಹೊಂದುವನು, ೧೨ ಎಂದು ಹೇಳಿದುದು ಉಪಲಕ್ಷಣ ಭಾವದಿಂದ ಎಂದು ಸೂಚಿಸಿ, ಛಾಂದೋಗ್ಯದ ಪಂಚಮ ಪ್ರಪಾಠಕ ೧೦ನೆ ಖಂಡದ ೫,೬,೭,೮,೯,೧೦ನೆಯ ಋಕ್ಕುಗಳಲ್ಲಿ **"ತಸ್ಮಿನ್ಯಾವತ್ಸಂಪಾತಂ"** ಎಂದಾರಂಭಿಸಿ ಹೇಳಿರುವ ದೇವಯಾನ ಕ್ರಮಗಳಲ್ಲೂ ಉದಾಹರಿಸಿರುತ್ತಾರೆ.

ಈ ಅಭಿಪ್ರಾಯಗಳಲ್ಲಿ ಯಾವುದು ಸಮಂಜಸವಾಗಿ ತೋರುತ್ತದೋ ಅವುಗಳನ್ನು ಇಟ್ಟುಕೊಳ್ಳಬಹುದು. ಆದರೆ ದಾಸನಿಗೆ ತೋರುವದೇನೆಂದರೆ ಶ್ರೀ ನಿಗಮಾಂತರು ಹೇಳಿರುವುದು ೧೨ ದುರವಸ್ಥೆಗಳೆಂದು ನಿಷ್ಕರ್ಷೆಯಿಂದ ತೋರಿಬರುವುದರಿಂದ ಒಂದು ಸಲ ದೇಹ ಪ್ರಾಪ್ತಿಯಿಂದ ಇನ್ನೊಂದು ಸಲ ದೇಹ ಪ್ರಾಪ್ತಿವರೆಗೂ ಇರುವ ದುರವಸ್ಥೆಗಳೆಂದು ತೋರಿಬರುತ್ತವೆ. ಅವು ಯಾವುವೆಂದರೆ- ಪಂಚಾಗ್ನಿ ವಿದ್ಯೆಯಲ್ಲಿ ಹೇಳಿರುವ ಐದು ಸಲ ಐದು ಅಗ್ನಿಗಳಲ್ಲಿ ಹೋಮ ಮಾಡಲ್ಪಡುವುದು, ೬. ಉಲ್ಬಾವೃತವಾಗಿ ಹತ್ತು ತಿಂಗಳ ಗರ್ಭವಾಸ, ೭. ಜನನ, ೮. ಬಾಲ್ಯ, ೯. ಕೌಮಾರ, ೧೦. ಯೌವನ; ೧೧. ವಾರ್ಧಕ, ೧೨ ಉತ್ಕ್ರಾಂತಿ ಅಥವಾ ನಿರ್ಯಾಣದಲ್ಲಿ ಪ್ರಾಪ್ತವಾಗುವ ದುರವಸ್ಥೆಗಳೆಂದು ಇಟ್ಟುಕೊಳ್ಳಬಹುದು. ತಾಯಿಯ ಗರ್ಭದಲ್ಲಿ ಉಲ್ಬಾವೃತವಾಗಿ ಅನುಭವಿಸುವ ದುಃಖಗಳೂ, ಹಾಗೆಯೇ ಜನನ ಬಾಲ್ಯ, ಕೌಮಾರ

ಪಾರ್ಥಕಾದಿಗಳ ದುಃಖಗಳೂ ಇವೆಲ್ಲವೂ ಶ್ರೀ ಪರಾಶರರಿಂದ ೬ನೆಯ ಅಂಶದ ೫ನೆಯ ಅಧ್ಯಾಯದಲ್ಲಿ ನಿಪುಣತರವಾಗಿ ಉಪಪಾದಿತವು. ಇದನ್ನೇ ಶ್ರೀ ನಿಗಮಾಂತ ದೇಶಿಕರವರು ಅಭೀತಿಸ್ತವದಲ್ಲಿ "**ನವಕ್ರಮಪಿಶಕ್ಯತೇ ನರಕಗರ್ಭವಾಸಾದಿಕಂ। ವಪುಶ್ಚ ಬಹುಧಾತುಕಂ ನಿಪುಣ ಚಿನ್ತನೇತಾದೃಶಮ್**" ಗರ್ಭವಾಸವು ನರಕತುಲ್ಯವೆಂದೂ ಅಲ್ಲಿನ ದುಃಖಗಳನ್ನು ಹೇಳಲೇ ಸಾಧ್ಯವಿಲ್ಲವೆಂದು ಹೇಳಿಸಿರುತ್ತಾರೆ. ದಾಸನು ಬರೆದಿರುವ ಅಭೀತಸ್ತವದ ೫೮-೫೯ನೆಯ ಪುಟಗಳನ್ನು ಪರಾಂಬರಿಸಿ. ಧೂಮಾದಿ ಮಾರ್ಗವು ಯಾವುದು ಎಂಬ ವಿಷಯದಲ್ಲಿ ದಾಸನು ಬರೆದಿರುವ ಭಗವದ್ಗೀತೆಯ ೮-೨೫ ಶ್ಲೋಕವಾದ "**ಧೂಮೋರಾತ್ರಿಃ**" ಎಂಬುದರ ಅರ್ಥ ತಾತ್ಪರ್ಯಗಳಲ್ಲಿ ೧೦೦೦-೧೦೦೧ನೆಯ ಪುಟಗಳನ್ನು ನೋಡಿ.

**ಪೂಟ್ಟೈಕ್ಕುಣ್ಡಿಕೈಪ್ಪೋಲೆ ಏರುವದಿಳಿದಾನ ಧೂಮಾದಿ ಮಾರ್ಗತ್ತಿಲೇ** ಎಂದು ಏಕೆ ಹೇಳಲ್ಪಟ್ಟಿತೆಂದರೆ, ಫಲಾಕಾಂಕ್ಷೆಯಿಂದ ನಿತ್ಯನೈಮಿತ್ತಿಕ ಕರ್ಮಾನುಷ್ಠಾನವನ್ನು ಮಾಡುವವನಿಗೆ ಸ್ವರ್ಗಾರೋಹಣವಿರುವುದರಿಂದ ಮೇಲಕ್ಕೆ ಯಾತದ ಗಡಿಗೆಯು ಹಾಗೆ ಹೋಗುವನು. ಅಲ್ಲಿಂದ **ಕ್ಷೀಣೇಪುಣ್ಯೇಮರ್ತ್ಯಲೋಕಂ ವಿಶನ್ತಿ** (ಗೀ ) ಎಂಬಲ್ಲಿ ಹೇಳಿರುವ ಹಾಗೆ ಪುನಃ ಈ ಭೂಲೋಕಕ್ಕೆ ಇಳಿಯುವನು ; ಆದುದರಿಂದ **ಏರುವದಿಳಿದಾನ ಧೂಮಾದಿ ಮಾರ್ಗ**ವೆಂಬ ಪ್ರಯೋಗವು. ನಿರ್ವ್ಯಾಣವನ್ನು ಹೊಂದಿದ ಚೇತನನು ಧೂಮಾದಿ ಮಾರ್ಗವಾಗಿ ಆಕಾಶವನ್ನು ಸೇರಿ ಪುನಃ ವೃಷ್ಟಿ ಮೊದಲಾದುವುಗಳ ಮೂಲಕ ಭೂಮಿಗೆ ಇಳಿದು ಬರುವುದರಿಂದ ಮೇಲಕ್ಕೆ ಹತ್ತುವುದು ಇಳಿಯುವುದು, ಘಟೀ ಯಂತ್ರದ ಕೊಡಗಳ ಹಾಗೆ ಹೇಳಲ್ಪಟ್ಟಿತು. ಇವನ್ನು ರಂಗರಾಮಾನುಜ ಭಾಷ್ಯದಲ್ಲಿ ತಾಯಿಯ ಹೊಟ್ಟೆಯಲ್ಲಿ ಉಲ್ಬಾವೃತನಾಗಿ ಮೂತ್ರಪುರೀಷ ವಾತಪಿತ್ಥ ಶ್ಲೇಷ್ಮಾದಿಗಳ ಸಂಬಂಧವನ್ನು ಹೊಂದಿ ಸುಕುಮಾರವಾದ ಚರ್ಮಕ್ಕೆ ಅಂತಹ ಗರ್ಭಶಯನವು ಅತಿ ಕಷ್ಟವಾಗಿ, ತಾಯಿಯು ತಿನ್ನುವ ಹುಳಿ, ಖಾರದಿಂದ ಪೀಡಿತವಾಗಿ ಮೈಯನ್ನಲ್ಲಾಡಿಸಲು ಕೂಡ ಸ್ಥಳವಿಲ್ಲದೆ ಗರ್ಭಚೀಲದಲ್ಲಿ ಸೇರಿಕೊಂಡು ತುಂಬಾ ಯಾತನೆಗೆ ಶಿಶುವು ಒಳಗಾಗುವನೆಂದು ಹೇಳುವ ಸಂದರ್ಭದಲ್ಲಿ, ಈ ಧೂಮಾದಿ ಮಾರ್ಗದಲ್ಲಿ "**ಘಟೀಯನ್ತ್ರಕುಣ್ಡಿಕಾನ್ಯಾಯೇನಾರೋಹಣಾವರೋಹಣ ಲಕ್ಷಣಂ ಭ್ರಮಣಂ, ಹಿಕ್ರಿಯಮಾಣಾಂ ವೈರಾಗ್ಯಮಾಪಾದಯತಿ**" ಎಂಬುದನ್ನೂ ಕಾಣಬಹುದು. ಈ ಘಟೀ ಯನ್ತ್ರ ಘಟದ ನಿದರ್ಶನವನ್ನು ಶ್ರೀ ದೇಶಿಕರವರೂ ಹಿಂದೆ ಗತಿಚಿಂತನಾಧಿಕಾರದ ಕೊನೆಯ ಶ್ಲೋಕದಲ್ಲಿ ಕೊಟ್ಟಿರುತ್ತಾರೆ, ೧೮೧೫ನೆಯ ಪುಟವನ್ನು ಪರಾಂಬರಿಸಿ.

ಹೀಗೆ ಸತ್ಸಂಪ್ರದಾಯನಿಷ್ಠರಾಗಿ, ಸದ್ಗುರುವನ್ನಾಶ್ರಯಿಸಿ, ಉಪಾಯಾನುಷ್ಠಾನ ಮಾಡಿದವರಿಗೆ ಇಂತಹ ಪುನರಾವೃತ್ತಿ ರೂಪ ದುಃಖ ಪ್ರಾಪ್ತಿ ಯಾವುದೂ ಇಲ್ಲ

**(೧)“ತ್ವಂ ನ್ಯಂಚದ್ಭಿರುದಂಚದ್ಭಿಃ ಕರ್ಮಸೂತ್ರೋಪಪಾದಿತೈಃ| ಹರೇ ವಿಹರಸಿಕ್ರೀಡಾ ಕಂತುಕೈರಿವ ಜಂತುಭಿಃ” ಎಙ್ಗರ ಭಗವಲ್ಲೀಲೋಪಕರಣಮಾನ ದಶೈಕಳಿನ್ದು ಮತ್ತುಳ್ಳ ಅತಿಶಯಿತ ಫಲಙ್ಗಳ್ ಪೆರಪ್ಪೋಮ್ ಅಧಿಕಾರಿಗಳುಡೈಯ ವಳಿಗಳಿಲ್ಕಾಟಿಲ್ ಪುರುಷಾರ್ಥ ಭೂಯಸ್ತೈಯಾಲುಮ್, ಪುನರಾವೃತ್ತಿಯಿಲ್ಲಾಮೈಯಾಲುಮ್, (೨)“ತೇಭ್ಯೋವಿಶಿಷ್ಟಾಂ ಜಾನಾಮಿಗತಿ ಮೋಕಾನ್ತಿನಾಂ ನೃಣಾಮ್” (೩) “ಉತ್ಕ್ರಾಮತಿಚ**

---

ವೆಂದು ಹೇಳಿ, ಅವರಿಗೆ ಆರ್ಚಿರಾದಿಗಮನ, ಅಪುನರಾವೃತ್ತಿರೂಪ ಮೋಕ್ಷಪ್ರಾಪ್ತಿಯೂ ಪರಿಪೂರ್ಣ ಬ್ರಹ್ಮಾನುಭವವೂ ಸಿದ್ಧವೆಂದು ಒಂದು ಮಹಾವಾಕ್ಯದ ಮೂಲಕ ಉಪಪಾದಿಸಿ ನಿಗಮನ ಮಾಡುತ್ತಾರೆ-

ಇಂತಹ ಸಂಪ್ರದಾಯನಿಷ್ಠನಿಗುಂಟಾಗುವ ನಿರತಿಶಯ ಫಲಗಳನ್ನೆಲ್ಲಾ ನಿರೂಪಿಸಿರುತ್ತಾರೆ. (೧) **ಹೇ ಹರೇ**-ಓ ಪಾಪಹರನಾದ ಭಗವಂತನೇ, **ತ್ವಂ**-ನೀವು, **ನ್ಯಂಚದ್ಭಿಃ**-ಗೀತೆಯಲ್ಲಿ “**ಅಧೋಗಚ್ಛನ್ತಿತಾಮಸಾಃ**” (೧೪-೧೮) ಎಂಬಲ್ಲಿ ಹೇಳಿರುವ ಹಾಗೆ, ಅಧೋಗತಿಯನ್ನು ಹೊಂದುವರಾಗಿಯೂ, **ಉದಂಚದ್ಭಿಃ**-“**ಊರ್ಧ್ವಂ ಗಚ್ಛನ್ತಿ ಸತ್ವಸ್ಥಾಃ**” ಎಂಬಲ್ಲಿ ಹೇಳಿರುವ ಹಾಗೆ ಸುಕೃತ ಮೂಲಕ ಮೇಲಕ್ಕೆ ಹತ್ತುವರಾಗಿಯೂ ಇರುವ, **ಕರ್ಮಸೂತ್ರೋಪಪಾದಿತೈಃ**-ದುಷ್ಕೃತ ಸುಕೃತಗಳೆಂಬ ಹಗ್ಗದಿಂದ ಕಟ್ಟಲ್ಪಟ್ಟು “**ಭ್ರಾಮಯರ್ನ್ ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ**” (ಗೀ ೧೮)ಭ್ರಮಿಸಲ್ಪಡುತ್ತಿರುವ, **ಜನ್ತುಭಿಃ**-ಬದ್ಧಜೀವರಾದ ಪ್ರಾಣಿಗಳಿಂದ, **ಕ್ರೀಡಾಕನ್ತುಕೈರಿವ**-ಬಾಲರು ಆಟದ ಚಂಡುಗಳಿಂದ ಹೇಗೋ ಹಾಗೆ, **ವಿಹರಸಿ**-ವಿಹಾರವನ್ನು ಹೊಂದುತ್ತೀಯೆ” **ಎಙ್ಗರ**-ಎಂದು ಹೇಳಿರುವ **ಭಗವಲ್ಲೀಲೋಪಕರಣಮಾನದಶೈ ಕಳಿನ್ದು**-ಭಗವಂತನಿಗೆ ಲೀಲೆಗೆ ಸಾಧನವಾದ ಈ ಲೀಲಾವಿಭೂತಿಯಲ್ಲಿರುವ ದಶೆಯು ಕಳೆದು ಹೋಗಿ, **ಮತ್ತುಳ್ಳ ಅತಿಶಯಿತ ಫಲಙ್ಗಳ್ ಪೆರಪ್ಪೋಮ್ ಅಧಿಕಾರಿಗಳುಡೈಯ**-ಅದಕ್ಕಿಂತಲೂ ಅತಿಶಯವಾದ ಫಲಗಳನ್ನು ಹೊಂದುವ ಅಧಿಕಾರಿಗಳ, **ವಳಿಗಳಿಲ್ಕಾಟ್ಟಿಲ್**-ಅವರುಗಳ ಲೋಕವನ್ನು ಕುರಿತು ಹೋಗುವ ಮಾರ್ಗಗಳಿಗಿಂತಲೂ, ಅತಿಶಯಿತವಾದ ಮಾರ್ಗವು ಈತನಿಗೆ ದೊರೆಯುತ್ತದೆಂಬ ಭಾವವು; ವಿಷ್ಣುಲೋಕ ಬ್ರಹ್ಮಲೋಕ ಇಂದ್ರಾದಿ ದಿಕ್ಪಾಲಕರ ಲೋಕಗಳಿಂದ ಮೇಲಾದ, ಇದನ್ನೇ ಶ್ರೀ ನಿಗಮಾಂತ ದೇಶಿಕರವರು ಇಂದ್ರಪ್ರಜಾಪತಿ ಪಶುಪತಿಗಳ ಐಶ್ವರ್ಯಗಳಿಗಿಂತಲೂ ಅತಿಶಯಿತ ಭೋಗವುಳ್ಳದ್ದೆಂದು ಹೇಳಿರುತ್ತಾರೆ; **ಪುರುಷಾರ್ಥಭೂಯಸ್ತೈ**

---

(೧) ಶೇಷಧರ್ಮ (೩) ಭಾರತ ಶಾನ್ತಿ ೩೫೮. ೯. (೩) ಭಾರತ ಶಾನ್ತಿ ೧೯೬(೨).೧೧

**ಮಾರ್ಗಸ್ಥ ಶೀತೀಭೂತೋನಿರಾಮಯಃ" "ದೇವಯಾನಃ ಪರಃಪನ್ಥಾ ಯೋಗಿನಾಂ ಕ್ಲೇಶಸಂಕ್ಷಯೇ" ಇತ್ಯಾದಿಗಳಿಲ್ ಪಡಿಯೇ ಅತ್ಯನ್ತ ವಿಶಿಷ್ಟ ಮಾಯ್, (೩)"ಆತ್ಮಾ ಕೇವಲತಾಂ ಪ್ರಾಪ್ತೋಯತ್ರಗತ್ವಾನಶೋಚತಿ"**

---

**ಯಾಲುಮ್ ಪುನರಾವೃತ್ತಿ ಇಲ್ಲಾಮೈಯಾಲುಮ್**- ನಿರತಿಶಯವಾದುದಾಗಿ ಪುನರಾವೃತ್ತಿಯಿಲ್ಲಮುದರಿಂದ, ಮುಂದೆ ಆತನು ಹೋಗುವ ಮಾರ್ಗವಾದ ಅರ್ಚಿರಾದಿ ಮಾರ್ಗವನ್ನು ಕೊಂಡಾಡುವ ಪ್ರಮಾಣಗಳನ್ನು ಉದಾಹರಿಸಿರುತ್ತಾರೆ. (೩) **ಏಕಾನ್ತಿನಾಂ**-ಉಪಾಯಾನುಷ್ಠಾನವನ್ನು ಮಾಡಿ ಐಕಾನ್ತ್ಯದಿಂದ ಭಗವಂತನನ್ನು ಧ್ಯಾನಿಸುವ, **ನೃಣಾಂ**-ಮನುಷ್ಯರ, ಎಂದರೆ ಪ್ರಪನ್ನರು ಹೋಗುವ, **ಗತಿಂ**–ಅರ್ಚಿರಾದಿ ಮಾರ್ಗವನ್ನು, **ತೇಭ್ಯಃ**-ಇತರ ಮಾರ್ಗಗಳಿಗಿಂತಲೂ, ಹಿಂದೆ **"ಸಹೋಪನಿಷದಾನ್ವೇದಾರ್ನ್ಯೇ ವಿಪ್ರಾಃ ಸಮ್ಯಗಾಸ್ಥಿತಾಃ। ಪಠನ್ತಿ ವಿಧಿಮಾಸ್ಥಾಯ ಯೇಚಾಪಿ ಯತಿಧರ್ಮಿಣಃ"** ಎಂದು ಇರುತ್ತದೆ; ಆದುದರಿಂದ ವೇದಾಧ್ಯಯನವನ್ನು ಮಾಡುವವರು ಮತ್ತು ಯತಿಗಳು ಹೊಂದುವ ಮಾರ್ಗಗಳಿಗಿಂತ, **ವಿಶಿಷ್ಟಾಂ**–ನಿರತಿಶಯವಾಗಿ ವಿಲಕ್ಷಣವಾದುದನ್ನಾಗಿ, **ಜಾನಾಮಿ**-ತಿಳಿಯುತ್ತೇನೆ. ಇದು ವೈಶಂಪಾಯನವರು ಜನಮೇಜಯರಾಯನಿಗೆ ಏಕಾನ್ತಿಗಳಿಗೆ ಉಂಟಾಗುವ ಉತ್ಕೃಷ್ಟ ಗತಿ ಪ್ರಾಪ್ತಿಯನ್ನು ತಿಳಿಸುವ ಪ್ರಕರಣವು.

**ಶೀತೀಭೂತಃ**-ತಾಪತ್ರಯಗಳಿಂದ ಬಿಡಲ್ಪಟ್ಟಿರುವುದರಿಂದ ತುಂಬಾ ಶಾನ್ತನಾಗಿ ಎಂದರೆ ಪರಮಾನಂದವನ್ನು ಅನುಭವಿಸುವವನಾಗಿ, **ನಿರಾಮಯಃ**-ಇಲ್ಲಿನ ಹಾಗೆ ರೋಗಾದಿ ದುಃಖಗಳಿಲ್ಲದವನಾಗಿ, **ಮಾರ್ಗಸ್ಥಃ**-ಒಳ್ಳೇ ಅರ್ಚಿರಾದಿ ಮಾರ್ಗವನ್ನು ಹೊಂದಿದವನಾಗಿ, **ಉತ್ಕ್ರಾಮತಿ**-ನಿರ್ಯಾಣವನ್ನು ಹೊಂದುವನು ಎಂದರೆ ದೇಹತ್ಯಾಗ ಮಾಡುವನು; ಪ್ರಪನ್ನನು ಹೋಗುವ ಮಾರ್ಗವು ಅತ್ಯುತ್ಕೃಷ್ಟವಾಗಿ ದಿವ್ಯ ವೈಕುಂಠವನ್ನು ಕುರಿತು ಹೋಗುವಂತಾದ್ದೆಂದು ಹೇಳಲ್ಪಟ್ಟಿತು, ಹಾಗೆಯೇ ಇನ್ನೊಂದು ಪ್ರಮಾಣವನ್ನು ಉದಾಹರಿಸುತ್ತಾರೆ.- **ದೇವಯಾನಃ**-ಅರ್ಚಿರಾದಿ ಮಾರ್ಗವು, **ಯೋಗಿನಾಂ**-ಪರಮಾತ್ಮೋಪಾಸನೆಯನ್ನು ಮಾಡಿದ ಉಪಾಯನಿಷ್ಠರಾದ ಪ್ರಪನ್ನರಿಗೆ, **ಕ್ಲೇಶಸಂಕ್ಷಯೇ**-ಸಂಸಾರಕ್ಲೇಶಗಳೆಲ್ಲಾ ನಾಶಹೊಂದಲು, **ಪರಃಪನ್ಥಾ**-ಸರ್ವೋತ್ಕೃಷ್ಟ ಮಾರ್ಗವು, (೩) ಇದು ಭೀಷ್ಮರು ಯುಧಿಷ್ಠಿರರನ್ನು ಕುರಿತು ಜಾಪಕೋಪಾಖ್ಯಾನವನ್ನು ಉಪದೇಶಿಸುವ ಪ್ರಕರಣದಲ್ಲಿ ಬರುತ್ತದೆ. ಅಲ್ಲಿ **"ರುದ್ರಾದಿತ್ಯ ವಸೂನಾಂಚ ತಥಾನ್ಯೇಷಾಂ ದಿವೌಕಸಾಮ್। ಏತೇವೈ ನಿರಯಾಸ್ತಾತ ಸ್ಥಾನಸ್ಯ ಪರಮಾತ್ಮನಃ"** ಪರಮಾತ್ಮನಾದ ಶ್ರೀಮನ್ನಾರಾಯಣನ ದಿವ್ಯ ವೈಕುಂಠಕ್ಕೆ ಈ ರುದ್ರ ಸೂರ್ಯ ವಸ್ತುಗಳು ಮತ್ತು ಇತರ

(೪) **"ಆದಿತ್ಯಾಗ್ನ್ಯಾನಲ ದೀಪ್ತಂ ತತ್ ಸ್ಥಾನಂ ವಿಷ್ಣೋರ್ಮಹಾತ್ಮನಃ॥ ಸ್ವಯೈವ ಪ್ರಭಯಾ ರಾಜನ್ ದುಷ್ಪ್ರೇಕ್ಷ್ಯಂ ದೇವದಾನವೈಃ। ಯತ್ರ ಗತ್ವಾ ಪುನರ್ನೇಮಂ ಲೋಕ ಮಾಯಾನ್ತಿ ಭಾರತ॥"** (೫) **"ಏತೇವೈ ನಿರಯಾಸ್ತಾತ ಸ್ಥಾನಸ್ಯ ಪರಮಾತ್ಮನಃ" ಇತ್ಯಾದಿಗಳಿಲುಮ್, ಸಂಸಾರಾಧ್ವಾವುಕ್ಕು ಪಾರಮೆನ್ರು ಶ್ರುತಿಗಳಿಲುಮ್, ಓದುಪ್ಪಡುಗಿರ ಪರಮ**

---

ದೇವತೆಗಳ ಲೋಕಗಳು ಮತ್ತು ಸ್ಥಾನಗಳನ್ನು ಹೋಲಿಸಿದರೆ ನರಕ ಸಮಾನವಾದುವು ಎಂದು ಹೇಳಲ್ಪಟ್ಟು, ಯೋಗಿಗಳು ಹೋಗಿ ಸೇರುವ ಮಾರ್ಗವು ಸರ್ವೋತ್ಕೃಷ್ಟವಾದುದು; ಅದು ದೇವಯಾನವೆನಿಸುತ್ತದೆ. ದಿವ್ಯ ವೈಕುಂಠವನ್ನು ಹೊಂದಿಸುವ ಮಾರ್ಗವು; ಅಲ್ಲಿ ಕ್ಲೇಶಾದಿಗಳೊಂದೂ ಇಲ್ಲವೆಂದು ಹೇಳಲ್ಪಟ್ಟಿರು ತ್ತದೆ. ಈ ಉಪಾಖ್ಯಾನದಲ್ಲಿ ಮುಂದಕ್ಕೆ ಅಲ್ಲಿ ಕಾಲವು **"ಕಾಲಸ್ತತ್ರ ನ ವೈ ಪ್ರಭುಃ"** ಪರಿಣಾಮವನ್ನುಂಟು ಮಾಡುವ ಶಕ್ತಿಯಿಲ್ಲದವನೆಂದು ಹೇಳಲ್ಪಟ್ಟಿತು. **ಇತ್ಯಾದಿಗಳಿರ್ ಪಡಿಯೇ ಅತ್ಯಂತ ವಸಿಷ್ಠಮಾಯ್** ಎಂದಿರುತ್ತವೆ. **ಆತ್ಮಾ**-ಜೀವಾತ್ಮನು, **ಕೇವಲತಾಂ**-ತಾನಾಗಿಯೇ, ಎಂದರೆ ಹೇಯ ದೇಹದಿಂದ ಬಿಡಲ್ಪಟ್ಟವನಾಗಿರುವ ಪರಿಶುದ್ಧ ಭಾವವನ್ನು, **ಪ್ರಾಪ್ತಃ**-ಹೊಂದಿದವನಾಗಿ, **ತತ್ರಗತ್ವಾ**-ಆ ದಿವ್ಯವೈಕುಂಠವನ್ನು ಹೋಗಿ ಸೇರಿದವನಾಗಿ, **ನಶೋಚತಿ**-ಮುಂದೆ ಎಲ್ಲಾ ಶೋಕಗಳಿಂದಲೂ ಬಿಡಲ್ಪಟ್ಟವನಾಗುವನು, ಎಂದು ಹೇಳಿ, ಆದುದರಿಂದ ಪರಮಾತ್ಮನ ಲೋಕ ಒಂದೇ ನಿರತಿಶಯಾನಂದವನ್ನು ಕೊಡುವಂತಾದ್ದು; ಅದಕ್ಕೆ ಇತರ ಎಲ್ಲಾ ಲೋಕಗಳನ್ನೂ ಸ್ಥಾನಗಳನ್ನೂ ಹೋಲಿಸಿದರೆ, ಇವೆಲ್ಲವೂ **"ಸರ್ವೇನಿರಯ ಸಂಜ್ಞಿತಾಃ"** ನರಕವೆಂದೇ ಹೇಳಬಹುದು ಎಂದು ಮುಗಿಸಿರುತ್ತಾರೆ. **ವಿಷ್ಣೋರ್ಮಹಾತ್ಮನಃ**-ಮಹತ್ತಾದ ಸಙ್ಕಲ್ಪವುಳ್ಳ, ಎಂದರೆ ಸತ್ಯಸಙ್ಕಲ್ಪನಾದ ಶ್ರೀ ಮಹಾ ವಿಷ್ಣುವಿನ, **ತತ್ ಸ್ಥಾನಂ**-ಆ ಪ್ರಸಿದ್ಧವಾದ ನಿತ್ಯವಿಭೂತಿಯು, **ಆದಿತ್ಯಾಗ್ನಿಲದೀಪ್ತಮ್**-ಸೂರ್ಯ ಮತ್ತು ಅಗ್ನಿಗಳ ಪ್ರಕಾಶಕ್ಕೂ ಹೆಚ್ಚಾದ ದೀಪ್ತಿಯುಳ್ಳದು; **ಸ್ವಯೈವ ಪ್ರಭಯಾ**-ತನ್ನ ಸ್ವಕೀಯವಾದ ಕಾಂತಿಯಿಂದಲೇ, ಅದು ಸ್ವಯಂಪ್ರಕಾಶವಾದ ಶುದ್ಧ ಸತ್ವಮಯವಾದುದರಿಂದ, **ಹೇರಾಜನ್**-ಓ ರಾಜನೇ, **ದೇವದಾನವೈಃ**-ಬದ್ಧರಾದ ದೇವತೆಗಳಿಂದಲೂ ರಾಕ್ಷಸರಿಂದಲೂ, **ದುಷ್ಪ್ರೇಕ್ಷ್ಯಂ**-ನೋಡಲಸಾಧ್ಯವಾದುದು; **ಯತ್ರ**-ಯಾವ ಪ್ರಸಿದ್ಧ ಈ ದಿವ್ಯ ವೈಕುಂಠದಲ್ಲಿ, **ಗತ್ವಾ**-ಹೋಗಿ ಸೇರಿದ ನಂತರ, ಪುನಃ, **ಇಮಂಲೋಕಂ**-ಈ ಭೂಲೋಕವನ್ನು ಕುರಿತು, **ಹೇಭಾರತ**-ಓ ಭರತ ಕುಲೋತ್ಪನ್ನನಾದ ರಾಜನೇ, **ನಾಯಾನ್ತಿ**-ಬರುವದಿಲ್ಲವು. ಅಲ್ಲೇ ಶಾಶ್ವತವಾಗಿರುವರು ಎಂಬ ಭಾವವು (೫) **"ಏತೇವೈ**

---

(೫) ಭಾರತ ಶಾನ್ತಿ ೧೯೬

**ಪದತ್ತೈ ಪರ್ಯನ್ತಮಾಕ ಉದ್ಯೈತ್ತಾಯ್ ಭಗವತ್ಪ್ರಸಾದಾವಲಂಬನ ಮಾಯ್, ಪರಿಪೂರ್ಣಮಾನ ಪರಮ ಪುರುಷಾರ್ಥತ್ತೈ ಪ್ಪೆರಪ್ಪೊಕು ಕಿರೋಮೆಂಜ್ಙರ ಸಂತೋಷತ್ತೈ ಪಾಥೇಯಮಾಗ ಉದ್ಯೈತ್ತಾಯ್, (೬) "ತತ್ಪ್ರಕಾಶಿತ ದ್ವಾರಃ" ಎಜ್ಙರಪಡಿಯೇ ಹಾರ್ದನಾನ ಈಶ್ವರ ನುಡೈಯ ಸೌಹಾರ್ದತ್ತಾಲೇ ಕಾಟ್ಟಪ್ಪಡುಗಿರ ಅರ್ಚಿರಾದಿ ಮಾರ್ಗ**

---

**ನಿರಯಾಸ್ತಾತ ಸ್ಥಾನಸ್ಯ ಪರಮಾತ್ಮನಃ''** ಇದರರ್ಥವು ಹಿಂದೆಯೇ ಉಪಪಾದಿತವು" **ಇತ್ಯಾದಿಗಳಿಲುಮ್**-ಇವೇ ಮೊದಲಾದ ಪ್ರಮಾಣಗಳಲ್ಲೂ, **ಸಂಸಾರಾಧ್ವಾವುಕ್ಕು**-ಪುನಃ ಸಂಸಾರವನ್ನು ಹೊಂದುವ ಮಾರ್ಗಕ್ಕೆ, **ಪಾರಮೆನ್ರು**-ಆಚೆಯ ದಡವೆಂದು, **ಶ್ರುತಿಗಳಿಲ್ಲಿ, ಓದುಪ್ಪಡುಗಿರ ಪರಮ ಪದತ್ತೈ ಪರ್ಯಂತಮಾಕ**–ಪಠಿತವಾದ ದಿವ್ಯ ವೈಕುಂಠದ ಪರ್ಯನ್ತವಾಗಿ, **ಉದ್ಯೈತ್ತಾಯ್**-ಹೊಂದಿದವುದಾಗಿಯೂ, ಆ ಶ್ರುತಿಯು ಯಾವುದೆಂದರೆ **"ವಿಜ್ಞಾನಸಾರಥಿರ್ಯಸ್ತು ಮನಃ ಪ್ರಗ್ರಹವಾನ್ನರಃ। ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್** ಎಂಬುದು; ಯಾವನು ವಿಜ್ಞಾನವನ್ನೇ ಸಾರಥಿಯನ್ನಾಗಿಯೂ, ಮನಸ್ಸನ್ನು ದುಷ್ಟ ಕುದುರೆಗಳಾದ ಇಂದ್ರಿಯಗಳನ್ನು ನಿರೋಧಿಸುವ ಲಗಾಮನ್ನಾಗಿಯೂ ತಿಳಿಯುವನೋ ಆತನು ಸಂಸಾರ ಮಾರ್ಗದ ಆಚೇ ದಡವನ್ನು ಸೇರುವನು. ಅದು ಯಾವುದು ಎಂದರೆ ಪ್ರಾಪ್ಯನಾದ ಪರಮಾತ್ಮನೇ ಅಥವಾ ಆತನ ಸರ್ವೋತ್ಕೃಷ್ಟವಾದ ವೈಕುಂಠವು ಎಂಬರ್ಥವು, **ಭಗವತ್ಪ್ರಸಾದಾವಲಂಬನಮಾಯ್**-ಭಗವಂತನ ಅನುಗ್ರಹವೇ ಪರಮಾಧಾರವಾಗಿ (೧೪೫ನೆಯ ೧೭೧೭ನೆಯ ಪುಟವನ್ನೂ ನೋಡಿ) **ಪರಿಪೂರ್ಣಮಾನ ಪರಮಪುರುಷಾರ್ಥತ್ತೈ**–ಏನೊಂದೂ ನ್ಯೂನತೆಯಿಲ್ಲದೆ ಸಂಪೂರ್ಣವಾದ ನಿರತಿಶಯ ಮೋಕ್ಷವನ್ನು, **ಪ್ಪೆರಪ್ಪೊಕು ಗಿರೋಮೆಂಜ್ಙರ ಸಂತೋಷತ್ತೈ**-ಹೊಂದುವುದಕ್ಕಾಗಿ ಹೋಗುವೆವು ಎಂಬ ಆನಂದವನ್ನೇ, **ಪಾಥೇಯಮಾಯ್ ಉದ್ಯೈತ್ತಾಯ್**-ಮಾರ್ಗದ ಆಹಾರವಾದ ಮೊಸರು ಅನ್ನವೆಂದು ಭಾವಿಸಿದವನಾಗಿ, **"ತತ್ಪ್ರಕಾಶಿತ ದ್ವಾರ"** (೧೭೫೨ನೆಯ ಪುಟವನ್ನು ನೋಡಿ) ಸ್ವಾಮಿಯೇ ನಿರ್ಯಾಣ ದೆಶೆಯಲ್ಲಿ ಈ ಪ್ರಪನ್ನನಿಗೆ ಸುಷುಮ್ನಾ ನಾಡಿಯ ಮೂಲಕ ಹೋಗುವ ಹಾಗೆ ಪ್ರಕಾಶಿಸಿ ತೋರಿಸಿ ಕೊಟ್ಟ ದ್ವಾರವೆಂದರೆ ಭಾಗ ಉಳ್ಳವನಾಗಿ, ಇದು **"ತದೋಕೋಗ್ರಜ್ವಲನಂ ತತ್ಪ್ರಕಾಶಿತ ದ್ವಾರಃ"** ಎಂದಾರಂಭಿಸಿ ಹೇಳುವ ಶಾರೀರಕ ಸೂತ್ರ ೪.೨. ೧೬ ಎಂಬ ಬ್ರಹ್ಮಸೂತ್ರದಲ್ಲಿ ಉಪಪಾದಿತವು. ಛಾಂದೋಗ್ಯದ ೮. ೬. ೬ರಲ್ಲಿ **"ಶತಂ ಚೈಕಾಚ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನಮಭಿನಿಸ್ಸೃತೈಕಾ। ತಯೋರ್ಧ್ವಮಾಯನ್ನಿ**

---

(೬) ಶಾರೀರಕ ಸೂತ್ರ ೪. ೨. ೧೯

**ತ್ತಾಲೇ ಅವ್ವೋೀ ದೇವತ್ತೈಗಳ್ ತನ್ನಾತ್ತಮೆಲ್ಲೈಗಳ್ ತೋೀರುವನ್ ಮಂಗಳ ಪ್ರದೀಪ ಪೂರ್ಣ ಕುಂಭಾದಿಗಳ್ಳೈ ಮುನ್ನಿಟ್ಟು ಸಪರಿಕರರಾಯ್ ಎದಿರ್ ಗೊಂಡು, ಸಾರ್ವಭೌಮೋಪಚಾರಙ್ಗಳ್ಳೈ ಪಣ್ಣಿ, ವಳಿನಡತ್ತ ಕರ್ಮ ಲೋೀಕತ್ತಿಲಿರನ್ದ ನಾಳಿರೈಕೊಣ್ಣ ದೇೀವತ್ತೈಗಳೆಲ್ಲಾಮ್ ಕಾಣಿಕ್ಕೈಯಿಟ್ಟು**

---

**ಮೃತತ್ವಮೇೀತಿ ವಿಷಙ್ಙನ್ಯಾ ಉತ್ಕ್ರಮಣೇ ಭವನ್ತಿ”** ಎಂಬಲ್ಲಿ ಹೇಳಿರುವ ಹಾಗೆ ಪ್ರಪನ್ನನಲ್ಲಿರುವ ಪ್ರೀತ್ಯತಿಶಯದಿಂದ ನಿರ್ಯಾಣ ಕಾಲದಲ್ಲಿ ಭಗವಂತನು ಆ ದ್ವಾರವನ್ನು ಪ್ರಕಾಶಗೊಳಿಸಿ ಆತನನ್ನು ಆ ಮೂಲಕವಾಗಿ ಸ್ಥೂಲ ದೇಹವನ್ನು ಬಿಟ್ಟು ಹೊರಟು, ಸೂಕ್ಷ್ಮಶರೀರದ ಮೂಲಕ ಅಲ್ಲಿಂದ ಅರ್ಚಿರಾದಿಗತಿಯನ್ನು ಸೇರುವ ಹಾಗೆ ಮಾಡುವನು; ಸಂಸಾರಿಯಾಗುವವನನ್ನು ನೂರಾರು ನಾಡಿಗಳ ಮೂಲಕವಾಗಿಯೂ ಪ್ರಪನ್ನನನ್ನುಮಾತ್ರ ನೂರೊಂದನೆಯ ನಾಡಿಯ ಮೂಲಕ ಅರ್ಚಿರಾದಿ ಮಾರ್ಗವನ್ನು ಭಗವಂತನೇ ತೋರಿಸುವನು ಎಂಬ ಪ್ರಮಾಣವಿರುತ್ತದೆ. (ನಿರ್ಯಾಣಾಧಿಕಾರದ ೧೧೫೮ ನೆಯ ಪುಟವನ್ನು ಪರಾಂಬರಿಸಿ) **ಎಙ್ಗರಪಡಿಯೇ ಹಾರ್ದನಾನ**-ಪರಮಸುಹೃತ್ತಾದ, **ಈಶ್ವರನುಡೈಯ**-ಸರ್ವೇಶ್ವರನ, **ಸೌಹಾರ್ದತ್ತಾಲೇ**-ಪರಮ ಪ್ರೀತಿಯಿಂದ, **ಕಾಟ್ಟಪ್ಪಡುಗಿರ**-ತೋರಿಸಲ್ಪಟ್ಟ, **ಅರ್ಚಿರಾದಿ ಮಾರ್ಗತ್ತಾಲೇ**-ಗತಿಚಿನ್ತನಾಧಿಕಾರದಲ್ಲಿ ಹೇಳಲ್ಪಟ್ಟಿರುಕ ೧೨ ಜನ ಆತಿವಾಹಿಕರು ತೋರಿಸಿದ ಮಾರ್ಗದಲ್ಲಿ, **ಅವ್ವೋೀದೇವತ್ತೈಗಳ್**-ಆಯಾ ಅರ್ಚಿರಾದಿ ದೇವತೆಗಳು, **ತನ್ನಾತ್ತಮ್ ಎಲ್ಲೈಗಳ್ ತೋೀರುವನ್**-ತಮ್ಮ ತಮ್ಮ ಸರಹದ್ದುಗಳವರೆಗೂ, **ಮಂಗಳ ಪ್ರದೀಪ ಪೂರ್ಣಕುಂಭಾದಿಗಳ್ಳೈ**-ಮುಂದೆ ಪ್ರಾಪ್ತವಾಗುವ ಶುಭ ಸೂಚನೆಗಾಗಿ ಅವರುಗಳಿಂದ ತರಲ್ಪಟ್ಟ, ಪೂರ್ಣವಾದ ಕುಂಭಗಳನ್ನೂ ಆದಿ ಪದದಿಂದ ಹಾರ ಮೊದಲಾದುಗಳು ಸೂಚಿತವು, ಇವೆಲ್ಲಾ ಆ ದೇವತೆಗಳು, ಈ ಪ್ರಪನ್ನನು ದಿವ್ಯ ವೈಕುಂಠಾಭಿಮುಖವಾಗಿ ಹೋಗುವಾಗ ಮಾಡುವ ಮರ್ಯಾದೆಯಾದ ಸತ್ಕಾರಗಳು, **ಮುನ್ನಿಟ್ಟು**-ಪ್ರದೀಪ ಪೂರ್ಣಕುಂಭಾದಿಗಳನ್ನು ಕೈಯ್ಯಲ್ಲಿ ತೆಗೆದುಕ್ಕೊಂಡು ಹೋಗುವರಾಗಿ, **ಸಪರಿಕರರಾಯ್**-ಇತರ ಪರಿಕರಂಗಳೊಂದಿಗೆ, ಛತ್ರ ಚಾಮರಾದಿಗಳೊಂದಿಗೆ, **ಎದಿರ್‌ಗೊಂಡು**-ಈ ಪ್ರಪನ್ನನನ್ನು ಎದುರುಗೊಂಡು ಬಂದು, ಬರಮಾಡಿಕ್ಕೊಂಡು ಎಂಬರ್ಥವು, **ಸಾರ್ವಭೌಮೋಚಾರಙ್ಗಳ್ಳೈಪಣ್ಣಿ**-ಚಕ್ರವರ್ತಿಗೆ ಅರ್ಹವಾದ ಉಪಚಾರಗಳನ್ನು ಮಾಡಿ, **ವಳಿನಡತ್ತ**- ಮಾರ್ಗ ತೋರಿಸಿ ಕಳುಹಿಸಲಾಗಿ, **ಕರ್ಮಲೋೀಕತ್ತಿಲಿರುನ್ದನಾಳ್**-ಈ ಭೂಲೋಕ ಸ್ವರ್ಗಾದಿ ಲೋಕಗಳಲ್ಲಿದ್ದ ಕಾಲದಲ್ಲಿ, **ಇರೈಕೊಂಡ**-ಇವನಿಂದ ಪೂಜಿಸಲ್ಪಟ್ಟ ಅಥವಾ ಆದರಿಸಲ್ಪಟ್ಟ, ಇವನು ಮಾಡಿದ ಪಂಚಮಹಾದಿ ಯಜ್ಞಗಳೇನು ಮತ್ತು ಇತರ ನೈಮಿತ್ತಿಕ ಕಾಲಗಳಲ್ಲಿ ಯಜ್ಞ ಹವನಾದಿಗಳೇನೂ ಇವುಗಳಲ್ಲೆಲ್ಲಾ ಹವಿಸ್ಸು ಸಮರ್ಪಣೆ ಮೂಲಕ ಪೂಜಿಸಲ್ಪಟ್ಟ ಎಂಬ ಭಾವವು,

**ಕ್ಕಂಡು ಅನುವರ್ತ್ತಿಕ್ಕ, ಅವರ್‌ಕಳುಕ್ಕುಮ್ ಎಟ್ಟವೊಣ್ಣಾದ ಎಲ್ಲೈಗಳೈಯೆಲ್ಲಾಮ್ ಕಡನ್ದು ನಿತ್ಯಸೂರಿಗಳ್ ತಿರಳಿರುಕ್ಕಾಲ್ ವಾಶಿ ತೆರಿಯಾದ ಪಡಿಯಾನ ನಿರತಿಶಯ ಪೂರ್ತ್ತಿಯೈಪ್ಪೆತ್ತು**(1) " **ತತೋಮಹತಿಪರ್ಯಂಕೇ ಮಣಿಕಾಂಚನ ಚಿತ್ರಿತೇ। ದದರ್ಶ ಕೃಷ್ಣ ಮಾಸೀನಂ ನೀಲಂ ಮೇರಾವಿವಾಂಬದಮ್। ಜಾಜ್ವಲ್ಯಮಾನಂವಪುಷಾ ದಿವ್ಯಾಭರಣ ಭೂಷಿತಮ್ ಪೀತ ಕೌಶೇಯ ಸಂವೀತಂ ಹೇಮ್ನಿವೋಪಚಿತಂ ಮಣಿಮ್। ಕೌಸ್ತುಭೇನ**

---

ಇಂದ್ರಾಗ್ನಿ ದೇವತೆಗಳೆಲ್ಲಾ, **ಕಾಣಿಕ್ಕೈಯಿಟ್ಟುಕ್ಕಂಡು**-ಇವರಿಗೆ ಅರ್ಚಿರಾದಿ ದೇವತೆಗಳು ಮಾಡಿದ ಉಪಚಾರಗಳನ್ನೆಲ್ಲಾ ನೋಡಿ, **ಅನುವರ್ತಿಕ್ಕ**-ಸ್ವಲ್ಪ ದೂರ ಹಿಂಬಾಲಿಸಲಾಗಿ **ಅವರ್‌ಗಳುಕ್ಕುಮ್**-ಆ ಇಂದ್ರಾಗ್ನಿ ದೇವತೆಗಳಿಗೂ, **ಎಟ್ಟವೊಣ್ಣಾದ** – ಅಸಾಧ್ಯವಾದ, **ಎಲ್ಲೈಗಳೈಯೆಲ್ಲಾಮ್**–ಸರಹದ್ದುಗಳನ್ನೆಲ್ಲಾ, **ಕಡನ್ದು**–ದಾಟಿ (ಇಲ್ಲಿವರೆವಿಗೂ ಅರ್ಚಿರಾದಿಗತಿಯು ಹೇಳಲ್ಪಟ್ಟಿತು. ಇದನ್ನೆಲ್ಲಾ ಗತಿಚಿನ್ತನಾಧಿಕಾರದ ಅವಲೋಕನದಿಂದ ಗ್ರಹಿಸಬಹುದು) **ನಿತ್ಯಸೂರಿಗಳ್**-ದಿವ್ಯವೈಕುಂಠದಲ್ಲಿರುವ ನಿತ್ಯಸೂರಿಗಳ್, **ತಿರಳಿರ್.**

ಪುಕ್ಕಾಲ್–ಪ್ರವೇಶಿಸಿದರೆ, **ವಾಶಿತೆರಿಯಾದಪಡಿಯಾನ**-ವ್ಯತ್ಯಾಸವೇನೂ ಇಲ್ಲದಿರುವ, ದಿವ್ಯ ವೈಕುಂಠವನ್ನು ಸೇರಿದ ನಂತರ ಮುಕ್ತಿಯನ್ನು ಹೊಂದಿಬಂದಿರುವವರಿಗೂ ನಿತ್ಯಸೂರಿಗಳಿಗೂ ಅನಂತರ ಏನೂ ವ್ಯತ್ಯಾಸವಿಲ್ಲವೆಂಬ ಭಾವವು. ನಿತ್ಯಸೂರಿಗಳೂ ಹೇಗೆ ಜ್ಞಾನಸ್ವರೂಪರಾಗಿ ಜ್ಞಾನಗುಣಕರಾಗಿ ಗುಣಾಷ್ಟಕಗಳಿಂದ ಶೋಭಿಸಿ ಪರಿಪೂರ್ಣ ಬ್ರಹ್ಮಾನುಭವರೂಪಾನಂದವನ್ನು ಹೊಂದಿ ಸರ್ವವಿಧ ಕೈಂಕರ್ಯಗಳಲ್ಲಿ ಅನ್ವಯ ಉಂಟೋ ಹಾಗೆಯೇ ಈ ಮುಕ್ತರೂ ಎಂಬ ಭಾವವು. **ನಿರತಿಶಯಪೂರ್ತಿಯೈ**-ನಿರತಿಶಯವಾದ ಪರಿಪೂರ್ಣ ಬ್ರಹ್ಮಾನುಭವವನ್ನು **ಪೆತ್ತು**-ಹೊಂದಿ.

ಆ ಪರಿಪೂರ್ಣ ಬ್ರಹ್ಮಾನುಭವವೆಂತಾದ್ದೆಂಬುದನ್ನು ವರ್ಣಿಸುವದು ಸಾಧ್ಯವಲ್ಲದುದರಿಂದ ಶ್ರೀ ಕೃಷ್ಣಾವತಾರ ದೆಶೆಯಲ್ಲೂ ರಾಮಾವತಾರ ದೆಶೆಯಲ್ಲೂ ಮಹರ್ಷಿಗಳಿಗೆ ತಾನು ತೋರಿಸಿ, ಅವರನುಭವಿಸಿ ವರ್ಣಿಸಿರುವ ದಿವ್ಯಮಙ್ಗಳ ವಿಗ್ರಹಗಳನ್ನು ಮುಂದೆ ವರ್ಣಿಸುತ್ತಾರೆ. ಅರ್ಜುನನಿಗೆ ಶ್ರೀ ಕೃಷ್ಣ ಭಗವಾನರವರು ತಮ್ಮ ಮಹಾತ್ಮ್ಯೆಯನ್ನು ತಿಳಿಸುವದಕ್ಕಾಗಿ ವಿಶ್ವರೂಪವನ್ನು ತೋರಿಸಿದರು. ಇದರಿಂದ ಅರ್ಜುನನು ತೃಪ್ತನಾಗದೆ ಪ್ರಾಪ್ಯವಾದ ಪರವಾಸುದೇವರೂಪವನ್ನು ತೋರಿಸಿ ಎಂದು **ತದೇವಮೇದರ್ಶಯ ದೇವರೂಪಂಪ್ರಸೀದ ದೇವೇಶ ಜಗನ್ನಿವಾಸ** ಎಂದು ಬೇಡುತ್ತಾನೆ. ಆದರೆ ಆ ರೂಪವನ್ನು ಎಂದೂ ನೋಡದವನಾದುದರಿಂದ ಉಪನಿಷತ್ತು ಮೊದಲಾದುವುಗಳಲ್ಲಿ ವರ್ಣಿಸಿರುವುದನ್ನು ತಿಳಿದವನಾಗಿ ಆ ದಿವ್ಯಮಂಗಳ ವಿಗ್ರಹವನ್ನು " **ಕಿರೀಟಿನಂಗದಿನಂ ಚಕ್ರಹಸ್ತಂ ಇಚ್ಛಾಮಿತ್ವಾಂದ್ರಷ್ಟು ಮಹಂತಥೈವ। ತೇನೈವರೂಪೇಣ ಚತುರ್ಭುಜೇನ ಸಹಸ್ರಬಾಹೋ**

---

1 ಭಾ. ಶಾನ್ತಿ. 44, 13-16

**ಹ್ಯುರಸ್ಥೇನ ಮಣಿನಾ ಭಿ ವಿರಾಜಿತಮ್ | ಉದ್ಯತೇವೋದಯಂ ಶೈಲಂ ಸೂರ್ಯೇಣಾಪ್ತಂ ಕಿರೀಟಿನಮ್ | ಸೌಪಮ್ಯಂ ವಿದ್ಯತೇತಸ್ಯ ತ್ರಿಷು ಲೋಕೇಷು ಕಿಂಚನ" "ತು ವೈಶ್ರವಣ ಸಂಕಾಶಂ ಉಪವಿಷ್ಟಂ**

---

**ಭವ ವಿಶ್ವಮೂರ್ತೇ"** ಸಹಸ್ರಬಾಹುವುಳ್ಳ ವಿಶ್ವರೂಪವನ್ನು ತ್ಯಜಿಸಿ ಚತುರ್ಭುಜವುಳ್ಳ **ತೇನೈವ**-ಆ ಪ್ರಸಿದ್ಧವಾದ ದಿವ್ಯ ವೈಕುಂಠ ರೂಪವನ್ನು ತೋರು ಎಂಬ ಅರ್ಜುನನ ಪ್ರಾರ್ಥನೆಯು, ಭಕ್ತವತ್ಸಲನ ಸೌಲಭ್ಯಾದಿಪೂರ್ಣತೆಯನ್ನು ಪ್ರದರ್ಶಿಸುವರಾಗಿ ಆ ಪರವಾಸುದೇವ ರೂಪವನ್ನು ತೋರಿಸಿ "**ರೂಪಂಪರಂ ದರ್ಶಿತಮಾತ್ಮಯೋಗಾತ್**" ಎಂದು ಹೇಳಿ ಆತನ ಮನೋರಥವನ್ನು ಪೂರ್ಣ ಮಾಡಿರುತ್ತಾರೆ.

ಇದೇ ರೂಪವನ್ನೇ ಶ್ರೀ ಯತಿವರ್ಯರೂ ತಮ್ಮ ಗದ್ಯಗಳಲ್ಲಿ ವರ್ಣಿಸಿರುತ್ತಾರೆ. ಆದುದರಿಂದ ಶ್ರೀ ವ್ಯಾಸಮಹರ್ಷಿ ವಾಲ್ಮೀಕಿ ಮಹರ್ಷಿಗಳು ಅನುಭವಿಸಿ ಬರೆದಿರುವ ದಿವ್ಯಮಂಗಳ ವಿಗ್ರಹವನ್ನು ಮುಂದೆ "**ತತೋಮಹತಿಪರ್ಯಂಕೇ**" ಎಂದು ಆರಂಭಿಸಿ ವರ್ಣಿಸಿರುತ್ತಾರೆ. ಇದು ಪಂಚಪಾಂಡವರಿಗೆ ಸಿಪ್ಪಂಟಿಕರಾಜ್ಯದಲ್ಲಿ ಪಟ್ಟಾಭಿಷೇಕ ನಡೆಸುವದಕ್ಕಾಗಿ ಬಂದ ಶ್ರೀ ಕೃಷ್ಣ ಭಗವಾನರನ್ನು ಬಿಡದಿ ಅರಮನೆಯಲ್ಲಿ ಬಿಜಯಮಾಡಿಸಿ ರಾತ್ರಿ ಸುಖವಾಗಿ ನಿದ್ರೆ ಬಂತೇ ಎಂದು ವಿಚಾರಿಸುವದಕ್ಕಾಗಿ ಬಂದ ಯುಧಿಷ್ಠರನಿಗೆ ಸೇವೆ ಇತ್ತುದರ ವರ್ಣನೆಯು.

"ತತಃ ಅನಂತರದಲ್ಲಿ **ಮಣಿಕಾಂಚನಚಿತ್ರಿತೇ**-ರತ್ನ ಮತ್ತು ಸುವರ್ಣದಿಂದ **ಕೆತ್ತಲ್ಪಟ್ಟ** ಅತಿವಿಚಿತ್ರವಾಗಿ ಮನೋಹರವಾದ, **ಪರ್ಯಂಕೇ**-ಮಂಚದಲ್ಲಿ **ಆಸೀನಂ**-ಕೂತಿರುವ, **ಕೃಷ್ಣಂ**-ಶ್ರೀ ಕೃಷ್ಣನನ್ನು, **ದದರ್ಶ**-ಯುಧಿಷ್ಠರನು ಕಂಡನು. ಹೇಗೆ ಕಂಡನು ಅಂದರೆ **ನೀಲಂಮೇರಾವಿವಾಂಬುದಮ್**-ಮೇರುಪರ್ವತದ ಮೇಲಿರುವ ಕಪ್ಪು ಮೇಘದ ಹಾಗೆ, ಶ್ರೀ ಕೃಷ್ಣನು ನೀಲಮೇಘಶ್ಯಾಮನೆಂಬುದು ಪ್ರಸಿದ್ಧವು. ಪಾಣಾಳ್ವಾರ್ **ಕೊಂಡಳ್ವಣ್ಣ**ನೆಂದು **ಕೊಂಡಾಡಿರುತ್ತಾರೆ.** ದಿವ್ಯಾಭರಣಭೂಷಿತವಾದ ಶರೀರದಿಂದ ಜ್ವಾಜಲ್ಯಮಾನನಾದವನು. ಆ ದಿವ್ಯಾಭರಣಗಳು ಯಾವುವು ಎಂಬುದನ್ನು ಶ್ರೀ ಯತಿರಾಜರು ಗದ್ಯದಲ್ಲಿ ತಿಳಿಸಿರುತ್ತಾರೆ. ಮತ್ತು ಎಂತವನನ್ನು ಕಂಡನು ಎಂದರೆ **ಪೀತಕೌಶೇಯ ಸಂವೀತಂ**-ಪೀತಾಂಬರಧರನು, ಹಳದಿ ಬಣ್ಣದ ರೇಶ್ಮೆಯ ಬಟ್ಟೆಯನ್ನು ಉಟ್ಟಿರುವನನ್ನೂ, **ಹೇಮ್ನಿ ಉಪಚಿತಂಮಣಿಂ**-ಭಂಗಾರದಲ್ಲಿ ಕೆತ್ತಲ್ಪಟ್ಟ ಕೌಸ್ತುಭ ರತ್ನವನ್ನುಳ್ಳವನನ್ನೂ; ಇಷ್ಟೆಲ್ಲಾ ಮಹಿಮೆಯುಳ್ಳವನಾಗಿ ಸೇವೆಯನಿತ್ತನೆಂಬ ಭಾವವು. ಮತ್ತೂ ಕೃಷ್ಣನು ಇತ್ತ ಸೇವೆಯು ಇನ್ನೂ ಎಂತಾದ್ದೆಂದರೆ ಹೇಳುತ್ತಾರೆ. **ಉರಸ್ಥೇನ**-ವಕ್ಷಸ್ಥಲದಲ್ಲಿರುವ, **ಮಣಿನಾ**-ಕೌಸ್ತುಭಮಣಿಯಿಂದ, **ಅಭಿ ವಿರಾಜಿತಂ**-ದೇಹವೆಲ್ಲಾ ಹೆಚ್ಚಾಗಿ ಶೋಭಿಸುತ್ತಿರುವವನನ್ನು. ಕೌಸ್ತುಭಮಣಿಯು ವಕ್ಷಸ್ಥಳದಲ್ಲಿರುವದು ಜೀವಾತ್ಮನು ತನಗೆ ತುಂಬಾ ಹೃದ್ಯನೆಂಬುದನ್ನು ಸೂಚಿಸುತ್ತದೆ; ಆದುದರಿಂದ ಶ್ರೀ ನಿಗಮಾನ್ತದೇಶಿಕರವರು **ಮಣಿವರ ಇವಶೌರೇಃ**

**ಸ್ವಲಂಕೃತಮ್ | ದದರ್ಶ ಸೂತಃ ಪರ್ಯಂಕೇ ಸೌವರ್ಣೇ ಸೋತ್ತರಚ್ಛದೇ | ವರಾಹರುಧಿರಾಭೇಣ ಶುಚಿನಾ ಚ ಸುಗಂಧಿನಾ | ಅನುಲಿಪ್ತಂ ಪರಾರ್ಥ್ಯೇನ ಚಂದನೇನ ಪರಂತಪಂ | ಸ್ಥಿತಯಾ ಪಾರ್ಶ್ವತಶ್ಚಾಪಿ ವಾಲವ್ಯಜನಹಸ್ತಯಾ | ಉಪೇತಂ ಸೀತಯಾ ಭೂಯಶ್ಚಿತ್ರಯಾಶಶಿನಂ ಯಥಾ | ತಂ ತಪಂತ ಮಿವಾ ದಿತ್ಯ ಮುಪಪನ್ನಂ ಸ್ವತೇಜಸಾ| ವವಂದೇ ವರದಂ**

---

**ನಿತ್ಯಹೃದ್ಯೋಪಿಜೀವಃ** ಎಂದು ಪ್ರಯೋಗಿಸಿರುತ್ತಾರೆ–ಪರಮ ಪುರುಷನು ಇನ್ನು ಹೇಗೆ ಕಂಡನು ಎಂದರೆ ? **ಉದ್ಯತಾ**–ಉದಿಸಿಕ್ಕೊಂಡಿರುವ, **ಸೂರ್ಯೇಣ**–ಸೂರ್ಯನಿಂದ, **ಆಪ್ತಂ**–ವ್ಯಾಪಿಸಲ್ಪಟ್ಟ, ಉದಯಂಶೈಲಮಿವ–ಉದಯಪರ್ವತದ ಹಾಗೆ ಇರುವವನನ್ನು, **ಕಿರೀಟಿನಂ**–ಕಿರೀಟವನ್ನು ಧರಿಸಿರುವವನನ್ನೂ; ಅರ್ಜುನನು ಪ್ರಾರ್ಥ್ಯರೂಪನನ್ನು **ಕಿರೀಟಿನಂಗದಿನಂ ಚಕ್ರಹಸ್ತಂ** ಎಂದು ವರ್ಣಿಸಿರುತ್ತಾನೆ (ಗೀ ೧೧). ಇಂತಹ ಕೃಷ್ಣನನ್ನು ಯುಧಿಷ್ಠರನು **ದದರ್ಶ**–ಕಂಡನು ಎಂದು ಅನ್ವಯವು. **ತಸ್ಯ**–ಅಷ್ಟು ಮಹಿಮೆಯುಳ್ಳ ಆ ಕೃಷ್ಣ ಭಗವಾನನಿಗೆ **ತ್ರಿಷು ಲೋಕೇಷು**–ಮೂರು ಲೋಕಗಳಲ್ಲೂ **ಕಿಂಚನ**–ಸ್ವಲ್ಪವಾಗಲಿ **ಔಪಮ್ಯಂ**–ಸಮಾನ ಹೋಲಿಕೆ ಇರುವವರು ಯಾರೂ, **ನವಿದ್ಯತೆ**–ಇರುವದಿಲ್ಲ. ಸಮಾನವಾದುದೇ ಇಲ್ಲವಾದರೆ ಅಧಿಕವಾದರೂ ಇಲ್ಲವೇ ಇಲ್ಲವೆಂಬುದು ಸಿದ್ಧವು. ಸಿಸ್ಸಮಾಭ್ಯಧಿಕ **ಶ್ರುತ್ಯರ್ಥವು** ಉಪಪಾದಿತವು.

ಮುಂದೆ ಶ್ರೀಮದ್ರಾಮಾಯಣದಲ್ಲಿ ಸುಮಂತ್ರನಿಗೆ ಶ್ರೀರಾಮನು ಇತ್ತ ಸೇವೆಯನ್ನು ವರ್ಣಿಸುತ್ತಾರೆ. ಯೌವರಾಜ್ಯಾಭಿಷೇಕವನ್ನು ಬೆಳಸುವದಕ್ಕಾಗಿ ಕೌಸಲ್ಯಾ ಕೈಕೇಯಿಗಳಿಂದ ಪ್ರೇರಿತನಾದ ದಶರಥನು ಸುಮಂತ್ರನನ್ನು ರಥದೊಂದಿಗೆ ಕಳುಹಿಸಿ ಶ್ರೀರಾಮನನ್ನು ಕರೆದುಕೊಂಡು ಬಾ ಎಂದು ಆಜ್ಞಾಪಿಸಲ್ಪಟ್ಟ ಸುಮಂತ್ರನು ಶ್ರೀರಾಮನಿರುವ ಅರಮನೆಯಲ್ಲಿ ಕಂಡ ಸೇವೆಯು (ರಾ. ಅಯೋಧ್ಯಾ 16–8)

ಶ್ರೀ ನಿಗಮಾಂತದೇಶಿಕರಿಗೆ ಮೇಲೆ ಯುಧಿಷ್ಠರನಿಗೆ ಶ್ರೀ ಕೃಷ್ಣನು ಯಿತ್ತ ಸೇವೆಯಲ್ಲಿ ರುಕ್ಮಿಣಿ ಸಾನ್ನಿಧ್ಯವಿಲ್ಲದುದರಿಂದ ತೃಪ್ತಿ ಸಾಲದೆ ಸುಮಂತ್ರನಿಗೆ ಇತ್ತ ಸೇವೆಯಲ್ಲಿ ಸೀತಾಸಮೇತರಾಮನಾದುದರಿಂದ, ಸುಮಂತ್ರನು ಯುಧಿಷ್ಠರನಿಗಿಂತ ಹೆಚ್ಚು ಭಾಗ್ಯೋದಯವೆಂಬ ಭಾವದಿಂದ ಅದನ್ನು ವರ್ಣಿಸುತ್ತಾರೆ–**ಸೂತಃ**–ಸುಮಂತ್ರನು, ಸೌವರ್ಣೇ–ಸುವರ್ಣಮಯವಾಗಿಯಿರುವ, **ಉತ್ತರಚ್ಛದೇ**–ಮಗ್ಗಲು ಹಾಸಿಗೆಯುಳ್ಳ, **ಪರ್ಯಂಕೇ**–ಮಂಚದಲ್ಲಿ ಅಥವಾ ಸಿಂಹಾಸನದಲ್ಲಿರುವ, ಹಂಸತೂಲಿಕಾತಲ್ಪದ ಮೇಲೆ ಪೀತಾಂಬರ ಹಾಸಿರುವ

ಅಥವಾ ಸುವರ್ಣಮಯವಾದುದು ಉತ್ತರಚ್ಛದ ಮತ್ತೂ ಪರ್ಯಂಕವೆಂದೂ ಅರ್ಥವಾಗಬಹುದು. **ವೈಶ್ರವಣಸಂಕಾಶಂ**–ಸರ್ವ ಸಂಪತ್ತುಗಳಿಂದಲೂ ಕೂಡಿರುವ ಕುಬೇರನಹಾಗೆ ಇರುವ. ಕುಬೇರ ಸಾದೃಶ್ಯದಿಂದ ತುಂಬಾ ಐಶ್ವರ್ಯವಿದ್ದರಲ್ಲವೇ

ವಿಶೇಷವಾಗಿ ಕೊಟ್ಟಾನು ; ಆದುದರಿಂದ ಉದಾರನಾಗಿ ಆಶ್ರಮಿಸಿದವರ ಕೋರಿಕೆಯನ್ನು ಸಲ್ಲಿಸುವವನು ಎಂಬ ಭಾವವು. ಇಂತಹ ಔದಾರ್ಯವಿರುವುದರಿಂದಲೆ ಸ್ವಾಮಿಯು ಆರಾಧನೆಯ ಮಂಗಳಾರತಿ ಕಾಲದಲ್ಲಿ “ **ಕುಬೇರಾಯ ವೈಶ್ರವಣಾಯ ಮಹಾರಾಜಾಯ ನಮಃ** ” ಕುಬೇರ ಶರೀರಕ ಪರಮಾತ್ಮನನ್ನು ಹೊಗಳುತ್ತೇವೆ. ಈ ಅಭಿಪ್ರಾಯವೇ ಶ್ರೀಸೂಕ್ತದಲ್ಲಿ “ **ಉಪೈತುಮಾಂದೇವ ಸಖಃ** ” ಎಂಬ ಪ್ರಯೋಗವಿರುತ್ತದೆ. **ದೇವಸಖುಸು** ಎಂದರೆ ರುದ್ರಸಖನು ಕುಬೇರನು ಎಂಬ ಅರ್ಥವು. ಶ್ರುತಿಯು **ಏಕೋಬಹೂನಾಂ ವಿದಧಾತಿ ಕಾಮಾರ್ನ್** ಎಂದು ಹೇಳುತ್ತದೆ. “ **ಅವ್ಯಯಃ ಪುರುಷಃ ಸಾಕ್ಷೀ** ”- ಎಂದು ಸಹಸ್ರನಾಮದಲ್ಲಿ ಹೇಳಿರುವ ಹಾಗೆ **ಪುರುಸನೋತಿ** ಎಂಬ ವ್ಯುತ್ಪತ್ತಿಯ ಮೂಲಕ ಬಹುವಾಗಿ ಕೊಡುವವನು ಪರಮಪುರುಷನು. ಕುಬೇರನು ವಿಶ್ರವಸ್ಸಿನ ಮಗನಾದುದರಿಂದ **ವೈಶ್ರವಣ**ನೆಂದು ಕರೆಯಲ್ಪಟ್ಟಿರುತ್ತಾನೆ. ತುಂಬಾ ಐಶ್ವರ್ಯಯುಕ್ತನಾದುದರಿಂದ **ವೈಶ್ರವಣ ಸಂಕಾಶಂ** ಎಂಬ ಪ್ರಯೋಗವು. ಇನ್ನೂ ಶ್ರೀರಾಮನು ಹೇಗಿದ್ದನು ಎಂದರೆ **ಸ್ವಲಂಕೃತಃ** – ಚನ್ನಾಗಿ ಅಲಂಕರಿಸಲ್ಪಟ್ಟವನಾಗಿ, **ಉಪವಿಷ್ಟಂ**-ಆ ಮಂಚದ ಮೇಲೆ ಕುಳಿತಿರುವ, **ವರಾಹರುಧಿರಾಭೇಣ,** ಹಂದಿಯ ರಕ್ತವು ತುಂಬಾ ಕೆಂಪು ಎಂಬ ಪ್ರಸಿದ್ಧಿಯು, ಆದುದರಿಂದ ಹೆಚ್ಚಾಗಿ ಕುಂಕುಮಕೇಸರಿ ಸೇರಿರುವದರಿಂದ ಹಂದಿಯ ರಕ್ತದ ಹಾಗೆ ಕೆಂಪಗಿರುವ, ಶುಚಿನಾ ಸುಗಂಧಿನಾ–ವರಾಹ ರಕ್ತವು ಹೇಯವಾಗಿ ಕೆಟ್ಟ ವಾಸನೆಯುಳ್ಳದು, ಹಾಗಲ್ಲದೆ ನಿರ್ಮಲವಾಗಿ ಸುವಾಸನೆಯುಳ್ಳ **ಪರಾರ್ಥ್ಯೇನ**-ಶ್ರೇಷ್ಠವಾದ **ಚಂದನೇನ**–**ಗಂಧದಿಂದ, ಅನುಲಿಪ್ತಂ**-ಮೈಗೆ ಹಚ್ಚಿಕೊಂಡಿರುವ, **ಪರಂತಪಂ**-ಶತ್ರುನಾಶಕನಾದ, ಮತ್ತು **ಪಾರ್ಶ್ವತಃ ಸ್ಥಿತಯಾ**-ಪಕ್ಕದಲ್ಲಿ ನಿಂತಿರುವ, **ವಾಲವ್ಯಜನಹಸ್ತಯಾ** – ಚಾಮರವನ್ನು ಕೈಯಲ್ಲಿ ಹಿಡಿದಿರುವ ಎಂದರೆ ಬೀಸುತ್ತಿರುವ, **ಸೀತಯಾ ಉಪೇತಮ್**–ತನ್ನ ಪತ್ನಿಯಾದ ಸೀತೆಯೊಂದಿಗಿರುವ, **ತಂತಪಂತಮಿವಾದಿತ್ಯಂ**-ಜ್ವಲಿಸುತ್ತಿರುವ ಸೂರ್ಯನ ಹಾಗಿರುವ, ಹಾಗಾದರೆ ಸೂರ್ಯನಹಾಗೆ ಕ್ರೂರನೇ ಎಂದರೆ ಹಾಗಲ್ಲವೆಂದು **ಚಿತ್ರಯಾಶಶಿನಂ ಯಥಾ**-ಸೀತೆಯೊಂದಿಗೆ ಇದ್ದರಾಮನನ್ನು ಹೇಗೆ ಕಂಡನು ಎಂದರೆ ಚಿತ್ತಾನಕ್ಷತ್ರದಿಂದ ಕೂಡಿದ ಚಂದ್ರನ ಹಾಗೆ ಕಂಡನು. ಚಿತ್ತಾ ಮತ್ತು ಚಂದ್ರನೂ ಸಹ ಪ್ರಕಾಶದಿಂದ ಬೆಳಗುವವರು; ಅವರ ಹಾಗೆ ಆಹ್ಲಾದಕರ ಸೇವೆಯನ್ನು ಸುಮಂತ್ರನಿಗೆ ಇತ್ತರು ಎಂಬ ಭಾವವು. **ಭೂಯಃ ದದರ್ಶ**-ಪುನಃ ಪುನಃ ತೃಪ್ತಿ ಇಲ್ಲದೆ ಕಂಡನು, ಪುನಃ ಪುನಃ ನೋಡಿದರೂ ತೃಪ್ತಿ ಇಲ್ಲದೆ ಹೋಗುವುದಕ್ಕೆ **ಆಸೇಚನಕ**-ಎಂಬ ಹೆಸರು. ಹಾಗೆ ಕಂಡನಂತರ **ವಿನಯಜ್ಞಃ**– ಇಂತಹ ಸ್ವಾಮಿಯಲ್ಲಿ ತಾನು ತುಂಬಾ ವಿನಯದಿಂದ ಇರಬೇಕೆಂದು ತಿಳುವಳಿಕೆಯುಳ್ಳ, **ವಂದೀ**-ಸ್ತುತಿಯನ್ನು ಮಾಡುತ್ತಿದ್ದ ಸುಮಂತ್ರನು, **ವಿನೀತವತ್**-ತುಂಬಾ ನಮ್ರತೆಯಿಂದಕೂಡಿದವನಾಗಿ, **ವವಂದೇ**-ನಮಸ್ಕರಿಸಿದನು, ಹೀಗೆ ಭಾರತ ರಾಮಾಯಣ ಇತಿಹಾಸಗಳಿಂದ ಉದಾಹರಿಸಿರುವುದು ಶ್ರೀ ಕೃಷ್ಣನು ತನ್ನ ಭಕ್ತನಾದ ಯುಧಿಷ್ಠಿರನಿಗೆ ಕೊಟ್ಟ ಸೇವೆಯ ಹಾಗೂ, ಶ್ರೀ ರಾಮಚಂದ್ರಪ್ರಭುವು

**"ಪದ್ಮಾ ವಿನಯುಜ್ಞೋವಿನೀತವತ್" ಎನ್ರು ಭಾರತರಾಮಾಯಣಙ್ಗಳಿಲ್ ಶೊಲ್ಲಪ್ಪಟ್ಟ ಅವತಾರಿಸಿ ಕೈಯಾಲೇ ವ್ಯಂಜಿತಮಾನ ಪರಮಪದ ಪರ್ಯಂಕತ್ತಿಲೇ ಎಳನ್ದರುಳಿಯಿರುಕ್ಕಿರ ಸಪತ್ನೀಕನಾನ ಸರ್ವೇಶ್ವರ್ರ ತಾಳಿಣ್ಕೈಕೀಳ್ | " ಒಳವಿಲ್ ಕಾಲಮೆಲ್ಲಾ ಮುಡನಾಯ್ಮನ್ನಿ ವಳುವಿಲಾ ವಡಿಮೈಶೆಯ್ಯವೇಣ್ಡುನಾಮ್ " ಎಙ್ಗರಮನೋರತ್ತಿನ್ ಪಡಿಯೇ, ಸರ್ವದೇಶ ಸರ್ವಕಾಲ ಸರ್ವಾವಸ್ಥೋಚಿತ ಸರ್ವವಿಧ ಕೈಙ್ಕರ್ಯಗಳೈಯುಮ್ ಪೆತ್ತು ವಾಳ್ವರ್ಗಳ್. ಇಪ್ಪಡಿ ಶ್ರಿಯಃಪತಿಯಾನ ನಾರಾಯಣರ ತಿರುವಡಿಗಳೇ ಉಪಾಯ ದಶೈಯಿಲುಮ್, ಫಲದಶೈಯಿಲುಮ್ ಉಪಜೀವ್ಯಙ್ಗಳ್.**

**ಉರು ಶಕಡ ಮುಡ್ಶೆಯ ವೊರು ಕಾಲುತ್ತುಣರ್ದನ**
**ಉರ್ಣಮುಳುತ ವೊಡಿಯವೊರುಪೋತಿಲ್ತ್ತವಳ್ದನ |**

---

ತನ್ನ ಭಕ್ತನಾದ ಸುಮಂತ್ರನಿಗೆ ಇತ್ತ ಸೇವೆಯ ಹಾಗೂ, ವೈಕುಂಠಪತಿಯಾದ ಪರವಾಸುದೇವನನ್ನು ತನ್ನಲ್ಲಿಗೆ ಅರ್ಚಿರಾದಿಗತಿಯಿಂದ ಬಂದ ಪ್ರಪನ್ನನಾಗಿ ಮುಕ್ತಿದೆಶೆಯಲ್ಲೀಯುವ ಸೇವೆಯು ಎಂಬ ಭಾವವು.

ಎನ್ರು–ಎಂಬುದಾಗಿ, **ಭಾರತ ರಾಮಾಯಣ**ಗಳಲ್ಲಿ, **ಶೊಲ್ಲಪಟ್ಟ** ಹೇಳಿರುವ, **ಅವತಾರಾಸಿಕ್ಕೈಯಾಲೇ**-ಅವತಾರ ದೆಶೆಗಳಲ್ಲಿ, **ವ್ಯಂಜಿತಮಾನ**-ಸೂಚಿಸಲ್ಪಟ್ಟು, **ಪರಮಪದಪರ್ಯಂಕತ್ತಿಲೇ**–ದಿವ್ಯ ವೈಕುಂಠದ ಮಂಚದಲ್ಲಿ, **ಎಳ್ಳನ್ದರುಳಿಯಿರುಕ್ಕಿರ**-ಬಿಜಮಾಡಿಸಿರುವ, **ಸಪತ್ನೀಕನಾನಸರ್ವೇಶ್ವರ್ರ** - ಪತ್ನಿಯಾದ ಲಕ್ಷ್ಮಿಯೊಂದಿಗೆ ಸರ್ವೇಶ್ವರನ, **ತಾಳಣ್ಕೈಕೀಳ್**-ಪರಸ್ಪರ ಸದೃಶವಾದ ಪಾದಾರವಿಂದದಲ್ಲಿ, **ಒಳವಿಲ್ಕಾಲಮೆಲ್ಲಾಂ** ಮುಂತಾದ್ದು–ಸ್ವಲ್ಪವೂ ವಿಚ್ಛೇದವಿಲ್ಲದೆ ಎಲ್ಲಾ ಕಾಲದಲ್ಲೂ, (**ಜಾಗ್ರತಸ್ಸ್ವಪತಃ**-ಹೀಗೆ ಎಲ್ಲಾ ಕಾಲದಲ್ಲೂ ಎಂದು ಲಕ್ಷ್ಮಣನು ಹೇಳಿದ ಹಾಗೆ) ಅನುವರ್ತಿಸಿ ಸರ್ವದೇಶ ಸರ್ವಕಾಲ ಸರ್ವಾವಸ್ಥೆಯಲ್ಲೂ ಕೈಂಕರ್ಯ ಮಾಡಬೇಕೆಂದು ಇರುವ ನಾವು ಎಂಬರ್ಥವು. ಪೂರಾಪಾಶುರ ತಾತ್ಪರ್ಯಗಳಿಗೆ ಉತ್ತರ ಕೃತ್ಯಾಧಿಕಾರ 1233ನೆಯ ಪುಟ ನೋಡಿ.) ಇದು ತಿರುವಾಯ್ ಮೊಳಿ 3. 3. 1ನೆಯ ಪಾಶುರವು; **ಎಙ್ಗರ ಮನೋರಥತ್ತಾನ್ ಪಡಿಯೇ**-ಎಂಬಲ್ಲಿ ಹೇಳಿರುವ ಮೋಕ್ಷಾರ್ಥಿಯ ಪ್ರಾರ್ಥನೆಯ ಹಾಗೆ, **ಸರ್ವದೇಶ ಸರ್ವಕಾಲ ಸರ್ವಾವಸ್ಥೆಗೆ ಉಚಿತ**-ಯೋಗ್ಯವಾದ, **ಸರ್ವವಿಧ ಕೈಂಕರ್ಯ**ಗಳನ್ನೂ, **ಪೆತ್ತು**-ಹೊಂದಿ, **ವಾಳ್ವರ್ಗಳ್**-ಬಾಳುವವರು ಎಂದರೆ ನಿರತಿಶಯಾನಂದ ದೆಶೆಯನ್ನು ಹೊಂದುವರೆಂಬ ಭಾವವು. ಯಾರು ಎಂದರೆ ಪ್ರಪನ್ನರು ಅರ್ಚಿರಾದಿಗತಿಯನ್ನು ಹೊಂದಿ ಬಾಳುವರು. **ತ್ವಂನ್ಯಂಚದ್ಭಿಃ** ಎಂಬಲ್ಲಿ ತೋರುವ **ಇವ್ವಳಿನಡನ್ದನರ್** ಎಂಬುದನ್ನು ಕರ್ತೃಪದವಾಗಿ ಇಟ್ಟುಕೊಳ್ಳತಕ್ಕದ್ದೆಂದು ಸಾರಾಸ್ವಾದಿನಿಯವರ ವ್ಯಾಖ್ಯಾನವು.

ಈ 32 ಅಧಿಕಾರಗಳಲ್ಲಿ ಉಪದೇಶಿಸಿದ ಸಾರ ಭೂತಾರ್ಥವೇನೆಂದು **ಇಪ್ಪಡಿ** ಎಂದಾರಂಭಿಸಿ ಸಂಗ್ರಹವಾಗಿ ಹೇಳುತ್ತಾರೇನೆಂದರೆ **ಇಪ್ಪಡಿ** - ಹೀಗೆ ತಾವು 32 ಅಧಿಕಾರಗಳಿಂದ ಹೇಳಿದುದು, **ಶ್ರಿಯಃಪತಿಯಾದ ನಾರಾಯಣನ-ತಿರುವಡಿಗಳೇ**-ಶ್ರೀಪ್ಯವಾದ ಪಾದಗಳೇ **ಉಪಾಯದಶೈಯಿಲುಮ್**-ಉಪಾಯಾವಸ್ಥೆಯಲ್ಲೂ, **ಫಲದಶೈಯಿಲುಮ್** – ಫಲವಾದ ಮೋಕ್ಷ ದೆಶೆಯಲ್ಲೂ, **ಉಪಜೀವ್ಯಙ್ಗಳ್**-ಕಾಪಾಡತಕ್ಕವು. ಇದನ್ನು ಚನ್ನಾಗಿ ತಿಳಿದ ಪ್ರಾಜ್ಞನಾದ ಅರ್ಜುನನು, ಯುದ್ಧದಲ್ಲಿ ಶ್ರೀಕೃಷ್ಣನ ಸಹಾಯವನ್ನು ಬೇಡಲು ಬಂದಾಗ, ಶ್ರೀ ಕೃಷ್ಣನ ಪಾದವನ್ನು ಅವಲಂಬಿಸಿ ಕಾಲಿನ ಬಳಿ ಕೂತನು; ಅದಕ್ಕೆ ಕಟ್ಟುಬಿದ್ದು ಶ್ರೀ ಕೃಷ್ಣನು ಸಾರಥಿಯಾದುದರಿಂದ ಅರ್ಜುನನು ಬಾಳಿದನು. ತಿರುವಡಿಗಳ ಮಹಿಮೆಯನ್ನರಿಯದ ಅಜ್ಞನಾದ ದುರ್ಯೋಧನನು ಶಿರಸ್ಸಿನ ಪಕ್ಕದಲ್ಲಿ ಕೂತನು. ಆದುದರಿಂದ ಆತನು ಬಾಳಲಿಲ್ಲವು. ಹಾಗೆಯೇ ಪಾದ ಸಂಬಂಧವಿರುವ ಮಣಿಪಾದುಕೆಗಳನ್ನು ಆಶ್ರಯಿಸಿ ಭರತನು ಬಾಳಿದನು. ಈ ಸಾರ ಭೂತಾರ್ಥವೇ ದ್ವಯ ಮನ್ತ್ರದಲ್ಲೂ ಉಪಪಾದಿತವು. ಪೂರ್ವಾರ್ಧದಲ್ಲಿ ಶ್ರಿಯಃ ಪತಿಯೇ ಉಪಾಯವೆಂದೂ ಶ್ರಿಯಃ ಪತಿಯೇ ಉಪೇಯವಾಗಿ ಫಲಪ್ರದನೆಂದೂ ದ್ವಯಮನ್ತ್ರದಲ್ಲಿ ಹೇಳಿರುವದೇ ಉಪಜೀವ್ಯವಾದ ಸಾರ ಭೂತಾರ್ಥವು.

ಶ್ರೀಮನ್ನಾರಾಯಣನ ತಿರುವಡಿಗಳೇ ಉಪಜೀವ್ಯಙ್ಗಳ್ ಎಂದು ಹೇಳಿ ತಮ್ಮ ದಿವ್ಯ ಗ್ರಂಥದ ಸಾರ ಭೂತಾರ್ಥವನ್ನು ನಿಗಮನದಲ್ಲಿ ಹೇಳಿದರು. ಹಿಂದೆ ಸಾರ ನಿಷ್ಕರ್ಷಾಧಿಕಾರದಲ್ಲಿ ತಾವು ಸಂಕಲ್ಪಿಸಿದುದು ಶಾಸ್ತ್ರವಲ್ಲಿ ಸಾರತಮವಾದುದು ಯಾವುದು ಎಂಬುದನ್ನು ತಿಳಿಸುವೆನೆಂದು ಪ್ರತಿಜ್ಞೆ ಮಾಡಿದುದನ್ನು ಈಗ ಸಂಕ್ಷೇಪವಾಗಿ ಆ ಸಾರತಮಾರ್ಥವನ್ನೇ ಶ್ರಿಯಃ ಪಾದಕಮಲಗಳೇ ಉಪಜೀವ್ಯಂಙ್ಗಳ್ ಎಂದು ತಮ್ಮ ಉದ್ಯಮವನ್ನು ನಿಗಮಿಸಿ ಹೇಳಿದರು. ಆದರೂ ಶ್ರೀ ದೇಶಿಕವರ್ಯರಿಗೆ ತೃಪ್ತಿಸಾಲದೆ ಆ ಪಾದಕಮಲಗಳೇ ಹೇಗೆ ಪ್ರಾಪ್ಯಪ್ರಾಪಕಗಳೆಂಬುದನ್ನು ಶ್ರೀ ಕೃಷ್ಣ ಶ್ರೀ ರಾಮಾವತಾರಾದಿಗಳಲ್ಲಿ ನಡೆಸಿದ ಅತಿಮಾನುಷೇತಿಹಾಸಗಳಿಂದ ಆ ಚರಣಾರವಿಂದಗಳನ್ನೇ ಕೊಂಡಾಡುತ್ತಾರೆ :— ಸರ್ವವಿಧ ಪಾಪಗಳನ್ನು ಹೋಗಲಾಡಿಸುವುದಕ್ಕೂ, ನಿರತಿಶಯಾನಂದವನ್ನು ಕೊಡುವುದಕ್ಕೂ ಆತನ ಪಾದಗಳೇ ಕಾರಣವೆಂದು ಹೇಳುತ್ತಾರೆ—ಶ್ರೀಮನ್ನಾರಾಯಣನೇ ರಾಮಕೃಷ್ಣಾದ್ಯವತಾರಗಳಲ್ಲಿ ತನ್ನ ಭಕ್ತರ ರಕ್ಷಣೆಯನ್ನೂ ಅವರುಗಳ ಶತ್ರು ನಾಶವನ್ನೂ ಧರ್ಮ ಸಂಸ್ಥಾಪನೆಯನ್ನೂ ಮಾಡಿದವು ಅವನ ಪಾದಗಳೇಯಾಗಿವೆ. ಆದರೆ ನಾವುಗಳು ಅಂತಹ ಅವತಾರ ಕಾಲಗಳಲ್ಲಿ ಜನಿಸದೇ, ಜನಿಸಿದ್ದರೂ ಆಶ್ರಯಿಸದೇ, ಇದ್ದುದರಿಂದ ಅಂತಹ ಸೌಲಭ್ಯ ಸೌಶಿಲ್ಯ ಪರಮಕಾರುಣಿಕನಾದ ಶ್ರೀಮನ್ನಾರಾಯಣನೇ ಈಗ ಭಕ್ತರಿಗೆ ಪರಮ ಕೃಪಯಾ ಸೇವೆಯನ್ನೀಯುವುದಕ್ಕಾಗಿಯೂ ಭಕ್ತರು ತಮ್ಮ ಪಾದವನ್ನು ಆಶ್ರಯವಲಿ ಎಂದು ಸ್ವಯಂವ್ಯಕ್ತರಾಗಿ ಅರ್ಚಾವತಾರಿಯಾಗಿ ಶ್ರೀರಂಗಾದಿ ದಿವ್ಯ ದೇಶಗಳಲ್ಲಿರುವುದರಿಂದ, **ಪೆರಿಯಪೆರುಮಾಳ್‌ ಮೆಯ್ಯ ಪಾದಂಗಳೇ** ಎಂದು ಹೇಳಿ, ಅಂತಹ ದಿವ್ಯ ಪಾದಗಳನ್ನು ಆಶ್ರಯಿಸಿ ಬದುಕಿರಿ ಎನ್ನುತ್ತಾರೆ.

**ಅರ್ಥ—ಊರು**-ಬಲಿಷ್ಠನಾದ, **ಶಕಟಮ್**-ಭಂಡಿಯ ರೂಪದಲ್ಲಿ ಬಂದ ಅಸುರನು, **ಉಡೆಯ**-ಮುರಿದುಹೋಗುವಹಾಗೆ, **ಒರುಕಾಲತ್ತಿಲೇ**-ಒಂದು ಸಮಯದಲ್ಲಿ, **ಉತ್ತು**-ಸಾವಧಾನವಾಗಿ, **ಉಣರ್ದ್ದ ನ**-ನಿದ್ರೆಮಾಡುತ್ತಿದ್ದರೂ ಜಾಗರೂಕನಾಗಿದ್ದು ಅಸುರನನ್ನು ಕಾಲಲ್ಲಿ ಒದ್ದು ನಾಶಮಾಡಿದ ಪಾದಗಳು, **ಉಣರ್ದ್ದನ**-ಒದ್ದು ಕೊಂದ ಪಾದಗಳು ಎಂದು ಪೃಥಗ್ವಾದ್ವಿವಚನವು ಕಂಸಪ್ರೇರಿತನಾದ ಶಕಟಾಸುರನನ್ನು ಭಂಡಿಯ ರೂಪದಲ್ಲಿದ್ದು ಶ್ರೀ ಕೃಷ್ಣನ ಮೇಲೆ ಬಿಟ್ಟು ಕೊಲ್ಲು ಎಂದು ಆಜ್ಞಾಪಿಸಿದನು. ಆ ಭಂಡಿಯ ಕೆಳಗೆ ಶ್ರೀ ಕೃಷ್ಣನು ನಿದ್ರೆಯ ಹಾಗೆ ಅಭಿನಯಿಸಿ, ಅವನ್ನು ಕಾಲಿನಿಂದ ಒದ್ದು ಅಸುರಸಂಹಾರವನ್ನು ಮಾಡಿ ದೇಶಕ್ಕೆ ಕ್ಷೇಮವನ್ನುಂಟುಮಾಡಿದ ಪಾದಗಳು ಎಂಬ ಇತಿಹಾಸವು.

ಉರ್ಪ-ಒಟ್ಟಿಗೆ ಸೇರಿಕೊಂಡು, **ಮರುತಮ್**-ಎರಡು ಅರ್ಜುನ ವೃಕ್ಷಗಳು **ಒಡಿಯ**-ಮುರಿದುಹೋಗಿ ಬೀಳುವಹಾಗೆ, **ಒರುಪ್ಪೋದಿಲ್**-ಒಂದು ಕಾಲದಲ್ಲಿ, **ತವಳ್ದನ**-ತಾಯಿಯಾದ ಯಶೋದೆಯು ಒರಳಿಗೆ ಹಗ್ಗದಿಂದ ಕಟ್ಟಿದ್ದರೆ ಅದನ್ನು ಎರಡು ಮರಗಳ ಮಧ್ಯದಲ್ಲಿ ಎಳೆದುಕೊಂಡುಹೋದುದರಿಂದ ಮುರಿದುಹೋಗುವಂತೆ ಮಾಡಿದವನ ಪಾದಗಳು ಎಂಬ ಇತಿಹಾಸವು ; ನಳಕೂಬರಮಣಿಗ್ರೀವರೆಂಬರಿಬ್ಬರು ನಾರದರಿಂದ ಅರ್ಜುನ ವೃಕ್ಷರೂಪವನ್ನು ಹೊಂದುವ ಶಾಪವನ್ನು ಹೊಂದಿದ್ದರು. ಅವರಿಗೆ ಶಾಪವಿಮೋಚನವನ್ನು ಮಾಡುವದಕ್ಕಾಗಿ ಶ್ರೀ ಕೃಷ್ಣನು ಬಾಲ್ಯಾವಸ್ಥೆಯಲ್ಲಿ ಈ ಲೀಲೆಯನ್ನು ತೋರಿದನು ಯಶೋದೆಯು ಹಗ್ಗದಿಂದ ಕಟ್ಟಲು ಕಾರಣವೇನೆಂದರೆ ತನ್ನ ಮನೆಯಲ್ಲೇ ಬೇಕಾದಷ್ಟು ಹಾಲು ಮೊಸರು ಬೆಣ್ಣೆ ಇದ್ದರೂ ಇತರರ ಮನೆಗೆ ಹೋಗಿ ತಾನೂ ತಿಂದು ಕುಡಿದು ಇತರ ಬಾಲರಿಗೂ ಕುಡಿಸಿ, ಮಿಕ್ಕಿದ್ದನ್ನು ಚೆಲ್ಲಿ ಹೀಗೆಲ್ಲಾ ಚೇಷ್ಟೆ ಮಾಡಿದುದರಿಂದ ಗೋಪಿಕಾ ಸ್ತ್ರೀಯರ ದೂರಿನ ಮೇಲೆ ಯಶೋದೆಯು ಕೋಪಿಸಿ ಒರಳಿಗೆ ಹಗ್ಗದಿಂದ ಕಟ್ಟಿ ಹಾಕಿದ್ದಳು. ಹಗ್ಗ ಸಾಕಾದೀತೆಂದೂ ತಂದರೂ ಹಗ್ಗ ಸ್ವಲ್ಪ ಸಾಲದೆಹೋಗುತ್ತಿತ್ತು. ಕಡೆಗೆ ವಶ್ಯನಾಗಿ ದಾಮದಿಂದ ಕಟ್ಟಲ್ಪಟ್ಟನು. ಆದುದರಿಂದ ದಾಮೋದರನೆಂಬ ಹೆಸರು ಶ್ರೀಕೃಷ್ಣನಿಗೆ ಉಂಟಾಯಿತು. ಅದನ್ನು ಶ್ರೀ ಕೃಷ್ಣನು ಎಳಕ್ಕೊಂಡು ಹೋಗಿ ಎರಡು ಅರ್ಜುನ ವೃಕ್ಷಗಳ ಮಧ್ಯೆ ಸಿಲುಕಿಸಿ ಅವುಗಳನ್ನು ಕೆಳಕ್ಕೆ ಕೆಡುವಿ ಶಾಪವಿಮೋಚನೆಯನ್ನು ಮಾಡಿದನು. ಹೀಗೆ ದಯೆಯನ್ನು ತೋರಿದವನ ಪಾದ ಯುಗ್ಮವೆಂಬ ಭಾವವು.

ಶ್ರೀಮದ್ಭಾಗವತದಲ್ಲಿ ಯಶೋದೆಗೆ ಇತ್ತ ಈ ಸೇವೆಯನ್ನು ಬಹು ಸ್ವಾರಸ್ಯವಾಗಿ ವರ್ಣಿಸಿರುತ್ತಾರೆ—

**ಕೃತಾಗಸಂ ತಂ ಪ್ರರುದನ್ತ ಮಕ್ಷಿಣೀಕಷನ್ತಮಞ್ಜನ್ಮಷಿಣೀ ಸ್ವಪಾಣಿನಾ।**
**ಉದ್ವೀಕ್ಷಮಾಣಂ ಭಯವಿಹ್ವಲೇಕ್ಷಣಂ ಹಸ್ತೇಗೃಹೀತ್ವಾಭಿಷಯಸ್ತ್ಯವಾಗುರತ್ ॥**

ಯಶೋದೆಯು ಮಗನ ಹಸ್ತವನ್ನು ಹಿಡಿದುಕ್ಕೊಂಡು ಭಯದಿಂದ ಚಂಚಲವಾದ ಕಣ್ಣುಗಳನ್ನುಳ್ಳವನಾಗಿ ಗಟ್ಟಿಗೆ ಅಳುತ್ತಾ ಕಾಡಿಗೆ ಕಣ್ಣಿಗೆ ಹಚ್ಚಿದುದನ್ನು ಕೈಯಿಂದ

ಒರಸಿಕೊಂಡು ಮುಖವನ್ನು ಕಪ್ಪುಮಾಡಿಕೊಂಡ ಸೇವೆಯನ್ನು ಇತ್ತನೆಂದು ಹೇಳಲ್ಪಟ್ಟಿದೆ. ಅದೇ ೧೦ನೆಯ ಸ್ಕಂಧ ಭಾಗವತದಲ್ಲೇ "**ಗೋಪ್ಯಾದದೇ**" ಎಂಬ ಶ್ಲೋಕದಲ್ಲಿ ಇದನ್ನೇ ವರ್ಣಿಸಿರುತ್ತಾರೆ.

ಹೀಗೆ ಹಾಲು ಮೊಸರು ಬೆಣ್ಣೆಯನ್ನು ಗೋಪಿಗಳ ನೆರೆಮನೆಯಲ್ಲಿ ಕದ್ದಿದನ್ನು ಶ್ರೀ ಕೂರೇಶರು ಅತಿಮಾನುಷಸ್ತವದಲ್ಲಿ ವರ್ಣಿಸಿ ಆ ಸೇವೆಯನ್ನನುಭವಿಸಿರುತ್ತಾರೆ. ಹೇಗೆಂದರೆ—"**ಸತ್ಯೇವಗವ್ಯನಿವಹೇ ನಿಜಧಾಮ್ನಿಭೂಮ್ನಾ ಪರ್ಯನ್ತ ಸದ್ಮಸು ಕಿಮರ್ಥಮಚೋಚರಸ್ತ್ವಮ್ | ಮುಷ್ಣಂಚ ಕಿಂನ್ವಜಘಟೋ ಘಟಶೇಷಮಗ್ರೇ ಗೋಪೀಜನಸ್ಯ ಪರಿಹಾಸಪದಂಕಿಮಾಸೀ|| ತ್ವಾಂ ಮನ್ಯ ಗೋಪಗೃಹಗವ್ಯಮುಷಂ ಯಶೋದಾ ಗುರ್ವೀ ತ್ವದೀಯಮವಮಾನ ಮಮೃಷ್ಯಮಾಣಾ| ಪ್ರೇಮ್ಣಾಥದಾಮ ಪರಿಣಾಮ ಜುಷಾಬಬನ್ಧ** ಎಂದರೆ ಓ ಗೋಪಾಲನೇ ನಿನ್ನ ಮನೆಯಲ್ಲೇ ಬೇಕಾದಷ್ಟು ಹೇರಳವಾಗಿ ಹಾಲು ಮೊಸರು ಮೊದಲಾದುವು ಇರುವಾಗ ನೆರೆಮನೆಗಳಿಗೆ ಹೋಗಿ ಲೂಟಿ ಮಾಡಿ ಏತಕ್ಕೆ ಕಳವು ಮಾಡಿದಿ. ಹೋಗಲಿ ಅವುಗಳನ್ನೇನೋ ತಿಂದು ಕುಡಿದುದಾಯಿತು. ಘಟದಲ್ಲಿ ಮಿಕ್ಕಿದ್ದನ್ನಾದರೂ ಅವರಿಗೆ ಬಿಡದೆ ಘಟವನ್ನೂ ಒಡೆದು ಹಾಕಿ ಹಾಲು ಮೊಸರನ್ನೂ ಮೈಮೇಲೆ ಚೆಲ್ಲಿಕೊಂಡು ಗೋಪ ಸ್ತ್ರೀಯರಿಗೆ ಹಾಲು ಮೊಸರಿಂದ ಅಭಿಷೇಕ ಸೇವೆಯನ್ನು ಕೊಟ್ಟು ಏಕೆ ಗೋಪ ಸ್ತ್ರೀಯರ ಅಪಹಾಸ್ಯಕ್ಕೆ ಗುರಿಯಾದೆ. ಹೀಗೆ ನಿನಗೆ ಅವಮಾನವಾಯಿತೇ ಎಂಬ ಪರಿತಾಪದಿಂದಲೂ ನಿನ್ನಲ್ಲಿರುವ ಪ್ರೇಮದಿಂದಲೂ ನಿನ್ನ ತಾಯಿಯು ಹಗ್ಗದಿಂದ ಕಟ್ಟಿದಳು ಎಂಬುದು ಶ್ಲೋಕ ತಾತ್ಪರ್ಯವು. ಹೀಗೆ ಭಕ್ತ ಜನರ ಮನೆಯಗವ್ಯವು ಸ್ವಾಮಿಗೆ ತುಂಬಾ ಪ್ರಿಯವಾದುದರಿಂದ ಅವರ ಅನುಗ್ರಹಕ್ಕಾಗಿ ಬಂಧಕ್ಕೆ ಕಾರಣವಾದ ಪ್ರಕೃತಿ ಸಂಬಂಧವನ್ನೆಲ್ಲಾ ನುಂಗಿ ಬಿಡುವೆನೆಂದು ತೋರಿಸಿರುತ್ತಾರೆ. **ಸ್ವಾಮಿಯು ಅಪರಾಧಗಣೈರಪೂರ್ಣಕುಕ್ಷಿಃ** ಎಂದು ದಯಾಶತಕದಲ್ಲಿ ಹೇಳಲ್ಪಟ್ಟಿರುತ್ತದೆ.

ನಳಕೂಬರಮಣಿಗ್ರೀವರ ಸ್ತುತಿಯು ತುಂಬಾ ಅಮೋಘವಾದುದು;

**ವಾಣೀ ಗುಣಾನುಕಥನೇ ಶ್ರವಣಂ ಕಥಾಯಾಂ**
**ಹಸ್ತೌ ಚಕರ್ಮಸು ಮನಸ್ತವಪಾದಯೋರ್ನಃ ||**
**ಸ್ಮೃತ್ಯಾಂ ಶಿರಸ್ತವನಿವಾಸ ಜಗತ್ಪ್ರಣಾಮೇ |**
**ದೃಷ್ಟಿಸ್ಸತಾಂ ದರ್ಶನೇಸ್ತು ಭವತ್ತನೂನಾಮ್** "

ನಮ್ಮ ವಾಣಿಯು ನಿನ್ನ ಕಲ್ಯಾಣಗುಣ ಕೀರ್ತನೆಯಲ್ಲೂ, ಕಿವಿಯು ನಿನ್ನ ದಿವ್ಯ ಕಥಾ ಶ್ರವಣದಲ್ಲೂ, ಕೈಗಳು ನಿನಗೆ ಕೈಂಕರ್ಯಕರ್ಮದಲ್ಲೂ, ಮನಸ್ಸು ನಿನ್ನ ಪಾವಕಮಲವನ್ನು ಸ್ಮರಿಸುವದರಲ್ಲೂ, ಶಿರಸ್ಸು ನಿನಗೆ ಪ್ರಣಾಮನ್ನೆಸಗುವದರಲ್ಲೂ, ಓ ಜಗತ್ತೇ ನಿವಾಸವಾಗಿಯುಳ್ಳ ಶ್ರೀಕೃಷ್ಣನೇ ನಮ್ಮ ದೃಷ್ಟಿಯು ಭಾಗವತೋತ್ತಮರ ದರ್ಶನದಲ್ಲೂ ಉಂಟಾಗಲಿ ಎಂದು ಸ್ತುತಿಸಿರುತ್ತಾರೆ. ಇದನ್ನೇ ಮುಂದಿನ ವಾಕ್ಯವಾದ **ಉರಿತಡವುಮ್**ದಿಂದ ಹೇಳುತ್ತಾರೆ.

ಗಳನ್ನು ಭಕ್ತಿಯಿಂದ ನೋಡುವದರಲ್ಲೂ ಪ್ರವರ್ತಿಸಲಿ ಎಂಬ ಪ್ರಾರ್ಥನೆಯು.

**ಉರಿತಡವ್ರುಮ್ ಅಳವಾಲ್**—ಉರಿಯಮೇಲೆ ಇಟ್ಟ ಬೆಣ್ಣೆ ಮೊಸರನ್ನು ತೆಗೆಯುವ ಸಂದರ್ಭದಲ್ಲಿ, **ಉರಲೂಡು**-ಕೋಪದಿಂದ ಯಶೋದೆಯಿಂದ ಒರಳಲ್ಲಿ ಬಂಧಿಸಲ್ಪಟ್ಟು, **ಉ ತ್ತು ನಿಸ್ರನ**-ಅವರೊಂದಿಗೆ ಸೇರಿ ಸೇವೆಯನ್ನು ಇತ್ತವು. **ಉರುನೆರಿ**-ಯೋಗ್ಯವಾದ ಸನ್ಮಾರ್ಗದ, **ಒರ್**-ಅದ್ವಿತೀಯವಾದ, **ದರುಮೊನ್** ಧರ್ಮಪುತ್ರನ, ಯುಧಿಷ್ಠಿರನ, **ತೂತುಕ್ಕು**-ದೂತನಾಗಿ ಹೋಗಲು, **ಉಗನ್ದನ** ಸಂತೋಷದಿಂದ ಮಹಾನುಭಾವನ ಪಾದಗಳು ಒಪ್ಪಿಕೊಂಡವು. ಸಙ್ಗ್ರಹವಾಗಿ ಈ ಇತಿಹಾಸವು ಇಷ್ಟೇ. ಯುಧಿಷ್ಠಿರನು ದ್ರೌಪದಿಯನ್ನು ದ್ಯೂತದಲ್ಲಿ ಸೋತು ದದರಿಂದ ದುಶ್ಶಾಸನನು ಆಕೆಯು ರಜಸ್ವಲೆಯಾಗಿರುವಾಗ ಆಕೆಯ ಕೇಶವನ್ನು ಹಿಡಿದೆಳದು ದುರ್ಯೋಧನನ ಸಭೆಗೆ ಕೊಂಡು ಹೋಗಿ ಶೀರೆಯನ್ನು ಸಭೆಯಲ್ಲಿ ಸೆಳದುದು ಪರಮದುರುಳತನವು. ಇದಕ್ಕಾಗಿ ಶ್ರೀಕೃಷ್ಣ ಭಗವಾನ್ ಪರಿತಾಪಪಟ್ಟು "**ಗೋವಿಂದೇತಿ ಯದಾಕ್ರಂದತ್ಕೃಷ್ಣಾ ಮಾಂ ದೂರವಾಸಿನಮ್। ಋಣಂ ಪ್ರವೃದ್ಧಮಿವಮಾಂ ಹೃದಯಾನ್ನಾಪಸರ್ಪತಿ**" ಎಂದು ಹೇಳಿ, ಇತರರು ಯಾರಾದರೂ ದೂತರಾಗಿ ಹೋದರೆ ಎಲ್ಲಿ ಸಂಧಿಯಾಗಿಬಿಡುತ್ತೋ ಎಂದು ಸಂಧಿ ಯಾಗದೆ ಯುದ್ಧದಲ್ಲಿ ಈ ದುರ್ಮಾರ್ಗರೆಲ್ಲಾ ಸಾಯಲೇಬೇಕೆಂದು ತಾವೇ ದೂತನಾಗಿ ಹೋದ ಸಂದರ್ಭವು ಇಲ್ಲಿ ಹೇಳಲ್ಪಟ್ಟಿತು. ಸಂಧಿಯಾಗದೇ ಇರುವ ಹಾಗೆ ಮಾಡು ವುದಕ್ಕಾಗಿಯೇ ತಾನೇ ದೂತನಾಗಿ ಹೋಗಲು ಸಮ್ಮತಿಸಿದುದರಿಂದ **ದರುಮ್ ತೂತುಕ್ಕು ಉಗನ್ದನ** ಎಂದು ಹೇಳಲ್ಪಟ್ಟಿತು.

ಈ ಭಗವಂತನ ಪಾದಗಳು ಇನ್ನೂ ಏನನ್ನು ಮಾಡಿದವು ಎಂದರೆ **ಮರ್ರ್ಯ**-ಕೋಪವೇ, **ನೆಗೆಯುರ್**-ಪ್ರಕೃತಿಯಾಗಿವುಳ್ಳ, ಅಥವಾ ಸ್ವಭಾವವಾಗಿಯುಳ್ಳ ಶತ್ರುಗಳಾದ ಕಂಸ, ಜರಾಸಂಧ ಶಿಶುಪಾಲ ದುರ್ಯೋಧನ **ಮುರಿಯ**-ಮುರಿದು ಬೀಳುವಹಾಗೆ, **ಪಿರಿದಾನತ್ತು**-ಬೃಂದಾವನದಲ್ಲಿ, **ವನ್ದನ**-ಸಂಚರಿಸಿದವು. **ಮಲರ್-ಮಗಳ್**-ಕಮಲೋದ್ಭವಳಾದ ಶ್ರೀಮಹಾಲಕ್ಷ್ಮಿಯು, **ಕೈನರುಡ**-ತನ್ನ ಕೋಮಲ ಕೈಗಳಿಂದ ಹಿಡಿದು ಒತ್ತುವ, **ಅಲರ್ ಪೋದಿಲ್**-ವಿಕಸಿತ ಕಮಲ ಪುಷ್ಪಕ್ಕಿಂತಲೂ, **ಶಿವನ್ದನ**-ಕೆಂಪಗೆ ಬೆಳಗಿದವು; ಸಾರಾಸ್ವಾದಿನಿಯವರು "**ಕೇನ ಶ್ರೀಃರತಿಕೋಮಳಾ ತನುರಿಯಂ ವಾಚಾಂ ವಿಮರ್ದಕ್ಷಮಾ**" ಎಂಬಲ್ಲಿ ಹೇಳಿರುವ ಹಾಗೆ ಕೋಮಳ ಪರಾಕಾಷ್ಠಾದ ಕೈಗಳಿಂದ ಪಾದಸಂವಾಹನ ಮಾಡಿದುದರ ಫಲವಾಗಿ ಸ್ವಾಮಿ ಪಾದಗಳು ಕೆಂಪು ಕಮಲಪುಷ್ಪಗಳಿಗಿಂತ ಕೆಂಪಾಗಿ ಪ್ರ ಕಾ ಶಿ ಸಿ ದ ವು. ಎಂದು ವ್ಯಾಖ್ಯಾನವನ್ನು ಬರೆದಿರುತ್ತಾರೆ. **ಮರುಪಿರವಿ** ಎಂದರೆ ಪುನರ್ಜನ್ಮವು, **ಮರುಪಿರವಿಯುರ** ಪುನರ್ಜನ್ಮವು ನಿವರ್ತಿಸಿ ಹೋಗಬೇಕು ಎನ್ನುವರು. **ಮುನಿ**

**ಮರನೆರಿಯರ್ ಮುರಿಯ ಪಿರಿತಾನತ್ತುವನ್ದನ |**
**ಮಲರ್ ಮಗಳ್ ಕೈವರುಡ ಮಲರ್ಪ್ಪೋತಿ ರ್ಚ್ಚಿವನ್ದನ |**
**ಮರುಪಿರವಿಯರ್ ಮುನಿವರ್ ಮಾಲುಕ್ಕಿಶೈನ್ದನ |**
**ಮನುಮುರೈಯಿಲ್ ವರವತೋರ್ ವಿಮಾನತ್ತುರೈನ್ದನ |**
**ಅರಮುಡೈಯ ವಿಶಯನಮರ್ ತೇರಿತ್ತಿಕಳ್ನ್ದನ |**
**ಅಡಲುರಗ ಪಡಮುಡಿಯ ವಾಡಿಕ್ಕಡನ್ದನ |**

---

**ವರ್**-ಋಷಿಗಳ, **ಮಾಲುಕ್ಕು**-ಪರಮಭಕ್ತಿಗೆ, **ಇಶೈನ್ದನ**-ವಶ್ಯವಾದವುಗಳಾದವು; **ಮನುಮುರೈಯಿಲ್**-ಮನುವಂಶದಲ್ಲಿ, ಇಕ್ಷ್ವಾಕುಮಹಾರಾಯನ ವಂಶದಲ್ಲಿ, **ವರುವದು**-ಕುಲಕ್ರಮ ಪರಂಪರೆಯಲ್ಲಿ ಬಂದ, **ಓರ್**-ಅದ್ವಿತೀಯವಾದ, **ವಿಮಾನತ್ತೈ**-ಶ್ರೀರಂಗ ವಿಮಾನವನ್ನು, **ಉರೈನ್ದನ** ನಿತ್ಯವಾಸವನ್ನು ಮಾಡಿ ಕೊಂಡಿರುವುವು. ಈ ಅಭಿಪ್ರಾಯವು ಹಿಂದೆಯೇ ಸ್ಥಾನವಿಶೇಷಾಧಿಕಾರದಲ್ಲಿ ವ್ಯಕ್ತವು; ಅಲ್ಲಿ ರಂಗವಿಮಾನವನ್ನು "**ಅಯೋದ್ಧಿ ಮನ್ನರ್ಕ್ಕಳಿತ್ತ ಕೋಯಿಲ್** ಎಂದು ವರ್ಣಿಸಲ್ಪಟ್ಟಿದೆ. ೧೬೪ನೆಯ ಪುಟವನ್ನು ನೋಡಿ. ಈ ರಂಗ ವಿಮಾನವು ಶ್ರೀರಾಮಪಟ್ಟಾಭಿಷೇಕ ಕಾಲದಲ್ಲಿ ಶ್ರೀರಾಮಚಂದ್ರ ಪ್ರಭುವಿನಿಂದ ವಿಭೀಷಣನಿಗೆ ಕೊಡಲ್ಪಟ್ಟಿತೆಂದು ಹೇಳಲ್ಪಟ್ಟಿರುತ್ತದೆ. "**ಶ್ರೀರಂಗ ಶಾಯಿನಂ ಸಾರ್ಚ್ಯ ಮಿಕ್ಷ್ವಾಕು ಕುಲದೈವತಮ್ | ರಙ್ಗಂ ವಿಮಾನ ಮಾದಾಯ ಲಂಕಾಂ ಪ್ರಾಯಾದ್ವಿಭೀಷಣಃ**" ಎಂಬ ಪಾದ್ಮಪುರಾಣೋಕ್ತಿಯೂ, ಹಾಗೆಯೇ "**ಲಬ್ಧ್ವಾ ಕುಲಧನಂರಾಜಾ ಲಂಕಾಂಪ್ರಾಯಾದ್ವಿಭೀಷಣಃ**" ಎಂಬ ಶ್ರೀ ವಾಲ್ಮೀಕೋಕ್ತಿಯೂ ಇರುತ್ತವೆ. **ಅರಮುಡೈಯ**-ಅರವೆಂದರೆ ಧರ್ಮವು, ಅದನ್ನು ಹೊಂದಿರುವ ಎಂದರೆ ಭಗವದಾಶ್ರಯಣರೂಪ ಸಿದ್ಧೋಪಾಯ ಧರ್ಮದಿಂದ ಕೂಡಿರುವ, **ವಿಶಯರ್** ಎಂದರೆ **ವಿಜಯರ್**—ಅರ್ಜುನನಿಂದ, **ಅಮರ್ತೇರಿಲ್** ಪ್ರತಿಷ್ಠಿತವಾದ ದಿವ್ಯರಥದಲ್ಲಿ, **ತಿಗಳ್ನ್ದನ**-ಕಂಗೊಳಿಸುತ್ತಿದ್ದವು (ಶ್ರೀಕೃಷ್ಣನ ಪಾದಗಳು;) ಪ್ರಣವಾರ್ಥವನ್ನು ಆ ಪಾದಗಳು ವ್ಯಕ್ತಪಡಿಸಿದವು ಎಂಬರ್ಥವು; ಅಕಾರ ವಾಚ್ಯನಾದ ವಿಷ್ಣುವು ರಕ್ಷಕನಾಗಿ ಮುಂದೆಯೂ ಶೇಷಿಯಾಗಿ ರಕ್ಷ್ಯವಸ್ತುವಾಗಿ ರಕ್ಷಕನ ಆಜ್ಞಾಕೈಂಕರ್ಯವನ್ನು ನಡಸುವನಾಗಿ ಹಿಂದೆಯೂ, ಈ ಅರ್ಜುನ ರಥ ಸಾರಥ್ಯ ದಿಂದ ವ್ಯಕ್ತವು. **ಅಡಲುರುಗ**-ಪರಾಕ್ರಮವನ್ನು ಹೊಂದಿದ ಸರ್ಪವೆಂದರೆ ಕಾಳೀಯ ಸರ್ಪದ, **ಪಡಮುಡಿಯ**-ಹೆಡೆಗಳು ಒಡೆದುಹೋಗುವಹಾಗೆ, **ಆಡಿ**-ನರ್ತನಮಾಡಿ **ಕಡಿನ್ದನ**-ಅದರ ಗರ್ವವನ್ನು ನಾಶಮಾಡಿದವು. ಶ್ರೀಕೃಷ್ಣನು ತೀರದಲ್ಲಿದ್ದ ಒಂದು ವೃಕ್ಷವನ್ನೇರಿ ಕಾಳೀಯ ಸರ್ಪದ ಹೆಡೆಯಮೇಲೆ ಧುಮುಕಿ ನರ್ತನಮಾಡಿದವು. ಆತನ ಪಾದಗಳು ಎಂಬ ಭಾವವು. ಆ ಕಾಳಿಂಗನಾಗನ ಪತ್ನಿಯರು ಬಂದು ಶ್ರೀಕೃಷ್ಣನಂ ಸ್ತುತಿಸಿ **ಭರ್ತೃಭಿಕ್ಷಾಪ್ರದೀಯತಾಮ್** ಎಂದು ಪ್ರಾರ್ಥಿಸುತ್ತಾರೆ. **ನಾತ್ರಸ್ಥೇ**

**ಅರುಶಮಯ ಮರಿವರಯತಾನತ್ತ ಮರ್ದನ ।**
**ಅಣಿಕುರುಕೈನಗರ್ ಮುನಿವರ್ ( ಮರುಕ ) ನಾವುಕ್ಕ್ಯೈ ಮನ್ದನ ॥**

---

**ಯಂ ತ್ವಯಾ ಸರ್ವಕದಾಚಿದ್ಯಮುನಾಜಲೇ। ಸಪುತ್ರ ಪರಿವಾರ ಸ್ತ್ವಂಸಮುದ್ರ ಸಲಿಲಂವ್ರಜ** ಎಂದು ಹೇಳಿ ಯಮುನಾ ನದಿಯನ್ನು ಬಿಟ್ಟು ಸಮುದ್ರಕ್ಕೆ ಹೋಗುವಹಾಗೆ ಮಾಡಿದ ಇತಿಹಾಸವು.

**ಅರುಶಮಯಂ**-ಆರು ಸಮಯಗಳು ಎಂದರೆ ಸಿದ್ಧಾಂತಗಳು, ಇವು ಯಾವುವೆಂದರೆ " ಪಾತಂಜಲಂ ಕಾಪಿಲಂಸಾಂಖ್ಯಂ ಜೈಮಿನಿಸೂತ್ರಂ ವೈಶೇಷಿಕಂ ಗೌತಮ ಸೂತ್ರಂ ವ್ಯಾಸಸೂತ್ರಂ" ಇವೇ ಷಡ್ದರ್ಶನಗಳು, ಇವುಗಳಿಂದಲೂ **ಅರಿವರಿಯ**-ತಿಳಿಯಲಾಗದ, **ತಾನತ್ತು**-ಪರಮಪದದಲ್ಲಿ, **ಅಮರ್ದನ**-ಸ್ಥಿರವಾಗಿ ಇರುವಂತವು. ಈ ಪರಮಪದವು ಎಂತಾದ್ದೆಂದೂ, ಅದರ ಅನುಭವವೆಂತಾದ್ದೆಂದೂ ಯಾರೂ ಅರಿಯಲಾರರು. ಶ್ರುತಿಯೂ " ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ" ಎಂದು ಹೇಳಿರುವಾಗ ಇನ್ನು ಷಟ್ದರ್ಶನಗಳ ಪಾಡೇನು ? ಎಂಬ ಭಾವವನ್ನು ಸೂಚಿಸುತ್ತದೆ. ದಿವ್ಯವೈಕುಂತದಲ್ಲಿ ಸ್ವಾಮಿಯು ಲಕ್ಷ್ಮೀಸಮೇತನಾಗಿ ದಿವ್ಯಾಭರಣ ದಿವ್ಯಾಯುಧೋಪೇತನಾಗಿ, ನಿತ್ಯಮುಕ್ತರುಗಳಿಂದ ಸದಾ ಸೇವಿತನಾಗಿ ತನ್ನ ಪರಿಪೂರ್ಣತೆಯ ಅನುಭವವನ್ನು ಕೊಟ್ಟು ಅವರು ಮಾಡುವ ಕೈಙ್ಕರ್ಯಗಳನ್ನು ಕೈಕೊಳ್ಳುವನೆಂದು ಹೇಳಲ್ಪಟ್ಟಿರುತ್ತದೆ.

**ಅಣಿಕುರುಕೈನಗರ್**-ಭೂಮಿಗೆ ಅಲಂಕಾರ ಭೂತವಾದ ಕುರುಕಾನಗರಿ ಎಂದರೆ ಆಳ್ವಾರ್‌ತ್ತಿರುನಗರಿಗೆ ನಿರ್ವಾಹಕರಾದ, **ಮುರುಗ**-ವಿಲಕ್ಷಣವಾದ **ನಾವುಕ್ಕು**-ನಾಲಿಗೆಗೆ ಎಂದರೆ ಅವರ ದಿವ್ಯ ಸೂಕ್ತಿಗೆ, **ಅನ್ಪ್ಯೈನ್ದನ**-ವಿಷಯವಾಗಲು ಯೋಗ್ಯಗಳಾದ ಪಾದಗಳು ; ಅಥವಾ **ಮುನಿವರ್**-ಎಂದು ಪಾಠಾಂತರವಾದರೆ ನಮ್ಮಾಳ್ವಾರ್ ಮುನಿಗಳು ಎಂಬರ್ಥವು, ಈ **ಮುನಿವರ್**-ಎಂಬ ಪಾಠವು ಇವರು ಬಹುದಿನ ಬಾಲ್ಯದಲ್ಲಿ ಸ್ತನ್ಯವನ್ನು ಕುಡಿಯದೆ ಬಹ ಕಾಲ ಮಾತಾಡದೆ ಮೌನದಿಂದ್ದರೆಂಬುದನ್ನು ಸೂಚಿಸುತ್ತದೆ. ಶ್ರೀ ನಮ್ಮಾಳ್ವಾರ್‌ರವರು ಅನೇಕ ಕಡೆಯಲ್ಲಿ ಭಗವಂತನ ಪಾದದಲ್ಲಿ ಮಾಡುವ ಶರಣಾಗತಿಯೇ ಪರಮೋಪಾಯವೆಂದು " ಆರೆನಕ್ಕುನ ಪಾದಮೇಶರಣಾಗ ತಂದೊಳಿಂದಾಯ್ " " ಅಗಲಗಿಲ್ಲೇ ನಿಱೈಯುಂ " ಇತ್ಯಾದ್ಯನೇಕ ಪಾಶುರಗಳಲ್ಲಿ ಉಪಪಾದಿಸಿರುತ್ತಾರೆಂಬುದು ಬೋಧಿತವು.

**ವೆರಿಯುಡೈ**-ಸುವಾಸನೆಯುಳ್ಳ **ತುಳುವಮಲರ್**-ತಿರುತುಳಸಿಯ ಮತ್ತು ಪುಷ್ಪಮಾಲೈಗಳ, **ವೀರುಕ್ಕು**-ಮಾಹಾತ್ಮ್ಯಗೆ, **ಅಣಿನ್ದನ** ಯೋಗ್ಯವಾದವು ಸ್ವಾಮಿಯ ಪಾದಗಳು ಎಂಬ ಭಾವವು ; **ವಿಳುಕರಿ**-ಬಿದ್ದ ಇದ್ದಲು ಎಂದರೆ ಅಶ್ವತ್ಥಾಮಾಚಾರ್ಯನು ಬಿಟ್ಟ ಅಪಾಂಡವಾಸ್ತ್ರದ ಅಗ್ನಿಜ್ವಾಲೆಯಿಂದ ಉತ್ತರೆಯ

**ವೆರಿಯೊಡ್ಜೈಯ ತುಳವಮಲರ್ ವೀರುಕ್ಕಣಿನ್ದನ ।**
**ವಿಳುಕರಿಯೋರ್ ಕುವರನೆನ ಮೇವಿಙ್ಗಿರನ್ದನ ।**
**ವಿರಲಶುರರ್ ಪಡೈಯಡ್ಜೈಯ ವೀಯತುಡರ್ನ್ದನ ।**
**ವಿಡಲರಿಯ ಪೆರಿಯ ಪೆರುಮಾಳ್ ಮೆಯ್ಪ್ಪದಙ್ಗಳೇ ॥**

---

ಗರ್ಭವು ಬೆಂದುಹೋಗಿ ಬಿದ್ದಇದ್ದಲು ರೂಪವಲ್ಲಿದ್ದುದು, ಓರ್-ಅದ್ವಿತೀಯನಾದ **ಕುವರನೆನ**-ಪರೀಕ್ಷಿತ್ತೆಂಬ ಬಾಲನಾಗಿ ಪಾದಸ್ಪರ್ಶದಿಂದ ಮಾಡಿ, **ಮೇವಿಙ್ಗಿರನ್ದನ** ಪ್ರಕಾಶಿಸುತ್ತಾ ನಿಂತ ಪಾದಗಳು ಎಂಬರ್ಥವು. ಅಶ್ವತ್ಥಾಮಾಚಾರ್ಯನು ಅಪಾಂಡವಾಸ್ತ್ರವೆಂಬ ಬ್ರಹ್ಮಾಸ್ತ್ರವನ್ನು ಪಾಂಡವಕುಲವೃದ್ಧಿಯಾಗದ ಹಾಗೆ ಉತ್ತರೆಯಗರ್ಭವನ್ನು ದಹಿಸುವ ಹಾಗೆ ಬಿಡಲು; ಆಗ ಉತ್ತರೆಯು ಶ್ರೀಕೃಷ್ಣನನ್ನು ಕಂಡು ಶರಣಾಗತಳಾಗಿ ಪ್ರಾರ್ಥಿಸಿ ಬೇಡುತ್ತಾಳೆ. " **ಪಾಹಿ ಪಾಹಿ ಮಹಾ ಯೋಗಿನ್ ದೇವ ದೇವ ಜಗತ್ಪತೇ । ನಾನ್ಯಂ ತ್ವದಭಯಂ ಪಶ್ಯೇಯತ್ರ ಮೃತ್ಯುಃ ಪರಸ್ಪರಮ್ । ಅಭಿದ್ರವತಿ ಮಾಮೀಶ ಶರಸ್ತಪ್ತಾ ಯಸೋ ವಿಭೋ । ಕಾಮಂ ದಹತು ಮಾಂನಾಥ ಮಾಮೇಗರ್ಭೋ ನಿಪಾತ್ಯತಾಮ್** । ಆಗ ಶ್ರೀಕೃಷ್ಣಭಗವಾನ್, " **ಸುದರ್ಶನೇನ ಸ್ವಾಸ್ತ್ರೇಣಸ್ವಾನಾಂರಕ್ಷಾಂ ವ್ಯಧಾದ್ವಿಭುಃ । ಅನ್ತಸ್ಥಸ್ಸರ್ವಭೂತಾನಾ ಮಾತ್ಮಾಯೋಗೇಶ್ವರೋಹರಿಃ । ಸ್ವಮಾಯಯಾ ವೃಣೋದ್ಗರ್ಭಂವೈರಾಟ್ಯಾಃ ಕುರುತನ್ತವೇ** " ॥ ಸುದರ್ಶನ ಚಕ್ರದಿಂದ ಪಾಂಡವರನ್ನೆಲ್ಲಾ ರಕ್ಷಿಸಿ, ಉತ್ತರೆಯಗರ್ಭವನ್ನು ಪ್ರವೇಶಿಸಿ ಅದನ್ನು ರಕ್ಷಿಸಿದರೆಂಬ ಇತಿಹಾಸವು ಶ್ರೀ ಮದ್ಭಾಗವತದಲ್ಲಿ ಉಪಪಾದಿತವು. ಉತ್ತರೆಯಗರ್ಭವು ಈ ನಿಶಿತವಾದ ಬ್ರಹ್ಮಾಸ್ತ್ರದಿಂದ ಬೆಂದು ಕೆಳಗೆ ಇದ್ದಲಾಗಿ ಬಿತ್ತೆಂದು, ಅದನ್ನು ಶ್ರೀಕೃಷ್ಣಪ್ರಭುವು ಕಾಲಿನಿಂದ ಸ್ಪರ್ಶಿಸಲಾಗಿ ಚೈತನ್ಯ ಉಂಟಾಗಿ ಬಾಲನಾದ ಪರೀಕ್ಷಿದ್ರಾಜನೆಂದು ಪ್ರಖ್ಯಾತನಾದನೆಂಬ ಇತಿಹಾಸವೂ ಉಂಟು.

**ವಿರಲಶುರರ್**-ಶೌರ್ಯವುಳ್ಳ ಅಸುರರು, ರಾಕ್ಷಸರ **ಪಡೈ**-ಸೇನೆಯೆಲ್ಲಾ **ಅಡಿಯುವಾಯ**-ಸಂಪೂರ್ಣವಾಗಿ ನಾಶವಾಗುವಹಾಗೆ ರಾಮಾವತಾರಿಯಾಗಿಯೂ, ಕೃಷ್ಣವತಾರಿಯಾಗಿಯೂ ಮೋಹನ್ಯಾವತಾರಿಯಾಗಿಯೂ, ವರಾಹಾವತಾರಿಯೂ ನೃಸಿಂಹಾವತಾರಿಯಾಗಿಯೂ ಅಸುರರನ್ನು ಕೊಂದ ಇತಿಹಾಸಗಳು ಸೂಚಿತವು, **ತುಡರ್ನ್ದನ**-ಎಂದರೆ **ತುರುತ್ತಿನದುಗಳ್**-ಅಟ್ಟಿ ಬಿಡಿಸಿದುವು ಯಾವುವು ? ಎಂದರೆ **ವಿಡಲರಿಯ** ಮೋಕ್ಷಾರ್ಥಿಗಳಾದ ಭಕ್ತರುಗಳಿಗೆ, ಬಿಟ್ಟಿರಲು ಸಾಧ್ಯವಲ್ಲದ **ಪೆರಿಯ ಪೆರುಮಾಳ್ ಪದಙ್ಗಳೇ** ಶ್ರೀರಂಗನಾಥನ ಪದದ್ವಂದ್ವವೇ.

**ಮೇರ್ ಪದಙ್ಗಳೇ**-ಮೃದುಗಳಾದ ಪಾದಕಮಲಗಳು ಎಂಬರ್ಥವು. ಹೀಗೆ ಅನಿಷ್ಟ ನಿವರ್ತಕವಾಗಿಯೂ ಇಷ್ಟ ಪ್ರಾಪಕಗಳಾಗಿಯೂ ಇರುವ ಶ್ರೀಮನ್ನಾರಾ

**ಇತಿ ಯತಿರಾಜ ಮಹಾನಸ ಪರಿಮಳ ಪರೀವಾಹವಾಸಿತಾಂ ಪಿಬತ |
ವಿಬುಧ ಪರಿಷನ್ನಿಷೇವ್ಯಾಂ ವೇದಾಂತೋದಯನ ಸಂಪ್ರದಾಯ
ಸುಧಾಮ್ || ೭೬ ||**

---

ಯಣನ ಚರಣಯುಗಗಳೇ ಉಪಾಯ ದೆಶೆಯಲ್ಲೂ, ಫಲದೆಶೆಯಲ್ಲೂ ಉಪಜೀವ್ಯ ಗಳು ಎಂಬ ಭಾವವು. ಆದಕಾರಣದಿಂದಲೇ ಗೀತೆಯಲ್ಲಿ ಉಪಾಯ ದೆಶೆಯಲ್ಲಿ "ತಮೇವ ಶರಣಂಗಚ್ಛ ಸರ್ವಭಾವೇನ ಭಾರತ" ಎಂದೂ, ಪುನಃ "ಸರ್ವಧರ್ಮಾನ್ಪರಿತ್ಯಜ್ಯ ಮಾಮೇಕಂ ಶರಣಂವ್ರಜ" ಎಂದೂ, ಹೇಳಲ್ಪಟ್ಟಿತು.

ಮುಂದೆ ತಾವು ಅನುಗ್ರಹಿಸಿದ ಈ ಶ್ರೀಮದ್ರಹಸ್ಯತ್ರಯಸಾರವೆಂಬ ಅಮೃತ ವನ್ನು, "**ಏಕ ಸ್ವಾದುನಭುಂಜೀತ**" ಎಂಬ ನ್ಯಾಯದ ಪ್ರಕಾರದಲ್ಲೂ, ಮತ್ತು ಸಂಸಾರವೆಂಬ ಕಾಡ್ಗಿಚ್ಚಿನಿಂದ ಬೆಂದ ಜನರ ವಿಷಯದಲ್ಲಿ ಕಾರುಣ್ಯಮಯರಾದ ಆಳ್ವಾರ್ರವರು "**ತೊಣ್ಡೀರೆಲ್ಲಾರುಮ್‌ವಾರೀರೆನ್ರು**" ಭಕ್ತರೆಲ್ಲಾ ಬನ್ನಿರಿ ಎಂದು ಉಪದೇಶಿಸಿದ ರೀತಿಯಲ್ಲೂ, ಪಾನಮಾಡಿ, ಜರಾಮರಣಾದಿ ದುಃಖವಿಲ್ಲದ ದೆಶೆ ಯನ್ನು ಹೊಂದಿರಿ ಎಂಬದಾಗಿ ಪರಮ ಹಿತೋಪದೇಶವನ್ನು ಪರಮೋದಾರ ಭಾವ ದಿಂದ ಮಾಡುತ್ತಾರೆ. ದೇವತೆಗಳು ಹೇಗೆ ಪರಮಪುರುಷನ ಕೃಪೆಯಿಂದ ಲಭಿಸಿದ ಸಮುದ್ರಮಥನದಿಂದುಂಟಾದ ಅಮೃತಪಾನದಿಂದ ಅಮರತ್ವವನ್ನು ಹೊಂದಿದರೋ, ಹಾಗೆಯೇ ತಾವು ಉಪದೇಶಿಸಿದ ರೀತಿಯಲ್ಲಿ ಶ್ರೀಮನ್ನಾರಾಯಣನ ಪಾದಗಳನ್ನು ಆಶ್ರಯಿಸಿ ಜರಾಮರಣವಿಲ್ಲದ ಸದ್ಗತಿಯನ್ನು ಹೊಂದಿ ಶಾಶ್ವತಪದವನ್ನು ಹೊಂದಿ ಉಜ್ಜೀವಿಸಿರಿ ಎಂದು ಉಪದೇಶಿಸುತ್ತಾರೆ.

**ಅರ್ಥವು:**—**ಇತಿ**-ಹೀಗೆ ಎಂದರೆ ಗುರುಪರಂಪರಾಸಾರ ಮೊದಲು ಮಾಡಿ ಕೊಂಡು ಇದುವರೆಗೂ ಈ ಅಧಿಕಾರಗಳಿಂದ ಉಪದೇಶಿಸಿದ ರೀತಿಯಲ್ಲಿ ಬಂದ, **ಸಂಪ್ರದಾಯ ಸುಧಾಮ್**-ಶ್ರೀಯತಿರಾಜರಿಗೆ ಪರಮಹಿತವಾದ ಮಹಾನ ಸಕೈಂಕರ್ಯವನ್ನು ಮಾಡಿದ, ಎಂದರೆ ಅಡಿಗೆ ಮಾಡಿ ವೈಶ್ವದೇವವನ್ನು ನಡೆಸಿ ಭಿಕ್ಷೆ ಯನ್ನು ಸಮರ್ಪಿಸಿದವರು ಕಿಡಾಂಬಿ ಆಚ್ಚಾನ್ ಎಂಬುವರು, ಅವರ ಕುಲದಲ್ಲಿ ಪುತ್ರ ಪೌತ್ರಾದಿರೀತಿಯಲ್ಲಿ ಉಪದೇಶ ಮುಖೇನ ತಮ್ಮ ಗುರುಗಳಾಗಿ ಸಂಪ್ರದಾಯ ರೀತಿಯಲ್ಲಿ ಅದೇ ಕಿಡಾಂಬಿತ್ತುಕುಲದಲ್ಲೇ ಪ್ರಸೂತರಾದ ಕಿಡಾಂಬಿ ಅಪ್ಪುಳ್ಳಾರವರ ಮೂಲಕ ಈ ರಹಸ್ಯಾರ್ಥಗಳನ್ನೆಲ್ಲಾ ಗ್ರಹಿಸಿದುದರಿಂದ, ಸಂಪ್ರದಾಯ ರೀತಿಯಲ್ಲಿ ಬಂದ ಈ ಅಮೃತವನ್ನು, **ಪಿಬತ** ಪಾನಮಾಡಿ ಬಾಳಿರಿ, ಮೋಕ್ಷವನ್ನು ಹೊಂದಿ ಆತ್ಮೋಜ್ಜೀವನವನ್ನು ಮಾಡಿಕೊಳ್ಳಿ ಎನ್ನುತ್ತಾರೆ; ಆ ಸುಧೆಯು ಎಂತಹುದೆಂದರೆ, ಮೂರು ವಿಶೇಷಣಗಳಿಂದ ಉಪಪಾದಿಸುತ್ತಾರೆ. ಪೂರ್ವಾರ್ಧವೆಲ್ಲಾ ಒಂದು ವಿಶೇಷಣವು, **ಯತಿರಾಜ**-ಯತಿಶ್ರೇಷ್ಠರಾದ ಶ್ರೀಭಾಷ್ಯಕಾರರ ಎಂದರೆ ಅವರಿಗಾಗಿ ಏರ್ಪಟ್ಟ, **ಮಹಾನಸ**-ಅಡಿಗೆಮನೆಯ ಎಂದರೆ ಅಡಿಗೆಮನೆಯಲ್ಲಿ ಮಾಡುವ

ಪರಮಪುರುಷನಿಗೆ ಪರಮಭೋಗ್ಯವಾದ ಪರಮಾನ್ನಾದಿಗಳು ಹೇಳಲ್ಪಟ್ಟವು, ಇವುಗಳ **ಪರಿಮಳ**-ಏಲಕ್ಕಿ ಲವಂಗ ಕುಂಕುಮ ಕೇಸರಿ ಪಚ್ಚಕರ್ಪೂರಾದಿ ಪರಿಮಳಗಳಿಂದ ಪರಿವಾಹ......**ವಾಸಿತಾಂ**-ಸಂಸ್ಕಾರವನ್ನು ಹೊಂದಿದ, ಮತ್ತು **ವಿಬುಧ ಪರಿಷನ್ನಿಷೇವ್ಯಾಂ**-ವಿಬುಧ ಶಬ್ದದಲ್ಲಿ ಶ್ಲೇಷೆಯುಂಟು, ಸಮುದ್ರಮಥನ ಕಾಲದಲ್ಲಿ ದೇವತೆಗಳಿಗಾಗಿ ಸುಧೆಯು ಸ್ವಾಮಿಕೃಪೆಯಿಂದ ಉತ್ಪನ್ನವಾದುದರಿಂದ, **ವಿಬುಧ ಪರಿಷತ್**-ದೇವತೆಗಳ ಸಮೂಹದಿಂದ **ನಿಷೇವ್ಯಾಂ** ಸ್ವೀಕರಿಸಲ್ಪಟ್ಟಿದುದು ಹೇಗೋ ಹಾಗೆ ಇಲ್ಲಿಯು **ವಿಭುದಪರಿಷತ್** ಪ್ರಾಜ್ಞರಾದ ಪ್ರಪನ್ನ ಗೋಷ್ಟಿಯಿಂದ ಸ್ವೀಕರಿಸಲ್ಪಟ್ಟ, **ವೇದಾಂತೋದಯ ನ**-ವೇದಾಂತೋದಯರೆಂಬ ಹೆಸರುಳ್ಳ ಕಿಡಾಂಬಿ ಆಚ್ಚಾರ್ನ್ರವರಿಂದ **ಸಂಪ್ರದಾಯ**-ಪುತ್ರಪೌತ್ರ ಪಾರಂಪರ್ಯ ರೂಪದಲ್ಲಿ ತಮಗೆ ಪ್ರಾಪ್ತವಾದ, **ಸುಧಾಂಪಿಬತ-ಏಕಸ್ಸ್ವಾದು ನಭುಂಜೀತ** ಎಂದಿರುವದರಿಂದ, ನಾನೊಬ್ಬನೇ ಅದನ್ನು ಪಾನಮಾಡುವದು ಸರಿಯಿಲ್ಲವಾದುದರಿಂದ, ಈ ಗ್ರಂಥದಲ್ಲಿರುವ ರಹಸ್ಯಾರ್ಥಗಳೆಲ್ಲಾ ತಮ್ಮ ಗುರುಗಳಿಂದ ತಮಗೆ ಬಂದುದನ್ನು **ಪಿಬತ** ಪಾನಮಾಡಿರಿ ಎಂದು ಪರಮೋದಾರಭಾವದಿಂದ ಹಿತೋಪದೇಶವನ್ನು ಮಾಡಿರುತ್ತಾರೆ.

**ಉಪಪಾದನೆಯು**-ಕಿಡಾಂಬಿ ಆಚ್ಚಾನ್ ಎಂಬುವರು ಶ್ರೀಯತಿರಾಜರಿಗೆ ಮಹಾನಸಕೈಂಕರ್ಯವನ್ನು ಮಾಡಿದ ಪ್ರಿಯ ಶಿಷ್ಯರು. ಇವರು **ಕಿಡಾಂಬಿ** ಕುಲಕ್ಕೆ ಸೇರಿದವರಾದುದ ಕಿಡಾಂಬಿ ಆಚ್ಚಾನ್ ಎಂಬ ಹೆಸರು. ಇವರಿಗೆ **ವೇದಾಂತೋದಯ**ರೆಂಬ ಮತ್ತು ಪ್ರಣತಾರ್ತಿಹರರೆಂಬ ಅಪರನಾಮಗಳುಂಟು. ಶ್ರೀನಿಗಮಾಂತ ದೇಶಿಕರವರ ಸೋದರಮಾವಂದರಾಗಿಯೂ ಗುರುಗಳಾಗಿಯೂ ಆದ ಕಿಡಾಂಬಿ ಅಪ್ಪುಳ್ಳಾರ್ರವರು ಅದೇ ಕುಲಕ್ಕೇ ಸೇರಿದವರಾಗಿ ಈ ಅರ್ಥಗಳನ್ನೆಲ್ಲಾ ಅವರಿಂದ ತಾವು ಸಂಗ್ರಹಿಸಿದುದರಿಂದ ಅದಕ್ಕೆ **ಸಂಪ್ರದಾಯ ಸುಧೆ** ಎಂದು ಹೇಳಿದರು. ಸುಧೆಯು ಹೇಗೆ ದೇವತೆಗಳನ್ನೆಲ್ಲಾ ನಿರ್ಜರರಾಗಿ ಮಾಡಿತೋ ಹಾಗೆಯೇ ಈ ಅಮೃತವು ಪಾನಮಾಡಿದವರಿಗೆ ಅಮೃತತ್ವವಾದ ದಿವ್ಯವೈಕುಂಠ ಪ್ರಾಪ್ತಿಯನ್ನುಂಟು ಮಾಡುತ್ತದೆಂಬ ಭಾವವು. ಇದು ವೇದಾಂತೋದಯದವರಾದ ಕಿಡಾಂಬಿ ಆಚ್ಚಾನ್‌ರವರಿಂದ ತಮ್ಮ ಗುರುಗಳಾದ ಅದೇ ಕುಲಕ್ಕೆ ಸೇರಿದ ಕಿಡಾಂಬಿ ಅಪ್ಪುಳಾರ್ (ಶ್ರೀರಾಮಾನುಚಾರ್ಯರು ಎಂಬುದು ಅಪರನಾಮಧೇಯವು) ಗುರು ಶಿಷ್ಯ ಕ್ರಮದಿಂದ ಬಂದುದಾದುದರಿಂದ **ಸಂಪ್ರದಾಯ ಸುಧೆ** ಎಂಬ ತಾತ್ಪರ್ಯವು. **ಯತಿರಾಜ** ಶಬ್ದವನ್ನು ಆದಿಯಲ್ಲಿ ಪ್ರಯೋಗಿಸಿರುವದರಿಂದ ಶ್ರೀಭಾಷ್ಯಕಾರರು ತಮ್ಮ ಗುರುಗಳಾದ ಪೆರಿಯ ನಂಬಿ ತಿರುಕ್ಕೋಟ್ಟಿಯಾರ್ ನಂಬಿಗಳಿಂದ ಸಂಗ್ರಹಿಸಿದ ರಹಸ್ಯಾರ್ಥಗಳೇ ಈಗ ತಾವು ಇಲ್ಲಿ ಉಪದೇಶಿಸಿರುವದು ಎಂಬ ಭಾವವು ವ್ಯಕ್ತವು. **ಮಹಾನಸಪರಿಮಳಪರಿವಾಹವಾಸಿತಾಂ** ಎಂದು ಹೇಳಿದುದರಿಂದ, ಶ್ರೀಯತಿರಾಜರಾದ

ಕಿಡಾಂಬಿಯಾಚ್ಚಾನರವರ ಮೂಲಕ ಸಂಪ್ರದಾಯರೀತ್ಯಾ ಬಂದುದು ಎಂದು ಹೇಳಿದಂತಾಯಿತು.

ಈ ಸಂಪ್ರದಾಯ ಸುಧೆಯು ಸರ್ವೋತ್ಕೃಷ್ಟವಾದುದು. ಏಕೆಂದರೆ ನಮ್ಮ ಸಿದ್ಧಾಂತ ಸ್ಥಾಪಕರಾದ ಶ್ರೀಯತಿರಾಜರವರು ಅನುಗ್ರಹಿಸಿದ ರಹಸ್ಯಾರ್ಥಗಳ ಅನೋಘಾಭಿಪ್ರಾಯಗಳನ್ನುಳ್ಳದ್ದು. ಹೀಗೆ ಸಂಪ್ರದಾಯ ಸುಧೆ ಎಂದು ಹೇಳಿದುದರಿಂದ ಉಪಲಕ್ಷಣ ರೀತಿಯಲ್ಲಿ ತಮಗೆ ಪಿಳ್ಳೈ ನಡಾದೂರಮ್ಮಾಳ್ ಕಿಡಾಂಬಿ ಅಪ್ಪುಳ್ಳಾರ್ರವರ ಮೂಲಕ ದೊರೆತ ಶ್ರೀ ಭಾಷ್ಯೋಪದೇಶವೂ ಸೂಚಿತವು. **ಮಹಾನಸ ಪರಿಮಳ**ವೆಂಬ ಪ್ರಯೋಗದಿಂದ ಪರಮಾನ್ನಕ್ಕೆ ಕುಂಕುಮ ಕೇಸರಿ ಪಚ್ಚಕರ್ಪೂರ ಕೇಸರಿ ಏಲಕ್ಕಿ ಮೊದಲಾದವುಗಳ ಸಂಮೇಳನದಿಂದ ಘಮ ಘಮಿಸುವ ರೀತ್ಯಾ ಈ ಸಂಪ್ರದಾಯ ಸುಧೆಯೂ ಸಹ ಶ್ರೀಯತಿರಾಜರವರ ಮಧುರವಾದ ಜ್ಞಾನದೀಪ್ತಿಯುತವಾದ ದಿವ್ಯಸೂಕ್ತಿಯ **ಪರಿವಾಹವಾಸಿತವಾದುದು,** ಎಂದು ಹೇಳಲ್ಪಟ್ಟಿತು. “ **ಕ್ಷೀರಂ ಶರ್ಕರಯಾಯುಕ್ತಂ ಸ್ವದತೇಹಿ ವಿಶೇಷತಃ** ” ವ್ಯಾಸ ಸೂತ್ರಗಳು ಕ್ಷೀರದೋಪಾದಿಯಲ್ಲಿ ಮಧುರವಾದವು. ಅದಕ್ಕೆ ಶ್ರೀಯತಿರಾಜರ ಭಾಷ್ಯವು, **ಶರ್ಕರಯಾಯುಕ್ತಂ ಸಕ್ಕರೆ** ಸೇರಿ ವಿಶೇಷ ಮಧುರವಾದ ಹಾಗೆ ಎಂದು ಭಾವಿಸತಕ್ಕದ್ದು ; ಮತ್ತು ಶ್ರೀಮದ್ರಹಸ್ಯತ್ರಯಗಳ ಅರ್ಥಗಳು ಶ್ರೀ ಯತಿರಾಜರ ಸರ್ವೋತ್ಕೃಷ್ಟ ಜ್ಞಾನಕ್ಕೆ ವಿಷಯವಾಗಿ ಕ್ಷೀರದ ಹಾಗೆ ; ಅದಕ್ಕೆ ತಮ್ಮ ಆಚಾರ್ಯರು ತಮಗೆ ಉಪದೇಶಿಸಿದಾಗ ಅಷ್ಟು ನಿಪುಣತರವಾಗಿ ಸ್ವಾರಸ್ಯವಾಗಿ ಮನಸ್ಸಿಗೆ ಆಪ್ಯಾಯನವಾಗಿ ಕಿಡಾಂಬಿ ಅಪ್ಪುಳ್ಳಾರ್ ತಮಗೆ ಉಪದೇಶಿಸಿದುದು **ಶರ್ಕರಯಾ ಯುಕ್ತವಾದ** ಹಾಗೆ ಆಗಿ **ಸ್ವದತೇಹಿ ವಿಶೇಷತಃ**-ವಿಶೇಷ ಸ್ವಾದುವಾಗಿ ಆಯಿತೆಂಬ ಭಾವವು. “ **ಏಕಸ್ಸ್ವಾದುನಭುಂಜೀತ** ” ಪರಮಾನ್ನವನ್ನು ಮಾಡಿಸಿ ದೇವರಿಗೆ ನಿವೇದನ ಮಾಡಿ ಒಬ್ಬನೇ ಊಟಬಾರದೆಂಬ ವಿಧಿಯಿರುವದರಿಂದ ತಾವು ಈಗ ಈ ರಹಸ್ಯತ್ರಯಸಾರ ಗ್ರಂಥಮೂಲಕ ಪ್ರಸನ್ನರೊಂದಿಗೆಲ್ಲಾ ಸೇವಿಸಿರುತ್ತೇನೆಂಬ ಮನಸ್ತೃಪ್ತಿಯೂ ಸೂಚಿತವು. ಇಲ್ಲಿ **ಪರಿಮಳ ಪರಿವಾಹವಾಸಿತಾಂ** ಎಂದು ಹೇಳಿರುವ ಉಕ್ತಿಯು ಹಾಗೆ ಶ್ರೀನಿಗಮಾಂತ ದೇಶಿಕರವರು **ಯತಿರಾಜಸಪ್ತತಿಯಲ್ಲಿ “ ಯಸ್ಯಸಾರಸ್ವತಸ್ರೋತೋ ವಕುಳಾಮೋದವಾಸಿತಾಮ್ ”** ಎಂದು ಶ್ರೀ ಶಠಾರಿಯವರನ್ನು ಸ್ತುತಿಸುವ ಸಂದರ್ಭದಲ್ಲಿ **ವಕುಳಪುಷ್ಪಪರಿಮಳದಿಂದ** ವಾಸಿತರೆಂದು ಹೇಳಿರುವದನ್ನು ಜ್ಞಾಪಿಸುತ್ತದೆ. **ಪರಿವಾಹ** ಶಬ್ದಪ್ರಯೋಗದಿಂದ ಶ್ರೀಯತಿರಾಜರವರು ಶ್ರೀ ಭಾಷ್ಯದಲ್ಲೂ, ಶರಣಾಗತಿ ಮೊದಲಾದ ಗದ್ಯತ್ರಯಗಳಲ್ಲೂ ತತ್ವಹಿತ ಪುರುಷಾರ್ಥಗಳ ಯಥಾರ್ಥವಾದ ಉಪಪಾದನೆಯು ತರಂಗ ತರಂಗಗಳಾಗಿ ಪ್ರವಾಹಗಳಾಗಿ ಬಂದು ಸ್ವಾರಸ್ಯಾತಿಶಯಗಳಿಂದ ಅವು ತುಂಬಿದೆ ಎಂಬ ಭಾವವನ್ನು ವ್ಯಕ್ತಗೊಳಿಸುತ್ತದೆ.

**ವಿಬುಧಪರಿಷನ್ನಿಷೇವ್ಯಾಂ** ಎಂಬುದರಿಂದ, ವಿಬುಧರರಿಗೆ ಮಾತ್ರವೇ ಯೋಗ್ಯವಾದುದು ಕ್ಷೀರಾಬ್ಧಿಯನ್ನು ಕಡೆದು ಬಂದ ಅಮೃತವು ಹೇಗೆ ಆಯಿತೋ, ಅಸುರರಿಗಾದರೆ ಹೇಗೆ ಯೋಗ್ಯವಲ್ಲದುದಾಯಿತೋ, ಹಾಗೆಯೇ ಈ ಸುಧೆಯೂ ಕೂಡ ಪ್ರಾಜ್ಞರಾಗಿ ಶಾಸ್ತ್ರದಲ್ಲೂ ಸಂಪ್ರದಾಯ ಪ್ರಕ್ರಿಯೆಯಲ್ಲೂ ಮಮತೆಯುಳ್ಳವರಿಗೆ ಮಾತ್ರವೇ ಈ ರಹಸ್ಯಾರ್ಥ ಸುಧೆಯು ಯೋಗ್ಯವೇವಿನಾ ಇತರರಿಗೆ ಯೋಗ್ಯವಲ್ಲವೆಂಬ ಭಾವವು ತೋರಿಬರುತ್ತದೆ. ಮುಮುಕ್ಷುಗಳಿಗೆ ಮಾತ್ರ ಯೋಗ್ಯವಾದುದೇ ವಿನಾ ಬುಭುಕ್ಷುಗಳಿಗೆ ಅಲ್ಲವೆಂಬುದು ವ್ಯಕ್ತವು. ಇಂತಹ ಬುಭುಕ್ಷುಗಳಿಂದ ಗೋಪನ ಮಾಡತಕ್ಕವು ಮನ್ತ್ರವೂ ಮನ್ತ್ರಾರ್ಥವೂ ಎಂದು "ಮನ್ತ್ರಂಯತ್ನೇನ ಗೋಪಯೇತ್" ಎಂಬಲ್ಲಿ ವಿದಿತವು. ಆದುದರಿಂದ ಈ ಗ್ರಂಥವು ವಿದ್ವದ್ಗೋಷ್ಠಿಗೆ ಮಾತ್ರವೇ ಉದ್ದೇಶ್ಯವು. ಅಲ್ಲಿ ದೇವತೆಗಳಿಗಾಗಿ ಸರ್ವೇಶ್ವರನಿಂದಲೇ ಆ ಅಮೃತವು ಹೇಗೆ ಕೊಡಲ್ಪಟ್ಟಿತೋ, ಹಾಗೆಯೇ ವಿಬುಧ ಜನಗಳಿಗಾಗಿಯೇ ಸರ್ವೇಶ್ವರನಿಂದಲೇ ಈ ರಹಸ್ಯಾರ್ಥ ಸುಧೆಯು ಪರಮಪುರುಷನಿಂದಲೇ ಅನುಗ್ರಹಿಸಲ್ಪಟ್ಟಿವು. ತನ್ನ ಶಾಸ್ತ್ರಗಳಾದ ಅಥರ್ವಣ ಕಠಾದ್ಯುಪನಿಷತ್ತುಗಳಲ್ಲೂ, ಮನ್ವಾದಿಶಾಸ್ತ್ರಗಳಲ್ಲೂ ಹೈರಣ್ಯಗರ್ಭ ನಾರದೀಯ ಬೋಧಾಯನಾದಿ ಕಲ್ಪಗಳಲ್ಲೂ, ಪ್ರೋಕ್ತವು. ಅದೂ ಅಲ್ಲದೆ "**ಅಷ್ಟಾಕ್ಷರಸ್ಯಮನ್ತ್ರಸ್ಯ ಋಷಿರ್ನಾರಾಯಣ ಸ್ಸ್ವಯಮ್**" ಎಂದು ಇರುವದರಿಂದ ಬದರಿಕಾಶ್ರಮ ವಾಸಿಯಾದ ನಾರಾಯಣನೇ ಋಷಿಯು ; ಶರಣಾಗತಿ ಮನ್ತ್ರವನ್ನು ತಾನೇ ಲಕ್ಷ್ಮಿಗೆ ಉಪದೇಶಿಸಿರುತ್ತಾನೆ; ರಾಮಾವತಾರಿಯಾಗಿಯೂ "**ಸಕೃದೇವ ಪ್ರಪನ್ನಾಯ**" ಎಂಬಲ್ಲಿ ತಾನೇ ಮಾಹಾತ್ಮ್ಯೆಯನ್ನು ಪ್ರಕಟಿಸಿರುತ್ತಾನೆ; ಚರಮಶ್ಲೋಕವನ್ನು ತಾನೇ ಅರ್ಜುನನಿಗೆ ಉಪದೇಶಿಸಿರುತ್ತಾನೆ.

**ಸುಧಾ** ಶಬ್ದದಿಂದ ಆತ್ಮೋಜ್ಜೀವನರೂಪಸತ್ತೆಯನ್ನು ಕೊಡುವಂತಾದು ಈಗ ತಮಗೆ ತಮ್ಮ ಆಚಾರ್ಯ ಮೂಲಕ ಉಪದಿಷ್ಟವಾದ ಈ ಮನ್ತ್ರಾರ್ಥಗಳೆಂಬುದು ಬೋಧಿತವು. ಇಂತಹ ನಿರತಿಶಯವಾದ ಮಾಹಾತ್ಮ್ಯೆಯನ್ನು ಹೊಂದಿ ಭೋಗ್ಯತಮವಾದ ಸುಧೆಯನ್ನು, **ಪಿಬತ** ಪಾನಮಾಡಿರಿ ; ಪಿಬತ ಎಂದು ಹೇಳಿದುದರಿಂದ ಅತ್ಯಂತ ಮಾಧುರ್ಯವೂ, ಸಾರತಮತ್ವವೂ, ಶ್ರುತ್ಯರ್ಥಗಳಿಗೆ ಪರಸ್ಪರ ಬಾಧ್ಯಬಾಧಕತ್ವಾದಿ ಅಪಾರ್ಥಗಳನ್ನು ದೂರೀಕರಿಸಿದ ಪರಮಸಾಮಂಜಸ್ಯವೂ ಸೂಚಿತವು.

ಇದರಿಂದ, ಗುರುಕುಲವನ್ನು ಸೇರಿ ಪ್ರಪನ್ನನಾಗಿರುವವನು ಅತ್ಯಾದರಿಂದ ಈ ಗ್ರಂಥವನ್ನು ಮುಖ್ಯವಾಗಿ ಸ್ವೀಕರಿಸತಕ್ಕದ್ದೆಂಬುದು ಸೂಚಿತವು. ಇದನ್ನು ಪುನಃ ಪುನಃ ಅರ್ಥದೊಂದಿಗೆ ಆಸ್ವಾದನೆ ಮಾಡಿದ್ದರೆ ಪ್ರಪನ್ನನ ಸ್ವರೂಪಕ್ಕೇ ಕುಂದಕವು. ಆದುದರಿಂದಲೇ ಪರಮಾಚಾರ್ಯರೆಲ್ಲರೂ ತಮ್ಮ ಶಿಷ್ಯರುಗಳಿಗೆ ಉಪದೇಶಿಸುವ ಪ್ರಥಮ ಗ್ರಂಥವಾಗಿರುತ್ತದೆ ; ಆ ಕಾರಣದಿಂದ ಇದು ಅವಶ್ಯ ಪಠನೀಯವೆಂದು ಹೇಳುವದಕ್ಕಾಗಿ **ಪಿಬತ** ಎಂದು ನಿಗಮನ ಮಾಡಿದರು. ಇದು ಇಹಲೋಕದ

ಸರ್ವತಾಪತ್ರಯುಕ್ಕೂ ಪರಮೌಷಧಿಯಾದುದರಿಂದಲೂ **ಪಿಬತ** ಎಂಬ ನಿಗಮನವು. ಲೋಕದಲ್ಲಿ ಸಿಕ್ಕುವ ಇತರ ಪಾನಗಳು ಸುಧೆಯ ಹಾಗೆ ಮಧುರವಾಗಿ ತೋರಿದರೂ, ಅವುಗಳು ವಿಷಮಿಶ್ರವಾದಂತೆ ಪರಿಣತಿಯಲ್ಲಿ ದುಃಖವನ್ನುಂಟುಮಾಡತಕ್ಕವು. ಈ ಸಂಪ್ರದಾಯ ಸುಧೆಯಾದರೋ ಅತ್ಯಮೋಘವಾದುದು; ಸಂಪೂರ್ಣವಾಗಿ ದುಃಖೋಪಶಮನಕ್ಕೆ ಹೇತುವಾದ ಸಂಪ್ರದಾಯ ಸುಧೆಯು. ಆದುದರಿಂದ ಆದರದಿಂದ ಪಾನಮಾಡಿರಿ ಎಂಬ ಹಿತೋಪದೇಶವು.

**ಈ ಸುಧಾಂ ಪಿಬತ** ಎಂಬ ಪ್ರಯೋಗವು ಶ್ರೀ ಭಾಷ್ಯಕಾರರ ಶ್ರೀ ಭಾಷ್ಯದ ಮಂಗಳ ಶ್ಲೋಕಗಳಲ್ಲಿ ಒಂದನ್ನು ಜ್ಞಾಪಿಸುತ್ತದೆ. ಅದು ಯಾವುದೆಂದರೆ-"**ಪಾರಾಶರ್ಯ ವಚಸ್ಸುಧಾ ಮುಪನಿಷದ್ದುಗ್ಧಾಬ್ಧಿ ಮಧ್ಯೋದ್ಧೃತಾಂ। ಸಂಸಾರಾಗ್ನಿ ವಿದೀಪನವ್ಯಪಗತ ಪ್ರಾಣಾತ್ಮಸಂಜೀವನೀಮ್ ॥ ಪೂರ್ವಾಚಾರ್ಯಸುರಕ್ಷಿತಾಂ ಬಹು ಮತಿ ವ್ಯಾಘಾತದೂರಸ್ಥಿತಾ ಮಾನೀತಾಂತು ನಿಜಾಕ್ಷರೈ ಸ್ಸುಮನಸೋ ಭೌಮಾಃ ಪಿಬನ್ತ್ವನ್ವಹಮ್**" ಸಙ್ಗ್ರಹವಾಗಿ ಇದರ ಅರ್ಥವೇನೆಂದರೆ "ಉಪನಿಷತ್ತೆಂಬ ಕ್ಷೀರಸಮುದ್ರವನ್ನು ಕಡೆದು ಅದರ ಮಧ್ಯಪ್ರದೇಶದಿಂದ ಬಂದ ಶ್ರೀವ್ಯಾಸೋಕ್ತಿಯಾದ ಬ್ರಹ್ಮಸೂತ್ರಗಳೆಂಬ ಸುಧೆಯನ್ನು ಭೂಮಿಯ ದೇವತೆಗಳಾದ ಪಂಡಿತರು ಪ್ರತಿದಿನವೂ ಪಾನಮಾಡಲಿ ಎಂದು ಇರುತ್ತದೆ. ಆ ಅಮೃತವೆಂತಾದ್ದು ಎಂಬುದಕ್ಕೆ ಕೆಲವು ವಿಶೇಷಣಗಳನ್ನು ಕೊಟ್ಟಿರುತ್ತಾರೆ. ಅಮೃತದ ಹಾಗೆ ಭೋಗ್ಯವಾದುದನ್ನು ಅನುಭವಿಸಿರಿ ಎಂಬ ಭಾವವು. ಭೋಗ್ಯವಾದುದು ಹೇಗೆ ಎಂದರೆ ಪರಿಪೂರ್ಣ ಬ್ರಹ್ಮಾನುಭವರೂಪವಾಗಿ ಆತ್ಮೋಜ್ಜೀವನ ಉಂಟಾಗುವದರಿಂದ-"**ಸಂಶ್ರವೇ ಮಧುರಂವಾಕ್ಯಂ**" ಎಂದು ಮಹರ್ಷಿಯು ಹೇಳಿರುವ ಹಾಗೆ (ಸುಂದರ- ) ತುಂಬಾ ಮಧುರವಾದ ವಾಕ್ಯವು; ಕಿವಿಗೆ ಬೀಳುವ ಹಾಗೂ ಮನಸ್ಸಿಗೆ ಆಪ್ಯಾಯನವಾಗುವ ಹಾಗೂ ಇರುವಂತಾದ್ದೆಂಬ ತಾತ್ಪರ್ಯವು.

**ವಿಬುಧರು**-ವಿಶೇಷ ಬುಧರು; ತುಂಬಾ ಆಗಮೋತ್ಥ ವಿವೇಕೋತ್ಥ ಜ್ಞಾನವನ್ನು ಹೊಂದಿದವರು. ಕಿಡಾಂಬಿ ಆಚಾರ್ಯರವರಿಗೆ ವೇದಾನ್ತೋದಯನರೆಂದು ಏಕೆ ಹೆಸರು? ಎಂದರೆ-ಶ್ರೀಯತಿರಾಜರ ಶಿಷ್ಯರಾಗಿ ವೇದಾನ್ತ ಶಾಸ್ತ್ರಜ್ಞಾನಕ್ಕೆ ಬೇಕಾದ ತಪ್ಪನ್ನೈಪುಣ್ಯವನ್ನೂ ಮತ್ತು ಅವರ ಸಂಪ್ರದಾಯಕ್ಕನು ಗುಣವಾದ ನಿಷ್ಠೆಯನ್ನೂ ಹೊಂದಿದ್ದರಿಂದ ಅವರಿಗೆ ವೇದಾನ್ತೋದಯನರೆಂಬ ನಾಮಧೇಯವು. **ಸಂಪ್ರದಾಯ ಸುಧಾಂ** ಎಂಬುದರಿಂದ ಆ ಸಂಪ್ರದಾಯವೇ ಸುಧೆ ಎಂಬ ಭಾವವು; ಸುಧೆಯ ಹಾಗೆ ಭೋಗ್ಯವು ಹೀಗೆ ಈ ಸಂಪ್ರದಾಯಕ್ಕೆ ವೇದಾನ್ತೋದಯನತ್ವವು ಹೇಳಲ್ಪಟ್ಟಿರುವದರಿಂದ ಈ ಸಂಪ್ರದಾಯವು ಆಚಾರ್ಯಾನುಮತಿಯನ್ನು ಮಾತ್ರವೇ ಹೊಂದಿದುದು ಎಂಬರ್ಥವಲ್ಲವು. ಆ ಆಚಾರ್ಯಾನುಮತಿಗೆ ವೇದಾಂತ ಪ್ರಮಾಣದ ಬಲವಿರುವದರಿಂದ ವಿಶೇಷೋಪದೇಯವಾದುದೆಂಬುದು ತೋರಿಬರುತ್ತದೆ. ವೇದಾಂತ

**ಕಳಕಂಠಗಣಾಸ್ವಾದ್ಯೇ ಕಾಮಸ್ಯಾಸ್ತ್ರೇ ನಿಜಾಙ್ಕುರೇ ।**
**ನಿಂಬವೃತ್ತಿಭಿ ರುದ್ಗೀರ್ಣೇ ನ ಚೂತಃ ಪರಿತಪ್ಯತೇ ॥ ೩೭ ॥**

---

ವನ್ನು ಸರಿಯಾಗಿ ಪರಸ್ಪರ ವ್ಯಾಘಾತವಿಲ್ಲದಹಾಗೆ ತಿಳಿದು ಐಕಕಂಠ್ಯವನ್ನು ಸಾಧಿಸಿ, " **ಸರ್ವಂಸಮಂಜಸಮ್** ಎಂದು ಹೇಳಿದ ಸಂಪ್ರದಾಯ ಸುಧೆಯಾದುದ ರಿಂದ ಪಾನಕ್ಕೆ ಪರಮಯೋಗ್ಯವಾದುದು. ಇತರರು ಈ ವೇದಾಂತಶಾಸ್ತ್ರಕ್ಕೆ ಮಾಡಿರುವ ಅರ್ಥಗಳಲ್ಲಿ ಪರಸ್ಪರ ವಿರೋಧವಿರುವದೆಂದೂ, ಅವುಗಳಿಗೆ ಬಾಧ್ಯ ಬಾಧಕಗಳುಂಟೆಂದೂ ಹೇಳುವದು ಸುಧೆಯೂ ಆಗದು, ಅದು ಪಾನಯೋಗ್ಯವೂ ಅಲ್ಲವು ಎಂದೂ ಹೇಳಿದಂತಾಯಿತು. **ವೇದಾಂತೋದಯನ** ಶಬ್ದದಿಂದ ನಾವು ಮುಖ್ಯವಾಗಿ ಗ್ರಹಿಸತಕ್ಕ ಅಂಶವು ಏನೆಂದರೆ ಎಲ್ಲಾ ಪಪೋನಿಷತ್ತುಗಳೂ ತತ್ವಗಳನ್ನು ಒಂದೇ ವಿಧವಾಗಿ ಬೋಧಿಸುತ್ತವೇವಿನಾ ಒಂದಕ್ಕೆ ಒಂದು ವಿರುದ್ಧವಾಗಿ ಎಂದಿಗೂ ಇಲ್ಲವೆಂಬುದ . ಹೀಗೆ ವೇದಾಂತದಮಹಿಮೆಯನ್ನರಿತವರು.

**ಅವತಾರಿಕೆಯು**-ಹಿಂದಿನ ಶ್ಲೋಕದಲ್ಲಿ ತಾವು ಈಗ ಉಪಪಾದಿಸಿರುವ ಸಂಪ್ರದಾಯ ಸುಧೆಯು, **ವಿಭುದ ಪರಿಷನ್ನಿಷೇವ್ಯ**ವೆಂದು ಹೇಳಿದರು. ವಿಶೇಷ ಜ್ಞಾತಾವಾದವರು ಉಪಾದೇಯವೆಂದು ಭಾವಿಸಿ ಈ ಸಂಪ್ರದಾಯ ಸುಧೆಯನ್ನು ಪಾನಮಾಡಿ ಎಂದು ಪ್ರಾರ್ಥಿಸಿದರು. ಹಾಗೆ ವಿಬುಧರಲ್ಲದ ಅನೇಕ ಅಜ್ಞಾನಿಗಳು ಇದನ್ನು ಪರಿಗ್ರಹಿಸದೇ ಹೋಗಬಹುದಲ್ಲಾ ಎಂದರೆ ಅವರಿಂದ ನನಗೆ ಈಷದಪಿ ಪರಿತಾಪವಿಲ್ಲವೆಂದು ಅನ್ಯಾಪದೇಶದಿಂದ ಒಂದು ದೃಷ್ಟಾಂತ ಮೂಲಕ ತಿಳಿಸುತ್ತಾರೆ. ವಸಂತ ಋತುವಿನಲ್ಲಿ ಅತಿಮನೋಹರವಾದ ಕೆಂಪು ಚಿಗುರುಗಳನ್ನು ಹೊಂದಿದ ಮಾವಿನಮರವು ಅತಿ ಮಧುರವಾದ ಪಂಚಮಸ್ವರದಿಂದ ಕೂಗುವ ಕೋಕಿಲಗಳಿಂದ ನಿಷೇವ್ಯವು. ಕ್ರೂರವಾದ ವಾಕ್ಕುಳ್ಳ ಕಾಗೆಗಳು ಆ ಮರವನ್ನು ತ್ಯಜಿಸಿ ಕಹಿಯಾದ ಬೇವಿನ ಹಣ್ಣಿಗಾಗಿ ಬೇವಿನ ಮರವನ್ನು ಆಶ್ರಯಿಸು ತ್ತವೆ. ಇದರಿಂದ ಮಾವಿನಮರಕ್ಕೆ ಪರಿತಾಪವೇನು ? ಏನೊಂದು ಹಾನಿ ಇಲ್ಲನೆಂಬ ಭಾವವು, ಅಂತವರು ಪರಿಗ್ರಹಿಸುವದು ಆವಶ್ಯಕವೇ ಇಲ್ಲವೆಂದು ಹೇಳಿದ ಹಾಗೆ.

ಅರ್ಥವು- **ಕಳಕಂಠಗಣಾಸ್ವಾದ್ಯೇ**-ಕೋಕಿಲೆಯ ಸಮೂಹದಿಂದ ಆಸ್ವಾದಿಸ ಲ್ಪಟ್ಟು, ರುಚಿಯಾಗಿದೆ ಎಂದು ಭಾವಿಸಲ್ಪಟ್ಟ **ಕಾಮಸ್ಯಾಸ್ತ್ರೇ**-ಶ್ರೀ ಪುತ್ರನಾಗಿ ಕಾಮ ಭೋಗಗಳಲ್ಲಿ ನಿಶ್ಚಾನವನ್ನುಂಟುಮಾಡುವ ಮನ್ಮಥನ ಅಸ್ತ್ರವಾದ, **ನಿಜಾಙ್ಕುರೇ**-ಸ್ವಕೀಯವಾದ (ಚೂತವೃಕ್ಷದ) ಚಿಗರುಗಳು **ನಿಂಬವೃತ್ತಿಭಿಃ**- ಬೇವಿನ ಚಿಗರನ್ನು ತಿಂದು ಜೀವಿಸುವ ಕಾಗೆಗಳಿಂದ, **ಉದ್ಗೀರ್ಣೇ**-ಉಗಿಯಲ್ಪಡಲಾಗಿ ಎಂದರೆ ತಿರಸ್ಕರಿಸಲ್ಪಡಲಾಗಿ, **ಚೂತಃ**-ಮಾವಿನಮರವು, **ನಪರಿತಪ್ಯತೇ**. ಪರಿತಾಪ ವನ್ನು ಹೊಂದುವದಿಲ್ಲವು.

ಮಾವಿನ ಮರದ ಚಿಗರನ್ನು ಕೋಕಿಲೆಗಳು ಪರಮಭೋಗ್ಯವೆಂದು ಭಾವಿಸು ವವು. ಕಾಗೆಗಳು ಆದನ್ನು ಮುಟ್ಟದೆ ಬೇವಿನ ಚಿಗರನ್ನು ಭೋಗ್ಯವೆಂದು ಭಾವಿಸುತ್ತವೆ. ಇದರಿಂದ ಮಾವಿನಮರಕ್ಕೆ ಏನೊಂದು ಪರಿತಾಪವಿಲ್ಲವೆಂದು ಹೇಳಿದರು.

**ಉಪಪಾದನೆಯು**-ಚೂತವೃಕ್ಷದ ಚಿಗರು ಹೇಗೆ **ಕಳಕಂಠಗಣಾ ಸ್ವಾದ್ಯವೋ** ಹಾಗೆಯೇ ತಮ್ಮ ಈ ಅಮೋಘಗ್ರಂಥವು ವಿದ್ವಜ್ಜನಮಂಡಲಿಯಿಂದ ಬಹು ರಸವತ್ತಾದುದೆಂದು ಭಾವಿಸಲ್ಪಟ್ಟಿದುದು ಎಂದು ತೋರಿಬರುತ್ತದೆ. ಪಂಚಮ ಸ್ವರದಲ್ಲಿ ಕೂಗುವ **ಕಳಕಂಠ** ಶಬ್ದದಿಂದ ಸಾತ್ವಿಕರ ಮನೋಹರವಾದ ಉಕ್ತಿಯು ಹೇಳಲ್ಪಟ್ಟಿತು. ಅಂತವರು ತಮ್ಮ ಗ್ರಂಥದ ವಿಷಯದಲ್ಲಿ ಕೋಕಿಲರವಮೋ ಪಾದಿಯಲ್ಲಿ ಅತಿ ಮನೋಹರವಾದುದೆಂದು ಭಾವಿಸುವವರೆಂದು ತೋರಿಬರುತ್ತದೆ. ಹಾಗೆ ಸಾತ್ವಿಕರೂ ವಿಶೇಷವಾಗಿ ಉಂಟು. ಅವರೆಲ್ಲಾ ಬಹು ಪ್ರೀತಿಯಿಂದ ಸ್ವೀಕರಿಸು ವರು ಎಂಬ ಭಾವವು **ಗಣ** ಶಬ್ದದಿಂದ ದ್ಯೋತಿತವು. **ಆಸ್ವಾದ್ಯ** ಶಬ್ದದಿಂದ ಅಂತವರಿಗೆ ತಮ್ಮ ಗ್ರಂಥವು ತುಂಬಾ ಭೋಗ್ಯವಾದುದೆಂದು ಇಲ್ಲಿ ಹೇಳಲ್ಪಟ್ಟಿತು. ಚೂತವೃಕ್ಷ ಚಿಗರು ಕಾಮಸ್ಯಾಸ್ತ್ರವೆಂದು ಹೇಳಲ್ಪಟ್ಟಿತು. ಕಾಮನು ಸರ್ವೋ ಪಭೋಗಗಳನ್ನುಂಟುಮಾಡುವವನು; ತನ್ನ ಅಸ್ತ್ರದಿಂದ ಈ ಉಪಭೋಗಗಳೆಲ್ಲಾ ವಶವು; ಹಾಗೆ ತಮ್ಮ ಈ ದಿವ್ಯ ಪ್ರಬಂಧವು **ಕಾಮಸ್ಯ**-ಸಾಕ್ಷಾನ್ಮನ್ಮಥಮನ್ಮಥ ನೆಂದು ಹೇಳಿಸಿಕೊಳ್ಳುವ ಪರಮಪುರುಷನನ್ನು ವಶಮಾಡಿಕೊಡುವಂತಾದ್ದು. **ಕಾಮ** ಶಬ್ದವು ಸಹಸ್ರನಾಮದಲ್ಲಿ ವಿಷ್ಣುವನ್ನು ಬೋಧಿಸುತ್ತದೆ (೨೯೮ನೆಯ ನಾಮವು) **ಕಾಮ**ನೆಂದರೆ ಸೌಂದರ್ಯ ಲಾವಣ್ಯಾದಿ ರೂಪಗುಣಗಳಿಂದಲೂ ದಯಾ ಔದಾರ್ಯ ವಾತ್ಸಲ್ಯಾದಿ ಆತ್ಮಗುಣಗಳಿಂದಲೂ ಮನ್ಮಥ ಮನ್ಮಥನ ಹಾಗೆ **ಅತಿ ಮನೋಹರನು**-ಎಂಬರ್ಥವು. ಇಲ್ಲಿ **ನಿಜಾಙ್ಕುರವೇ,** ಚೂತವೃಕ್ಷದ ಚಿಗುರೇ ತಮ್ಮ ಗ್ರಂಥವು; **ಚಿಗರು**-ಅದರಲ್ಲಿ ಬಿಡುವ ಹೂವು ಫಲ ಮುಂತಾದವುಗಳಿಗೂ ಉಪಲಕ್ಷಣವು. ಇದರಿಂದ ತಮ್ಮ ಗ್ರಂಥವೂ ಹಾಗೆಯೇ ಸರ್ವಶ್ರೇಯಸ್ಸನ್ನು ಮೋಕ್ಷಾರ್ಥಿಗೆ ಉಂಟುಮಾಡುತ್ತದೆಂಬ ಭಾವವು ದ್ಯೋತಿತವು. **ನಿಜಾಙ್ಕುರ**-ಶಬ್ದದಿಂದ, **ಸ್ವೇನರೂಪೇಣಾಭಿನಿಷ್ಪದ್ಯತೇ**-ಎಂಬ ಮೋಕ್ಷದಶೆಯಲ್ಲಿ ಉಂಟಾ ಗುವ ನೈಜದಶೆಯನ್ನು ಸೂಚಿಸುತ್ತದೆ. ಇಂತಹ ನೈಜಭಾವದ ಅಂಕುರವುಳ್ಳದ್ದು ಆವಿರ್ಭಾವವುಳ್ಳದ್ದು ತಮ್ಮ ಗ್ರಂಥವೆಂದು ಹೇಳಿದಂತಾಯಿತು. **ಉದ್ಗೀರ್ಣೇ**-ಎಂಬುದರಿಂದ ಅಸತ್ತುಗಳು ಅಂತಹ ಆತ್ಮನ ನೈಜಾವಸ್ಥೆಯ ಪ್ರಾಪ್ತಿಯನ್ನು ನಿರಾಕರಿಸಬಹುದೆಂದು ಹೇಳಲ್ಪಟ್ಟಿತು; ಹಾಗೆಯೇ ತಮ್ಮ ಗ್ರಂಥವನ್ನು ಅಸತ್ತುಗಳು ನಿರಾಕರಿಸಬಹುದೆಂದು ಹೇಳಲ್ಪಟ್ಟಿತು. ಕೆಲವರು ಅಸೂಯೆಯಿಂದ ಗ್ರಂಥವನ್ನು ಅನಾದರಿಸಬಹುದೆಂದು ಹೇಳುವದಕ್ಕಾಗಿ ಉದ್ಗೀರ್ಣೇ ಎಂಬ ಪ್ರಯೋಗವು.

ಯಾವಾಗ ಚೂತವೃಕ್ಷದ ಅಙ್ಕುರವು ತಮ್ಮ ಈ ಪ್ರಬಂಧವಾಯಿತೋ, ಆಗ ಚೂತ ವೃಕ್ಷವು ತಾವೇ ಆಯಿತು. ಅತಿಮಧುರವಾದ ಫಲವನ್ನು ಕೊಟ್ಟು ಆಸ್ವಾದನ ಮಾಡಿದರೆ ವಿಶೇಷ ಭೋಗ್ಯವಾಗಿರುವ ಭಾವವು ಚೂತ ಶಬ್ದದಿಂದ ತೋರಿಬರುತ್ತದೆ. ಅಂತಹ ಮನೋಹರವಾದ ಪರಮಭೋಗ್ಯವಾದ ಗ್ರಂಥಗಳನ್ನು ಬರೆದವರು ತಾವು ಎಂದು ಸೂಚಿಸಿದಂತಾಯಿತು. **ನಪರಿತಪ್ಯತೇ**-ಎಂಬುದರಿಂದ ಪರಿತಾಪವು, ಸಾಧುಗಳು ಪರಿಗ್ರಹಿಸದೆಹೋದರೆ ಒಂದುವೇಳೆ ಉಂಟಾಗಬಹುದು. ಅಸತ್ತುಗಳು ಪರಿಗ್ರಹಿಸದೆಹೋದರೆ ಪರಿತಾಪವು ಏಕೆ ? ಎಂಬ ಭಾವವು. ಅದೂ ಅಲ್ಲದೆ ಸ್ವಾಮಿ ನಿಗಮಾನ್ತಾಚಾರ್ಯರು ಈ ಗ್ರಂಥಗಳ ನಿರ್ಮಾಣದಲ್ಲಿ ತಮ್ಮ ಸ್ವಾತಂತ್ರ್ಯವನ್ನು ಸ್ವಲ್ಪವೂ ಇಟ್ಟುಕೊಳ್ಳದೆ, ಸರ್ವೇಶ್ವರನಾದ ಹಯಗ್ರೀವರೇ ಬರೆಸಿದುದು ಎಂದು ಮುಂದೆ ಹೇಳುವದರಿಂದಲೂ, ತಮಗೆ ಈಷದಪಿ ಪರಿತಾಪವಿಲ್ಲವೆಂದೂ ಭಾವಿಸ ಬಹುದು. ಇತರರ ನಿಂದೆಯಲ್ಲಿ, ಗ್ರಂಥವು ತಮ್ಮ ಸ್ವತಂತ್ರ ರಚನೆಯಾಗಿದ್ದ ಪಕ್ಷದಲ್ಲಿ, ಪರಿತಾಪಕ್ಕೆ ಅವಕಾಶವು, ಹಾಗಲ್ಲದ ಪಕ್ಷದಲ್ಲಿ ಪರಿತಾಪಕ್ಕೆ ಕಾರಣವೇ ಇಲ್ಲವೆಂಬ ಭಾವವು.

**ಅವತಾರಿಕೆಯು**-ಹಿಂದೆ ಈ ಗ್ರಂಥವಾದ ಅಮೋಘಸುಧೆಯನ್ನು ಮೋಕ್ಷಾರ್ಥಿಗಳನ್ನು ಕುರಿತು **ಪಿಬತ**-ಪಾನಮಾಡಿರಿ ಎಂದು ಹೇಳಲ್ಪಟ್ಟಿತು. ಇಷ್ಟು ಅಮೋಘವಾದರೂ ಕೆಲವರು ಇದನ್ನು ನಿರಾಕರಿಸಬಹುದಲ್ಲಾ ಎಂದರೆ ಅಸತ್ತುಗಳ ಅನಾದರಣೆಯಿಂದ ತಮಗೇನೂ ಪರಿತಾಪವಿಲ್ಲವೆಂದೂ ಹೇಳಿದರು. ಇದು ರಹಸ್ಯತ್ರಯ ಸಾರವು ; ಗುರುಮುಖೇನ ಇಂತಹ ರಹಸ್ಯಗಳನ್ನೆಲ್ಲಾ ಅಧಿಕರಿಸು ವದು ನ್ಯಾಯವಾಗಿರುವಾಗ, ಹಾಗಲ್ಲದೆ ಅಂತಹ ಉಪದೇಶವನ್ನೆಲ್ಲಾ ಗ್ರಂಥಮೂಲಕ ಪ್ರಕಾಶಪಡಿಸಬಹುದೋ? " ಮನ್ತ್ರಂ ಯತ್ನೇನ ಗೋಪಯೋತ್ " ಎಂದಲ್ಲವೇ ಹೇಳಲ್ಪಟ್ಟಿರುವದು ? ಎಂದು ಆಕ್ಷೇಪಣೆಯನ್ನು ತಂದರೆ ಅದಕ್ಕೆ ಸಮಾಧಾನವನ್ನು ಹೇಳುತ್ತಾರೆ. ಆಚಾರ್ಯಸ್ಥಾನದಲ್ಲಿರುವವರ ಸೌಕರ್ಯಕ್ಕಾಗಿ, ಶಾಸ್ತ್ರಪಙ್ಕ್ತಿಯ ಯಥಾ ರ್ಥಾರ್ಥಗಳನ್ನು ತಮಗೆ ಪರಮಗುರುಗಳು ಹೇಗೆ ಕ್ರಮವಾಗಿ ಉಪದೇಶಿಸಿದರೋ ಅವೆಲ್ಲವನ್ನು ತಿಳಿಯಪಡಿಸುವದು ಆವಶ್ಯಕವಾದುದರಿಂದ, ಈ ಗ್ರಂಥಮೂಲಕ ಹೇಳಿದ್ದೇವೇ ವಿನಾ, ಶಿಷ್ಯರು ಆಚಾರ್ಯದ್ವಾರಾ ಅಧಿಕರಿಸುವದನ್ನು ನಿರಾಕರಿಸಿ, ಈ ಗ್ರಂಥವನ್ನು ಪರಿಗ್ರಹಿಸಲಿ ಎಂದು ಹೇಳಲಿಲ್ಲವೆನ್ನುತ್ತಾರೆ. ಪ್ರಾಜ್ಞರಾದ ಆಚಾರ್ಯರವರ ಸೌಕರ್ಯಕ್ಕಾಗಿಯೂ, ಪ್ರಾಜ್ಞರಾದ ಶಿಷ್ಯರಿಗೂ ಆ ಉಪದೇಶಗಳ ನ್ನೆಲ್ಲಾ ಗ್ರಹಿಸಲು ಅನುಕೂಲವನ್ನು ಒದಗಿಸುವದಕ್ಕಾಗಿಯೂ ತಾವು ಈಗ ಬರೆದುದು ಎಂದು ಹೇಳುತ್ತಾರೆ. ವಾಸ್ತವವಾಗಿ ಈ ಗ್ರಂಥವನ್ನು ಶಿಷ್ಯಸ್ಥಾನೀಯರು ಆಚಾರ್ಯರ ಸಹಾಯವಿಲ್ಲದೆ ತಾವು ಗ್ರಹಿಸುವದು ಅಸಾಧ್ಯವು. ಆದುದರಿಂದ ಶಿಷ್ಯರು ತಮ್ಮ ಆಚಾರ್ಯರ ಮೂಲಕವೇ ಗ್ರಹಿಸಿತಕ್ಕದ್ದೆಂಬ ನಿಯಮಕ್ಕೆ ವ್ಯಾಘಾತ

**ಮುನ್ಪೆತ್ತ ಜ್ಞಾನಮುಂ ಮೋಕನ್ದುರಕ್ಕಲುಂ ಮೂನ್ರುರೈಯಿಲ್ ।
ತನ್ಪೆತ್ತ ತನ್ಮೈಯುಂತಾಳ್ನ್ದವರ್ಕ್ಕೀ ಯುನ್ದನಿತ್ತಕವುಮ್ ।**

---

ವಿಲ್ಲವು. ಆಚಾರ್ಯೋಪದೇಶದ ಪುನಃ ಪ್ರವಚನಕ್ಕೆ ಸಹಾಯವಾಗುತ್ತದೆಂಬ ಆಶಯವೂ ತೋರಿಬರುತ್ತದೆ. ಹೀಗೆ ಸಮಾಧಾನ ಹೇಳುವ ಸಂದರ್ಭದಲ್ಲಿ, ತಾವು ಈಗ ೩೨ ಅಧಿಕಾರಗಳಿಂದ ಹೇಳಿದುದರು ನಿಗಮನವಾದುದರಿಂದ ಸಙ್ಗ್ರಹವಾಗಿ ತಿಳಿಸುತ್ತಾರೆ.

**ಅರ್ಥವು:**—**ಮುನ್**-ತಾವು ಹಿಂದೆ ಶಿಷ್ಯ ಕೋಟಿಗೆ ಸೇರಿದಾಗ, **ಪೆತ್ತ**-ಜಾಯಮಾನಕಟಾಕ್ಷ ಸಾತ್ವಿಕಸಂಭಾಷಣೆ, ಸದಾಚಾರ್ಯ ಪ್ರಾಪ್ತಿ ಮೊದಲುಗೊಂಡು ತಮ್ಮ ಆಚಾರ್ಯರಾದ ಕಿಡಾಂಬಿ ಅಪ್ಪುಳ್ಳಾರವರ ಉಪದೇಶದಿಂದ ಹೊಂದಿದ, **ಜ್ಞಾನಮುಮ್**-ಈ ರಹಸ್ಯತ್ರಯಗಳಲ್ಲಿ ತೋರಿಬರುವ ಸಮಸ್ತ ತತ್ವಹಿತ ಪುರುಷಾರ್ಥ ಜ್ಞಾನವನ್ನೆಲ್ಲಾ, ಇದರಿಂದ ಅರ್ಥಾನು ಶಾಸನಭಾಗಾರ್ಥವೆಲ್ಲಾ ಸೂಚಿತವು. **ಮೋಕಂತುರಕ್ಕಲುಮ್**-ಕುತರ್ಕಗಳಿಂದುಂಟಾದ ನಿರರ್ಥಕವಾದ ಅಜ್ಞಾನವೆಲ್ಲಾ ನಿವೃತ್ತಿಸಿ ಹೋಗೋಣವನ್ನು, ಇದರಿಂದ ಎರಡನೆಯ ಭಾಗವಾದ ಸ್ಥಿರೀಕರಣ ಭಾಗವು ಸೂಚಿತವು, **ಮೂನ್ರುರೈಯಿಲ್**-ಈ ರಹಸ್ಯತ್ರಯಗಳಲ್ಲಿ **ತಣ್ಪು**-ಅಪಕರ್ಷವನ್ನು, ಎಂದರೆ ಪ್ರಪದನವು ಉಪಾಯವೇ ಅಲ್ಲವೆಂದು ಹೇಳುವ ಅಪಕರ್ಷವನ್ನು, **ಅತ್ತ**-ಕಳೆದುಕೊಂಡ ಎಂದರೆ ಅಂತಹ ಕುವಾದವಿಲ್ಲದಿರುವ, **ತನ್ ಪೆತ್ತ**-ತಾನು ಆಚಾರ್ಯೋಪದೇಶದಿಂದ ತಿಳಿದುಕೊಂಡ, **ತನ್ಮೈಯುಮ್**-ತನ್ನ ಸ್ವರೂಪವಾದ ಭಗವದ್ಭಾಗವತ ಶೇಷತ್ವವನ್ನು, ಇದು ಮೂಲಮನ್ತ್ರದ ಉಪದೇಶವನ್ನೂ, **ತಾಳ್ನ್ದವರ್ಕ್ಕು**-ಅಕಿಂಚನರಾಗಿ ಶೇಷಭೂತರಾಗಿ ಭಗವಂತನನ್ನು ಆಶ್ರಯಿಸಿದವರಿಗೆ, **ಈಯುಮ್**-ಕೊಡುವ **ತನಿ**-ಅದ್ವಿತೀಯವಾದ, **ತವುಮ್**-ಮೋಕ್ಷವನ್ನು ಕೊಡುವ ಕೃಪೆಯನ್ನೂ, ಇದು ದ್ವಯಾಧಿಕಾರಾರ್ಥವು, **ಮನ್ ಪತ್ತಿ**-ರಾಜಾಧಿರಾಜನಾದ ಸ್ವಾಮಿಯನ್ನು ದ್ವಯದ ಮೂಲಕ ಆಶ್ರಯಿಸಿ, ಎಂದರೆ ಶರಣಾಗತಿಯನ್ನು ಮಾಡಿ, **ನಿನ್ರುವಗೈ**-ಕೃತಕೃತ್ಯನಾಗಿ ಸತ್ತೆಯನ್ನು ಹೊಂದಿದ ಪ್ರಕಾರವನ್ನು, **ಉರೈಕ್ಕಿನ್ರ**-ಅರ್ಜುನ ಮೂಲಕವಾಗಿ ಎಲ್ಲಾ ಮುಮುಕ್ಷುಗಳಿಗೂ ಉಪದೇಶಿಸುವ, **ಮರೈಯವರ್ ಪಾಲ್**-ವೇದಾರ್ಥಗಳನ್ನು ತಿಳಿದ **ಬ್ರಹ್ಮವಿತ್ತು**ಗಳ ವಿಷಯದಲ್ಲಿ, **ಚಿನ್**-ಕೋಪವನ್ನು, **ಪತ್ತಿ**-ಹೊಂದಿ, **ಎನ್ ಪ್ರಯೋಜನಮ್**-ಏನೊಂದೂ ಪ್ರಯೋಜನವಿಲ್ಲವು, ಇದರಿಂದ ಚರಮ ಶ್ಲೋಕಾಧಿಕಾರಾರ್ಥವೂ, ಆಚಾರ್ಯಕೃತ್ಯಾಧಿಕಾರಾರ್ಥವೂ, ಶಿಷ್ಯಕೃತ್ಯಾಧಿಕಾರಾರ್ಥವೂ ಸೂಚಿತವು. ಹಾಗೆ ರಹಸ್ಯಾರ್ಥಗಳನ್ನು ಉಪದೇಶಿಸುವವರನ್ನು ಕೋಪಿಸಿ ನಿಂದಿಸಿದವರೆ ಬರುವ ಪ್ರಯೋಜನವೇನು? ಎಂಬ ಭಾವವು. ಕೋಪಿಸಿ ನಿಂದಿಸಿದವರಿಗಾಗಿ ಇವುಗಳನ್ನು ತಾವು

**ಮುನ್ಪತ್ತಿ ನಿನ್ರವಕ್ಕೈ ಯುರೈಕ್ಕಿನ್ರ ಮುರೈಯುವರ್ಪಾಲ್ ।**
**ಚಿನ್ಪತ್ತಿ ಯೆನ್ಪಯುನ್ ಚೀರರಿವೋರ್ಕ್ಕಿವ್ವೈ ಚೆಪ್ಪಿನವೇ ॥ ೩೯ ॥**

---

ಹೇಳಲಿಲ್ಲವೆಂಬುದು ತಾತ್ಪರ್ಯವು; **ಶೀರ್ ಅರಿವೋರರ್ಕ್ಕು**-ಇದರಲ್ಲಿ **ಶೀರ್**-ಎಂದರೆ ಗುಣ, ಉತ್ಕೃಷ್ಟತೆ, ಇಂತಹ ಮಾಹಾತ್ಮ್ಯೆಯನ್ನು ತಿಳಿಯುವ ಪ್ರಾಜ್ಞರಿಗೆ. **ಇವ್ವೈ**-ಈ ರಹಸ್ಯತ್ರಯಗಳ ಉಪದೇಶವನ್ನೆಲ್ಲಾ, **ಚೆಪ್ಪಿನವೇ**-ಹೇಳಿದೆವಷ್ಟೇ. ಅಂತಹ ಕುತರ್ಕಗಳಿಂದ ನಿಂದಿಸುವರಿಗಾಗಿ ತಾವು ಈ ಪ್ರಬಂಧವನ್ನು ಬರೆಯಲ್ಲಿಲ್ಲವು; ಗುಣಗ್ರಾಹಿಗಳಾದ ಪ್ರಾಜ್ಞರಿಗಾಗಿ ಇವನ್ನು ಹೇಳಿದೆವು ಎನ್ನುತ್ತಾರೆ.

**ಉಪಪಾದನೆಯು**-ಸಾರದೀಪಿಕಾವ್ಯಾಖ್ಯಾತೃವು ಕೊಟ್ಟಿರುವ ಅವತಾರಿಕೆ ಏನೆಂದರೆ-ಕ್ಷುದ್ರಾರ್ಥಗಳನ್ನು ತಿಳಿದರೆ ಉಂಟಾಗುವ ಪ್ರಯೋಜನವೇನಿದೆ? ಮಹತ್ತಾದ ಪ್ರಯೋಜನವನ್ನೀಯುವ ಅರ್ಥಗಳನ್ನೀಗ ತಿಳಿಯಬೇಕಾದುದು ಎಂಬುವರಿಗಾಗಿ ಈ ಗ್ರಂಥವನ್ನು ರಚಿಸಿದುದು. ಸೃಷ್ಟಿಕಾಲದಲ್ಲಿ ಉಂಟಾಗುವ ಜ್ಞಾನವಿಕಾಸವನ್ನೂ ಕರಣಕಳೇಬರಾದಿಗಳನ್ನು ಅನಂತರ ಹೊಂದಿದುದರಿಂದುಂಟಾಗುವ ಶಬ್ದಾದಿ ವಿಷಯ ಪ್ರಾವಣ್ಯವನ್ನೂ, ಆಗ ತನಗೆ ಉಂಟಾಗುವ ನಿದ್ರಾರೂಪ ಮೋಹಬುದ್ಧಿಯನ್ನೂ, ಮಧ್ಯೆ ಆಕಸ್ಮಿಕವಾಗಿ ಭಗವತ್ಕೃಪಾಮೂಲಕ ಗುರೂಪದಿಷ್ಟವಾದ ಅಮೋಘವಾದ ರಹಸ್ಯತ್ರಯ ಜ್ಞಾನವನ್ನು ಯಥಾರ್ಥವಾಗಿ ತಿಳಿದು, ಅಕಿಂಚನ್ಯಾನನ್ಯಗತಿಕರಾದವರಿಗೆ ಮುಖ್ಯೋಪಾಯವೆಂದು ತೋರಿಸಿಕೊಟ್ಟ ಭರನ್ಯಾಸನಿಷ್ಠೆಯನ್ನು, ದೇಹಾವಸಾನಾನಂತರ ಅಂತವನಿಗುಂಟಾಗುವ **ಅರ್ಚಿರಾದಿಗತಿ** ವಿರಜಾವಗಾಹನಾದಿ ಮೂಲಕ ಪರಮಾತ್ಮಪ್ರಾಪ್ತಿಯೂ **ತತ್ಕೈಂಕರ್ಯವೂ** ಇವೇ ಮೊದಲಾದವೆಲ್ಲಾ ಸಿದ್ಧೋಪಾಯನಾದ ಅವನ ಕೃಪೆಯಿಂದಲೇ ಪ್ರಾಪ್ತವಾಗಬೇಕೆಂಬುದನ್ನೂ ಅಂತಹ ಶಿಷ್ಯನು ಹೇಗಿರಬೇಕೆಂಬುದನ್ನೂ, ಈ ಗ್ರಂಥದಲ್ಲಿ ಹೇಳಿದೆವು ಎನ್ನುತ್ತಾರೆಂದು ಅವತಾರಿಕೆಯನ್ನು ಕೊಟ್ಟು, **ಮುನ್ಪೆತ್ತ ಜ್ಞಾನಮುಮ್**-ಸೃಷ್ಟಿಗೆ ಮೊದಲು ತಾನು ಹೊಂದಿದ ಜ್ಞಾನಸ್ವರೂಪ ಜ್ಞಾನಗುಣಕನು ಎಂಬ ಜ್ಞಾನವಿಕಾಸವನ್ನು ಎಂದು ಅರ್ಥಮಾಡಿರುತ್ತಾರೆ. ಹಾಗೆಯೇ **ಮೋಗತ್ತುರುಕ್ಕವುಮ್**-ಎಂದರೆ **ಉರುಕ್ಕಲ್,** ನಿದ್ರೆ, ಸೃಷ್ಟ್ಯನಂತರ ಉಂಟಾಗುವ ಶಬ್ದಾದಿ ಪ್ರಾವಣ್ಯರೂಪ ಮೋಹದಲ್ಲಿರುವ ನಿದ್ರೆ ಎಂದೂ ಅರ್ಥಮಾಡಿರುತ್ತಾರೆ. ಈ ಅರ್ಥಗಳೂ ಉಪಾದೇಯಗಳೇ, ಇನ್ನು ಮಿಕ್ಕಾದವರು **ತುರುಕ್ಕಲುಮ್**-ಅಮೋಹದ ನಿವೃತ್ತಿ ಎಂದು ಅರ್ಥಮಾಡಿರುತ್ತಾರೆ.

**ಅಮೋಹದ ನಿವೃತ್ತಿ**-ಎಂದು ಅರ್ಥಮಾಡಿದರೆ, ಸಾರನಿಷ್ಕರ್ಷೆ, ಪ್ರಧಾನ ಪ್ರತಿತಂತ್ರ, ಅರ್ಥಪಂಚಕ ತತ್ವತ್ರಯಾಧಿಕಾರಗಳ ಅರ್ಥಗಳು ಸೂಚಿಸಲ್ಪಟ್ಟವು. ತತ್ವತ್ರಯಾಧಿಕಾರದಲ್ಲಿ ಮೋಹಗಳು, ದೇಹಾತ್ಮ ಭ್ರಮ, ಸ್ವತಂತ್ರಾತ್ಮಭ್ರಮ,

ಜೀವೇಶೈಕ್ಯಭ್ರಮಗಳು ತತ್ತ್ವತ್ರಯದ ಯಥಾರ್ಥ ಜ್ಞಾನದಿಂದ "ಪ್ರಕೃತ್ಯಾತ್ಮಭ್ರಾಂತಿರ್ಗಳತಿ" ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಇದಕ್ಕೆ ಸರಿಹೋಗುವ ಹಾಗೆ "**ಮುಱ್ಪೆತ್ತಜ್ಞಾನಮುಮ್**" ಎಂಬುದಕ್ಕೆ ಜಾಯಮಾನಕಟಾಕ್ಷ ಮೊದಲುಗೊಂಡು ಆಚಾರ್ಯ ಸನ್ನಿಧಿಯಲ್ಲಿ ಪಡೆದ ಜ್ಞಾನವೆಂದು ಇತರ ವ್ಯಾಖ್ಯಾತೃಗಳು ಅರ್ಥಮಾಡಿದರು. ಈ ಜ್ಞಾನದಲ್ಲೇ ಉಪಾಯ ವಿಭಾಗ ಅಧಿಕಾರ ವಿಭಾಗ, ಅಕಿಂಚನ್ಯಾನನ್ಯಗತಿತ್ವಜ್ಞಾನವಿದ್ದವರಿಗೆ ಸುಲಭೋಪಾಯವಾದ ಸಪರಿಕರ ಪ್ರಪತ್ತಿಯೂ ಹೇಳಲ್ಪಟ್ಟಿರುವದರಿಂದ ಪರಿಕರ ವಿಭಾಗ ಮತ್ತು ಸಾಙ್ಗ ಪ್ರಪದನ ಮೊದಲುಗೊಂಡು ಪ್ರಭಾವರಕ್ಷಾಧಿಕಾರಾರ್ಥಗಳೆಲ್ಲಾ ಅಡಗಿದವು. ಯಾವಾಗ ಪರಮಪುರುಷಾರ್ಥವೂ ಅದನ್ನು ಹೊಂದುವ ಉಪಾಯವೂ ವಿದಿತವೋ, ಆಗ ಶಬ್ದಾದಿ ಪ್ರಾಪ್ಯವೂ ಅಲ್ಪಾಸ್ಥಿರವಾಗಿಯೂ ದುಃಖಮಿಶ್ರವಾಗಿಯೂ ಇರುವ ಫಲದಾಯಕವೆಂಬ ಜ್ಞಾನದಿಂದ ಇವುಗಳಲ್ಲಿ ತ್ಯಾಜ್ಯಪ್ರಾಯವೆಂದು ತಿರಸ್ಕಾರಭಾವವನ್ನು ಎಂಬರ್ಥ ಉಂಟಾಗುತ್ತದೆ. ಇವುಗಳನ್ನು ತಿಳಿಸುವ ಜ್ಞಾನವನ್ನು ಈ ರಹಸ್ಯತ್ರಯಗಳ ರಹಸ್ಯಾರ್ಥ ಜ್ಞಾನದಿಂದುಂಟಾಗುವದರಿಂದ ಇದೇ ಸಾರತಮಜ್ಞಾನವಾಗಿ ಎಲ್ಲಾ ಆಚಾರ್ಯರೂ ಇದೇ ಸಾರತಮವೆಂದು ಭಾವಿಸಿ ತಮ್ಮ ಶಿಷ್ಯರುಗಳಿಗೆ ಇದನ್ನೇ ಮುಖ್ಯವಾಗಿ ಉಪದೇಶಿಸುವರೆಂಬ ಭಾವವು **ಮೂನ್ರುರೈಯಿಲ್** ಎಂಬ ಪ್ರಯೋಗದಿಂದ ಸೂಚಿತವು. ಮೂನ್ರುರೈವೆಂಬುದರಿಂದ ಮೂಲಮನ್ತ್ರ ದ್ವಯ ಚರಮ ಶ್ಲೋಕಗಳಲ್ಲಿ ಅಡಗಿರುವ ಅರ್ಥಗಳು ಪ್ರತ್ಯಧಿಕಾರದಲ್ಲೂ ಪ್ರದರ್ಶಿಸಲ್ಪಟ್ಟ ಅರ್ಥಗಳು ಸೂಚಿತವು.

**ತನ್ಪೆತ್ತ ತನ್ಮೆಯುಮ್**-ಎಂಬ ಪಾಠವನ್ನು ಶ್ರೀಸಾರದೀಪಿಕೆಯವರು ಅನುಮೋದಿಸಿ ತನ್ನ ಸ್ವರೂಪವನ್ನು ಯಥಾರ್ಥವಾಗಿ ತಿಳಿಯೋಣವನ್ನೂ ಎಂದು ಅರ್ಥ ಮಾಡಿರುತ್ತಾರೆ. ಇದರಿಂದ ಶೇಷತ್ವಜ್ಞಾನ ಸ್ವಸಿಷ್ಟಾಭಿಜ್ಞಾನಾರ್ಥಗಳನ್ನು ಬಹುಶಃ ಮನಸ್ಸಿನಲ್ಲಿಟ್ಟು ಹಾಗೆ ಅರ್ಥಮಾಡಿರಬಹುದು. ಇತರರು **ತನ್ಪತ್ತ ತನ್ಮೈಯುಮ್**-ಎಂಬ ಪಾಠವನ್ನು ಅಂಗೀಕರಿಸಿ, ತನ್ಮೈ ಅತ್ತ ಎಂದು ವಿಭಾಗಿಸಿ, ಅಪಕರ್ಷವಿಲ್ಲದ ತನ್ಮೈ ಎಂದರೆ ಸ್ವಭಾವವನ್ನೂ ಎಂದು ಅರ್ಥಮಾಡಿರುತ್ತಾರೆ. ಈ ರಹಸ್ಯತ್ರಯದಲ್ಲಿ ಪ್ರೋಕ್ತವಾದ ಉಪಾಯನಿಷ್ಠಗೆ ಅಪಕರ್ಷಗಳು ಯಾವುವು ಎಂದರೆ ಅನ್ಯಾಧೀನತಾಶ್ರಯಣವೂ, ಸ್ವಸ್ವಾತಂತ್ರ್ಯವೂ, ಇವೆರಡೂ **ಅತ್ತ**-ಇಲ್ಲದಿರುವ ಸ್ವಭಾವವೆಂಬುದು ಇತರರ ಅರ್ಥವು.

**ತಾಳ್ದವರ್ಕ್ಕು**-ಎಂದರೆ ತುಂಬಾ ಹೀನವಾದ ಅವಸ್ಥೆಯಲ್ಲಿರುವವರಿಗೆ, ಇದರಿಂದ ಆಕಿಂಚನ್ಯ ಅನನ್ಯಗತಿತ್ವಯುಕ್ತವರಾಗಿ ಅಶಕ್ತರಾಗಿ ಸ್ವಾಮಿಯನ್ನು ಆಶ್ರಯಿಸಿದವರೆಂಬ ಅರ್ಥವು ಸೂಚಿಸಲ್ಪಟ್ಟಿತು; ಇಂತವರಿಗೆ **ಈಯುಮ್**-ಕೊಡುವ, **ತನಿತ್ತಗವುಮ್**-ಅಪ್ರತೀಯಮಾನ ಕೃಪೆಯನ್ನೂ, ಯಾರ ಕೃಪೆ ಎಂಬುದಕ್ಕೆ

**ಕೃಪಯಾನಿಸ್ಪೃಹೋಪದೇಶ್**-ಎಂಬಲ್ಲಿ ಹೇಳಿರುವ ಎಂದು ಅರ್ಥಮಾಡಿ ಆಚಾರ್ಯ ಕೃಪೆ ಎಂದು ಹೇಳಲ್ಪಟ್ಟಿತು; ಅವರು ಮಾಡುವ ಉಪದೇಶವೇ ಅವರ ಕೃಪೆಯು, ಅದನ್ನು ಎಂಬ ಭಾವವು; ಅಥವಾ ಭಗವತ್ಕೃಪೆ ಎಂದೂ ಅರ್ಥಮಾಡ ಬಹುದು; ಆಗ ನಿರ್ಯಾಣ, ಗತಿಚಿಂತನ ಪರಿಪೂರ್ಣ ಬ್ರಹ್ಮಾನುಭವವನ್ನು ಹೇಳುವ ಅಧಿಕಾರಾರ್ಥಗಳು ಇಲ್ಲಿ ತೋರಿಬರುತ್ತವೆ.

**ಮನ್ಪತ್ತಿ ನಿನ್ರ ವಗೈಯುಮ್**-ಸರ್ವಸಮರ್ಥನಾಗಿ ಸ್ವತಂತ್ರನಾಗಿ ರಾಜಾಧಿ ರಾಜನಾದವನು ಅಥವಾ ಶೇಷಭೂತನಾಗಿರುವವನು ಶೇಷಿಯನ್ನಾಶ್ರಯಿಸಿ ಶೇಷಿಗೆ ಅನವರತ ಕೈಂಕರ್ಯ ಮಾಡುವದೇ ಸ್ವರೂಪಪ್ರಾಪ್ತಿ ಎಂದು ಹೇಳುವ ಮೂಲ ಮನ್ತ್ರಾಧಿಕಾರಾರ್ಥವನ್ನೂ ಎಂದು ಅರ್ಥಮಾಡಬಹುದು. ಇದೂ ಅಲ್ಲದೆ ಕಷ್ಟತರ ವಾದ ಉಪಾಯಾನ್ತರವಾದ ಉಪಾಸನ ಸ್ಥಾನದಲ್ಲಿ ತಾನೇ ನಿಂತು ಸಿದ್ಧೋಪಾಯ ನಾಗಿ ಮೋಕ್ಷಫಲವನ್ನು ಕೊಡುವ ಕೃಪೆಯನ್ನೂ ಎಂದೂ ಅರ್ಥಮಾಡಬಹುದು. **ಮನ್**-ಎಂದು ಎನಿಸುವವನು, ಅವನನ್ನು ಪತ್ತಿ-ಆಶ್ರಯಿಸಿ, ಆತನಲ್ಲಿ ಶರಣಾಗತಿ **ಯನ್ನು ಮಾಡಿ** ನಿಂತಿರುವ **ಪ್ರಕಾರವನ್ನೂ**, ಇದು ದ್ವಯಮನ್ತ್ರಾರ್ಥವನ್ನು **ಸೂಚಿಸುತ್ತದೆ; ಅಥವಾ** ಕೃತಕೃತ್ಯಾಧಿಕಾರ, **ಸ್ಥಾನವಿಶೇಷಾಧಿಕಾರಾರ್ಥಗಳನ್ನು ಬೋಧಿಸುತ್ತ**ದೆಂದೂ ಅರ್ಥಮಾಡಬಹುದು.

ಹೀಗೆ ಇವೆಲ್ಲಾ ಅಧಿಕಾರಾರ್ಥಗಳನ್ನೆಲ್ಲಾ, **ಉರ್ೈಗಿನ್ರ**-ಉಪದೇಶಿಸುವ, **ಮರೈಯುವರ್ಪಾಲ್**-ವೈದಿಕರಾದ ಮಹಾಭಾಗವತೋತ್ತಮರಾದ ಆಚಾರ್ಯರುಗಳ ವಿಷಯದಲ್ಲಿ, ಇದರಿಂದ ಆಚಾರ್ಯ ಶಿಷ್ಯ ಕೃತ್ಯಧಿಕಾರಗಳಾರ್ಥಗಳು ಬೋಧಿತವು. **ಶಿನ್ಪತ್ತಿಯೆನ್ಪರ್ಯ**-ಕೋಪವನ್ನು ಮಾಡಿದರೆ ಫಲವೇನು? ಅವರುಗಳು **ಸ್ಖಾಲಿತ್ಯೇ ಶಾಸಿತಾರಃ**-ಶಾಸ್ತ್ರವಿರುದ್ಧವಾಗಿ ನಡೆದರೆ, ಅದು ಸರಿಯಲ್ಲವೆಂದು ಹಿತಕ್ಕಾಗಿ ಹೇಳುವವರು; ಅಂತವರ ವಿಷಯದಲ್ಲಿ ಕೋಪವು ನಿಷ್ಪ್ರಯೋಜನವೆಂಬ ಭಾವವು ಅಷ್ಟುಮಾತ್ರವೇ ಅಲ್ಲವು; ಅಂತಹ ಕೋಪವು ಪರಮನಿಂದ್ಯವು; "**ಕ್ರುದ್ಧಃ ಪಾಪಂ ನಕುರ್ಯಾತ್ಕಃ ಕ್ರುದ್ಧೋಹನ್ಯಾನ್ಗುರೂನಪಿ**" ಎಂಬಲ್ಲಿ ಹೇಳಿರುವ ಹಾಗೆ ಅನರ್ಥಸಾಧನವು; ಆದುದರಿಂದ ಅವರುಗಳು ಪರಮಹಿತಕ್ಕಾಗಿ ಪ್ರಮಾಣ ಶರಣರಾಗಿ ಹೇಳುತ್ತಾರೆಂದು ಭಾವಿಸತಕ್ಕದ್ದೇ ವಿನಾ ಕೋಪಿಸಬಾರದೆಂಬ ಭಾವವು: ಮರ್ಮೋದ್ಘಾಟನೆಗಾಗಿ ಹೇಳಲಿಲ್ಲವೆಂಬ ತಾತ್ಪರ್ಯವು, ಇದು ನಿಂದೆಯು ಎಂದು ಹೇಳು ವವರಿಗಾಗಿ ಹೇಳಲಿಲ್ಲವು. ಹಾಗಾದರೆ ಇನ್ನೆಂತಾವರಿಗೆ ಹೇಳಿದುದು ಎಂದರೆ ಹೇಳು ತ್ತಾರೆ. **ಶೀರರಿವೋರ್ಕ್ಕು ಶೆಪ್ಪಿನಮೇ**-ಈ ಗ್ರಂಥದಲ್ಲಿನ ಗುಣಗ್ರಾಹಿಗಳಾಗಿ, ಶಾಸ್ತ್ರ ಪ್ರಮಾಣದಲ್ಲಿ ಆದರವುಳ್ಳವರಾಗಿರುವ ಮುಮುಕ್ಷುಗಳ ಯೋಗಕ್ಷೇಮಕ್ಕಾಗಿ ಹೇಳಿದೆವು. ಅಥವಾ ಪರಮಾತ್ಮನ ಕಲ್ಯಾಣ ಗುಣಗಣದಲ್ಲಿ ಆಶ್ರಯೋಪಯುಕ್ತ ಗಳಾದ ಮಹತ್ತಾದ ಗುಣಗಳನ್ನೂ ಅರಿತವರಿಗಾಗಿ ಹೇಳಿದೆವು ಎಂದೂ ಅರ್ಥ ಮಾಡಬಹುದು.

**ನಿರ್ವಿಷ್ಟಂ ಯತಿಸಾರ್ವಭೌಮ ವಚಸಾ ಮಾವೃತ್ತಿಭಿರ್ಯೌವನಮ್ ।**
**ನಿರ್ಧೂತೇತರ ಸಾರತಂತ್ರ್ಯ ನಿರಯಾ ನೀತಾ ಸ್ಸುಖಂ ವಾಸರಾಃ ॥**

---

**ಶಿಕ್ಷೈನಮೋ**-ಎಂಬಲ್ಲಿರುವ ಅವಧಾರಣದಿಂದ ಯಾವ ಪ್ರಯೋಜನಾಂಶದಲ್ಲೂ ಮನಸ್ಸಿಡದೇ, ಭಗವತ್ಪ್ರೀತಿ ಪರಪ್ರಯೋಜನ ಇವುಗಳನ್ನು ಮಾತ್ರ ಮನಸ್ಸಿನಲ್ಲಿಟ್ಟು ಹೇಳಿದವೇ ವಿನಾ ಖ್ಯಾತಿ ಲಾಭ ಪೂಜೆಗಳಿಗಾಗಿ ಹೇಳಲಿಲ್ಲವೆಂಬ ಭಾವವು ತೋರಿಬರುತ್ತದೆ ಈ ಅರ್ಥಗಳು ಕೆಲವರಿಗೆ ರುಚಿಸದೆ ಕೋಪವಾಡಿದರೆ ಅದರಿಂದಃ ಏನು ಪ್ರಯೋಜನವು? **ಶಿನ್ನತ್ತಿಯರ್ಕ್ಷರ್ಯ**-ತಮಗೆ ಅದರಿಂದ ಏನೂ ದುಃಖವಿಲ್ಲವೆಂಬ ಭಾವವು ತೋರಿಬರುತ್ತದೆ. ಮುಂದೆ ಈ ಅರ್ಥವನ್ನೇ ಇನ್ನೊಂದು ವಿಧವಾಗಿ " ವೆಳ್ಳೈಪೆರಿಮುಗರ್ " ಎಂಬ ಪಾಶುರದಲ್ಲಿ ಉಪಪಾದಿಸುತ್ತಾರೆ. ಹಾಗೆ ಕೋಪಿಸುವರು ಇದರ ಸಾರತಮ್ಯತ್ವವನ್ನು ಅರಿಯಬಲ್ಲರೇ? " **ಲವಣವಣಿಜಃ ಕರ್ಪೂರಾರ್ಘಂ ಕಿಮಿತ್ಯಭಿಮನ್ಯತೇ**-ಉಪ್ಪು ಮಾರುವವನು ಪಚ್ಚಕರ್ಪೂರದ ಪರಿಮಳವನ್ನು ಅಭಿಮಾನಿಸುವನೇ ? ಎಂಬ ಭಾವವೂ ತೋರಿಬರುತ್ತದೆ. (ಸಙ್ಕಲ್ಪ ಸೂರ್ಯೋದಯ೨. ೨೯) ಕೋಪದಿಂದ ಗ್ರಂಥಕರ್ತರಿಗೆ ಏನೂ ಆಗದಿದ್ದರೂ, ಅವರಿಗಾದರೋ " **ಕ್ರೋಧಾದ್ಭವತಿ ಸಮ್ಮೋಹಃ ಸಮ್ಮೋಹಾಸ್ಸ್ಮೃತಿ ವಿಭ್ರಮಃ ಸ್ಮೃತಿ ಭ್ರಂಶಾದ್ಬುದ್ಧಿನಾಶಃ ಬುದ್ಧಿನಾಶಾತ್ಪ್ರಣಶ್ಯತಿ** " ಎಂದು ಗೀತೆಯಲ್ಲಿ ಹೇಳಿರುವ ಹಾಗೆ ಅನರ್ಥಪರಂಪರೆಗಳುಂಟು. "**ಸ್ವಹಸ್ತೇನೋತ್ಕ್ಷಿಪ್ತೈಸ್ಸಖಲು ನಿಜಗಾತ್ರೇಷು ಬಹುಳಂ ಗಲದ್ಭಿರ್ಜಂಬಾಲೈರ್ಗಗನತಲ ಮಾಲಿಂಪತಿ ಜಡಃ** " ಎಂದು ಸಙ್ಕಲ ಸೂರ್ಯೋದಯದಲ್ಲಿ ಹೇಳಿರುವದು ಅನುಸಂಧೇಯವು (೨. ೩೨)

**ಅವತಾರಿಕೆಯು:**—ಹಿಂದಿನ ಪಾಶುರದಲ್ಲಿ ಗುಣಗ್ರಾಹಿಗಳಿಗಾಗಿ ಈ ಗ್ರಂಥವನ್ನು ಹೇಳಿದೆವು. **ಶೀರರಿವೊರ್ಕ್ಕು ಶಿಕ್ಷೈನಮೋ**-ಎಂದು ಹೇಳಲ್ಪಟ್ಟಿತು. ಲೋಕದಲ್ಲಿ ಗ್ರಂಥರಚನೆಯನ್ನು ಖ್ಯಾತಿ ಲಾಭ ಪೂಜೆಗಳಿಗಾಗಿ ಮಾಡುತ್ತಾರೆ. ಹೀಗಿರುವಾಗ ಅನನ್ಯಪ್ರಯೋಜನರಾಗಿ ಲೋಕಹಿತಕ್ಕಾಗಿಯೂ ಭಗವತ್ಪ್ರೀಣನಕ್ಕಾಗಿಯೂ ಬರದಿದ್ದು ಎಂಬುದು ಹೇಗೆ ? ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ಹೇಳುತ್ತಾರೆ. ಲೋಕದಲ್ಲಿ ಮನುಜರು ಯೌವ್ವನವನ್ನೆಲ್ಲಾ ಸ್ತ್ರೀಸಂಗದಲ್ಲೇ ಕಳೆಯುತ್ತಾರೆ. ಹಾಗೆಯೇ ನನಗೂ ಅಂತಹ ಸುಖ ಉಂಟು. ಆದರೊಂದಿಗೇನೇ ಯೌವನವನ್ನೇಲ್ಲಾ ಕಳೆದನು ಎನ್ನುತ್ತಾರೆ ; ಅದು ಯಾವುದೆಂದರೆ—

**ಅರ್ಥವು:—ಯತಿ ಸಾರ್ವಭೌಮವಚಸಾಂ**-ನಮ್ಮ ಸಿದ್ಧಾಂತ ಸ್ಥಾಪಕರಾದ ಶ್ರೀರಾಮಾನುಜ ಯತಿಶ್ರೇಷ್ಠರ ಶ್ರೀಭಾಷ್ಯ, ಶ್ರೀಗೀತಾಭಾಷ್ಯ, ಶ್ರೀಶರಣಾಗತಿ ಗದ್ಯ ಮೊದಲಾದ ಅಮೋಘ ವಾಕ್ಕುಗಳ, **ಆವೃತ್ತಿಭಿಃ**-ಪುನಃ ಪುನಃ ಪಠನ

ಪ್ರವಚನ, ಅವುಗಳಿಗೆ ಉಪಪಾದನ ರೂಪಗಳಾದ ಭಾವಪ್ರಕಾಶಿಕಾ, ತಾತ್ಪರ್ಯ ಚಂದ್ರಿಕಾ, ಮೊದಲಾದ ಗ್ರಂಥ ನಿರ್ಮಾಣಗಳಿಂದ **ಯೌವನವಮ್**-ಯೌವನವನ್ನೆಲ್ಲಾ, ನಿರ್ವಿಷ್ಟಂ ಕಳೆಯಲ್ಪಟ್ಟಿತು. **ಯೌವನ**ನೆಂಬ ಪ್ರಯೋಗದಿಂದ, ಆವೃತ್ತಿ ಶಬ್ದವು ಸ್ತ್ರೀಲಿಂಗ ವಾಗಿರುವದರಿಂದಲೂ, ಪುರುಷನು ಯೌವನವನ್ನೆಲ್ಲಾ ಸದಾ ಸ್ತ್ರೀಸಂಗದಲ್ಲೂ ತನ್ನ ಪತ್ನಿಯೊಂದಿಗೆ ಭೋಗ ಸುಖಗಳನ್ನು ಹೇಗೆ ಅನುಭವಿಸು ವನೋ ಹಾಗೆ ಅನುಭವಿಸಿ ಆನಂದ ಹೊಂದಿದನೆಂಬ ಭಾವವು ತೋರಿಬರುತ್ತದೆ. ಇದನ್ನೇ ಅನುಭವಿಸಿದೆ ಎಂದರೆ ದೇಹಯಾತ್ರೆ ಮೊದಲಾದವುಗಳಿಗೆ ಬೇಕಾದ ದ್ರವ್ಯಾರ್ಜನೆ ಮೊದಲಾದ ಇತರ ಪಾರತಂತ್ರ್ಯ ವ್ಯಾಪಾರವನ್ನು ಹೊಂದಲಿಲ್ಲವೋ ? ಎಂದರೆ ಅದನ್ನು ಪರಿತ್ಯಾಗಮಾಡಿದೆನೆನ್ನುತ್ತಾರೆ. **ವಾಸರಾಃ**-ದಿನಗಳು **ನಿರ್ಧೂತೇತರ ಪಾರತಂತ್ರ್ಯ ನಿರಯಾಃ**-ಕೊಡವಲ್ಪಟ್ಟ, ಹೋಗಲಾಡಿಸಲ್ಪಟ್ಟ, ಇತರರಿಗೆ ಪರತಂತ್ರನಾಗಿರುವ ನರಕಗಳುಳ್ಳವುಗಳಾಗಿ, **ಸುಖಂ**-ಸುಖವಾಗಿ **ನೀತಾಃ**-ಕಳೆಯಲ್ಪಟ್ಟವು. ಯಾವನ್ನದಲ್ಲೂ ಇತರರಿಗೆ ಪರತಂತ್ರನಾಗಿರುವ ನರಕಬಾಧೆ ಯಿಲ್ಲದವನಾಗಿ ಸುಖವಾಗಿ ದಿನಗಳನ್ನು ಕಳೆದನು. ಇದರಿಂದ ಐಹಿಕಾಭಿಲಾಷೆಯು ನರಕವೆಂದೂ ಅದಿಲ್ಲದವನಾಗಿ ಸುಖವಾಗಿ ಕಾಲವನ್ನು ಕಳೆದನು. ಅದೇನೋ ಸರಿಯೇ ; ನಿಮ್ಮ ಸಿದ್ಧಾಂತವನ್ನು ಅವಲಂಬಿಸದೆ, ಅನುಮೋದಿಸದೆ ಇರುವವರ ವಿಷಯದಲ್ಲಿ **ಕ್ರೋಧವನ್ನು ತೋರಿಸಿ**, ಶತದೂಷಣಿ, ಪರಮತಭಂಗ, ಸಙ್ಕಲ್ಪ **ಸೂರ್ಯೋದಯ, ನ್ಯಾಯಸಿದ್ಧಾಂಜನಾದಿ** ಗ್ರಂಥಗಳಲ್ಲಿ ನಿಂದಿಸಿರುವದು **ನ್ಯಾಯವೋ ?** ಎಂದರೆ, **ಸತಾಂ**-ಶಾಸ್ತ್ರಾರ್ಥಗಳನ್ನು ಯಥಾರ್ಥಗಳನ್ನು ಗ್ರಹಿಸಿ, ತದನುಗುಣ ವಾಗಿ ವರ್ತಿಸುವ ಸತ್ಪುರುಷರಾದ ಪರಮೈಕಾಂತಿಗಳ, **ಪಸೃತ್ತಿಂ**-ಪ್ರಸನ್ನತೆಯನ್ನು, ಅನುಗ್ರಹವನ್ನು, **ಅಙ್ಗೀಕೃತ್ಯ**-ಅನುಮೋದಿಸಿ, **ಅಸತಾಂ**-ಸತ್ಪುರುಷರಲ್ಲದೆ, ಶಾಸ್ತ್ರವಾಕ್ಯಗಳಿಗೆ ಅಪಾರ್ಥವನ್ನು ಕಲ್ಪಿಸುವ ಮತ್ತು ಶಾಸ್ತ್ರ**ಪಙ್ತ್ತಿ**ಗಳನ್ನು ಒಪ್ಪದ ಕುದೃಷ್ಟಿಬಾಹ್ಯರ, **ಗರ್ವೋಪಿ**-ಅಹಂಕಾರವನ್ನು ಕೂಡ, ಅವರುಗಳು **ಪುನಃ** ತಮ್ಮ ಕುವಾದಗಳು ತಲೆ ಎತ್ತದ ಹಾಗೆ, **ನಿರ್ವಾಪಿತಃ**-ನಿರಸನ **ಮಾಡಲ್ಪಟ್ಟಿತು.** ಧೈರ್ಯದಿಂದ ಅಪಾರ್ಥಗಳ ಖಂಡನೆಯೂ, ಯಥಾರ್ಥಗಳ ಅನುಮೋದನೆಯೂ **ಸತ್ಪುರುಷನಾದ** ಶಾಸ್ತ್ರಜ್ಞನ ಇತಿಕರ್ತವ್ಯತೆಯಾದುದರಿಂದ **ಮಾಡಲ್ಪಟ್ಟಿತು ಎಂದರು.** ಇದು ಕ್ರೋಧದ ಪ್ರಕಟನೆಯು ಸರ್ವಾತ್ಮನಾ ಅಲ್ಲವೆಂಬ ಭಾವವು. ಯೌವ್ವನ ವನ್ನೇನೋ ಹಾಗೆ ಕಳೆದೆನು ಎಂದು ಹೇಳಿದಿರಿ. ಆದರೆ ಮಿಕ್ಕ ವಯಸ್ಸಿನ ವಿಷಯ ಹೇಗೆ? ಎಂದರೆ **ಶೇಷಾಯುಷ್ಯಪಿ**-ಮಿಕ್ಕ ಆಯುಸ್ಸಿನಲ್ಲಾದರೋ, **ಶೇಷಿದಂಪತಿ ದಯಾಕಿಙ್ಕರಾಂ**-ಇಬ್ಬರೂ ಶೇಷಿಗಳಾಗಿಯೂ ಲೋಕದ ದಿವ್ಯದಂಪತಿ ಗಳಾಗಿರುವ ಲಕ್ಷ್ಮೀನಾರಾಯಣರ ದೀಕ್ಷಾವ್ರತವನ್ನು, ಅದು ಯಾವುದೆಂದರೆ " ಸಕೃದೇವ ಪ್ರಪನ್ನಾಯ " ಎಂಬಲ್ಲೂ, " ಸರ್ವಧರ್ಮಾ ಪರಿತ್ಯಜ್ಯವೆಂಬಲ್ಲೂ

**ಅಙ್ಗೀಕೃತ್ಯ ಸತಾಂಪ್ರಸತ್ತಿ ಮಸತಾಂ ಗರ್ವೋಽಪಿ ನಿರ್ವಾಪಿತ |**
**ಶ್ಶೇಷಾಯುಷ್ಯಪಿ ಶೇಷಿದಂಪತಿ ದಯಾ ದೀಕ್ಷಾ ಮುದೀಕ್ಷಾಮಹೇ ||೭೮||**

---

ತಮ್ಮ ವ್ರತದೀಕ್ಷೆ ಎಂದು ಪ್ರತಿಜ್ಞೆಯನ್ನು, **ಉದೀಕ್ಷಾಮಹೇ**-ತಾವು ಎದುರ ನೋಡುತ್ತಿರುವದಾಗಿ ಹೇಳಿಕೊಂಡರು. ಇದರಿಂದ ತಮಗೆ ಖ್ಯಾತಿಲಾಭ ಪೂಜೆ ಗಳಲ್ಲಿ ಯಾವದರಲ್ಲೂ ಮಮತೆಇಲ್ಲವೆಂದೂ ಶ್ರೀಯತಿವರ್ಯರ ದಿವ್ಯಸೂಕ್ತಿಗಳನ್ನು ಪ್ರಚರಿಸುವದೇ ತಮ್ಮ ಮುಖ್ಯಕರ್ತವ್ಯವಾಗಿ ಭಾವಿಸಿದರೆಂದೂ ಅದಕ್ಕೆ ವಿರುದ್ಧವಾದ ಕುವಾದಗಳನ್ನೆಲ್ಲಾ ನಿರಸನ ಮಾಡುವದೂ ತಮ್ಮ ಕರ್ತವ್ಯವೆಂದು ಭಾವಿಸಿದರೆಂದೂ, ಶ್ರೀಕೃಷ್ಣಾರ್ಪಣಮಸ್ತು ಎಂದು ಹೇಳಿ ಆತನ ದಯೆ ಎಂದಿಗೆ ಬಂದೀತೆಂದು ಕಾಲ ನಿರೀಕ್ಷಣೆ ಮಾಡಿಕೊಂಡಿರುತ್ತೇನೆಂದೂ ಹೇಳಿಕೊಳ್ಳುತ್ತಾರೆ.

**ಉಪಪಾದನೆಯು:**—ಶ್ರೀಯತಿವರ್ಯರು ನಮ್ಮ ಸಿದ್ಧಾನ್ತ ಸ್ಥಾಪಕರಾದುದ ರಿಂದ ಅವರನ್ನು ಗುರುವೆಂದು ಭಾವಿಸಿ ಅವರ ಗ್ರಂಥಗಳ ಪಠನಪ್ರವಚನ ಉಪಪಾದನ ಮೊದಲಾದವುಗಳಲ್ಲೇ ತಮ್ಮ ಮುಖ್ಯ ಕಾಲವನ್ನೆಲ್ಲಾ ತಾವು ಕಳೆದುದಾಗಿ ಹೇಳು ವದರಲ್ಲಿ ಖ್ಯಾತಿ ಲಾಭ ಪೂಜೆ ಮೊದಲಾದವುಗಳಿಗೆ ಈ ಷದಪಿ ತಾವು ಗಮನ ಕೊಡಲಿಲ್ಲವೆಂದು ತಿಳಿಸುತ್ತಾರೆ. ಹೀಗೆ ಹೇಳಿದುದನ್ನು ಎಲ್ಲಾ ಆಚಾರ್ಯ ಸ್ಥಾನೀ ಯರು ತಮಗೆ ಮೇಲು ಪಙ್ತಿಯನ್ನಾಗಿ ಭಾವಿಸತಕ್ಕದ್ದೆಂಬುದೂ ತೋರಿಬರುತ್ತದೆ.

ಅದೇನು, ಶ್ರೀ ಭಾಷ್ಯಕಾರರ ದಿವ್ಯಸೂಕ್ತಿಗೆ ಅಷ್ಟು ಮಹಿಮೆಯನ್ನು ಹೇಳಿ ಅದಕ್ಕಾಗಿಯೇ ನಿಮ್ಮ ಯೌವನವನ್ನೆಲ್ಲಾ ಕಳೆದುದು ಎಂದರೆ, ಅವರು **ಯತಿ ಸಾರ್ವಭೌಮರು**-ಯತಿಗಳಲ್ಲೆಲ್ಲಾ ಶ್ರೇಷ್ಠರು. **ಪಾರಾಶರ್ಯರಾದ** ಶ್ರೀ ವೇದ ವ್ಯಾಸರು ಸಾಮಾನ್ಯರಲ್ಲವು. ಸಮಸ್ತವೇದ ಭಾಗಗಳೇನು, ಉಪನಿಷತ್ತುಗಳೇನು, ಇವುಗಳನ್ನೆಲ್ಲಾ "ಆಲೋದ್ಯ ಸರ್ವಶಾಸ್ತ್ರಾಣಿ ವಿಚಾರ್ಯಚ ಪುನಃ ಪುನಃ" ಎಂಬಲ್ಲಿ ಹೇಳಿರುವ ಹಾಗೆ ಆಗಮೋತ್ಥ ಜ್ಞಾನವೇನು ವಿವೇಕೋತ್ಥ ಜ್ಞಾನವೇನು ಇವುಗಳ ಬಲದಿಂದ ಸಮಸ್ತ ಕುವಾದ ಪೂರ್ವಪಕ್ಷಗಳನ್ನು ಖಂಡಿಸಿ, ಪರಸ್ಪರ ವಿಘಾತಗಳಿಲ್ಲದೆ ಎಲ್ಲಾ ಉಪನಿಷತ್ತುಗಳಿಗೂ ಸಾಮಂಜಸ್ಯವನ್ನುಂಟುಮಾಡಿ ಬ್ರಹ್ಮಸೂತ್ರಗಳನ್ನು ರಚಿಸಿದವರು ಶ್ರೀ ವೇದವ್ಯಾಸರು. ಅವುಗಳ ಯಥಾರ್ಥಗಳಾದ ಭಾವಗಳನ್ನು ಕಂಡು ಹಿಡಿದು, ಪೂರ್ವಪಕ್ಷಗಳನ್ನು ಪಪಾದಿಸಿ ಅವುಗಳನ್ನು ಅನಂತರ ನಿರಾಕರಿಸಿ ಸರಿಯಾದ ಅರ್ಥಗಳನ್ನು ತಿಳಿಸಿ "ಸರ್ವಂಸಮಂಜಸಮ್" ಎಂದು ನಿಗುಮನದಲ್ಲಿ ಹೇಳಿದವರು ಶ್ರೀ ಭಾಷ್ಯಕಾರರಾದುದರಿಂದ **ಯತಿಸಾರ್ವಭೌಮರೆಂದು** ಹೇಳಿ, ಅಂತವರ ದಿವ್ಯಸೂಕ್ತಿಗಳ ಆವೃತ್ತಿಗೇ ಯವ್ವನವನ್ನೆಲ್ಲಾ ಕಳೆದನು ಎಂದು **ವಚಸಾಂ ಆವೃತ್ತಿಭಿರ್ಯೌವನಮ್**-ಎಂದು ಹೇಳಿದರು- ಸಙ್ಕಲ್ಪ ಸೂರ್ಯೋದಯದಲ್ಲಿ ಇವರನ್ನೆ ತಮಗೆ ಪರಮಾಚಾರ್ಯ ಸ್ಥಾನವಲ್ಲಿಟ್ಟುಕೊಂಡು ತಾವು ಅವರಿಗೆ ಶಿಷ್ಯರಾಗಿ

ರುವ ಪಾತ್ರವನ್ನು ಅಂಗೀಕರಿಸಿ, ಗುರುಗಳು ಶ್ರೀ ಭಾಷ್ಯೋಕ್ತಿಯ ಸರಣಿಯನ್ನನು ಸರಿಸಿ ಮಾಡಿದ ಇತರ ಸಿದ್ಧಾನ್ತಗಳ ನಿರಾಕರಣೆಯನ್ನು ಮಾಡಿದುದಾಗಿ ಹೇಳಿ ಕೊಂಡಿರುತ್ತಾರೆ. ಹೇಗೆಂದರೆ "**ನಿಖಿಲ ಕುಮತಿ ಮಾಯಾ ಶರ್ವರೀ ಬಾಲ ಸೂರ್ಯಃ ನಿಗಮ ಜಲಧಿವೇಲಾ ಪೂರ್ಣಚನ್ದ್ರೋ ಯತೀನ್ದ್ರಃ**" ವೇದಗಳಿಗೆ ಅಪಾರ್ಥಗಳನ್ನು ಹೇಳುವವರ ಅಜ್ಞಾನವೆಂಬ ರಾತ್ರಿಗೆ ಬಾಲಸೂರ್ಯ್ಯರ ಹಾಗೆ ಇರುವವರು; ಮತ್ತು ವೇದಗಳೆಂಬ ಅಪಾರ ಸಮುದ್ರವು ಸರಿಯಾದ ಅರ್ಥವನ್ನು ಹೇಳಿದರೆಂಬ ಸಂತೋಷದಿಂದ ಅದು ಉಕ್ಕುವ ಹಾಗೆ ಮಾಡುವ ಪೂರ್ಣಚಂದ್ರ ರೂಪರು ತಮ್ಮ ಗುರುಗಳಾದ ಶ್ರೀರಾಮಾನುಜರೆಂದು ಹೇಳಿ, ಅವರು ಸಿದ್ಧಾನ್ತವನ್ನು ಸ್ಥಾಪಿಸಿ ಹಾಕಿದ ಧ್ವಜಪಟವನ್ನು "**ಹೃದ್ಯಾ ಹೃತ್ಪದ್ಮಸಿಂಹಾಸನ**"ವೆಂಬ ಶ್ಲೋಕದಲ್ಲಿ ಕೊಂಡಾಡಿರುತ್ತಾರೆ. (ಈ ಶ್ಲೋಕಾರ್ಥಕ್ಕೆ ಗುರುಪರಂಪರಾಸಾರದ ೧೧೬ನೆಯ ಪುಟ ನೋಡಿ) ಆದುದರಿಂದ **ಯತಿವರ್ಯರು.** ಹಾಗೆಯೇ ಅಭೀತಿಸ್ತವದ ಕೊನೆಯ ಶ್ಲೋಕದಲ್ಲೂ "**ಯತಿಪ್ರವರ ಭಾರತೀ ರಸಭರೇಣ ನೀತಂವಯಃ**"-ಈ ಶ್ಲೋಕಾಭಿಪ್ರಾಯವನ್ನೇ ಉಪಪಾದಿಸಿರುತ್ತಾರೆ. ದಾಸನ ಅಭೀತಸ್ತವದ ವ್ಯಾಖ್ಯಾನವನ್ನು ನೋಡಿ. ಇಲ್ಲಿ **ಯತಿಪ್ರವರ ಭಾರತೀ**-ಎಂದು ಹೇಳಿರುವ ಹಾಗೆ, ಸಙ್ಕಲ್ಪ ಸೂರ್ಯೋದಯದಲ್ಲಿ **ಯತೀಶ್ವರ ಸರಸ್ವತೀ**-ಎಂಬ ಪ್ರಯೋಗವೂ ಇರುವದರಿಂದ **ಯತಿಸಾರ್ವಭೌಮರವಚಸ್ಸು**ಗಳು ದಿವ್ಯಸೂಕ್ತಿಗಳಾದುದರಿಂದ ಪರಮಾದರದಿಂದಲೂ ಶ್ರದ್ಧೆಯಿಂದಲೂ ಅರ್ಥದೊಂದಿಗೆ ಗ್ರಹಿಸತಕ್ಕದ್ದೂ ಪ್ರತಿಯೊಬ್ಬ ಶ್ರೀವೈಷ್ಣವ ಸಂಪ್ರದಾಯಸ್ಥರ ಇತಿಕರ್ತವ್ಯತೆಯು ಎಂಬ ಭಾವವು ತೋರಿಬರುತ್ತದೆ.

**ಆವೃತ್ತಿಭಿಃ**-ಎಂಬ ಪದದಿಂದ ಇವರು "**ತ್ರಿಂಶದ್ವಾರಂಶ್ರಾವಿತ ಶಾರೀರಕ ಭಾಷ್ಯಃ**"-ಎಂಬಲ್ಲಿ ಹೇಳಿರುವ ಹಾಗೆ ೩೦ ಸಲ ಶ್ರೀಭಾಷ್ಯ ಪಾಠವನ್ನು ಶಿಷ್ಯರಿಗೆ ಉಪದೇಶಿಸಿದ ಹಾಗೆ ತೋರಿಬರುತ್ತದೆ. ಇಂತಹ ಆವೃತ್ತಿಗಳಿಂದ "**ವಿಚಾರ್ಯಚ ಪುನಃ ಪುನಃ**"-ಎಂಬಲ್ಲಿ ಹೇಳಿರುವ ಹಾಗೆ ಅನೇಕಸಲ ಪುನಃ ಪುನಃ ಪರಿಶೀಲನಾದಿಗಳಿಂದ ಸಂಶಯ ವಿಪರ್ಯಾದಿಗಳಿಲ್ಲದೆ ಸರಿಯಾದ ಅರ್ಥವು ತೋರಿಬರುತ್ತದೆ; ಅತಿಮನೋಹರವಾಗಿದ್ದ ಪಕ್ಷದಲ್ಲಿ ಪುನಃ ಪುನಃ ಪರಿಶೀಲನದಿಂದ ಸ್ವಾರಸ್ಯ ರಹಸ್ಯಾರ್ಥಗಳು ತೋರಿಬರುತ್ತವೆಂಬದಾಗಿಯಾದರೂ **ಆವೃತ್ತಿಃ**-ಎಂಬ ಪ್ರಯೋಗವು. ಮನೋಹರವಾದ ಮಾಧುರ್ಯವಾದ ಭಕ್ಷ್ಯಪರಮಾನ್ನಗಳನ್ನು ಭುಜಿಸುವದರಲ್ಲಿ ಆವೃತ್ತಿಯು ಅಪೇಕ್ಷಿತವಷ್ಟೇ. ಅಥವಾ ಶರಣಾಗತಿ ವಿಷಯವನ್ನು ಅವರು ಪೃಥುಗದ್ಯದಲ್ಲಿ ಬರೆದಿರುವದನ್ನೇ ಇವರು ಶರಣಾಗತಿದೀಪಿಕಾ, ರಹಸ್ಯತ್ರಯಸಾರ, ಅಡೈಕ್ಕಲಪತ್ತು, ನ್ಯಾಸದಶಕ, ನ್ಯಾಸವಿಂಶತಿ ಇತ್ಯಾದ್ಯನೇಕ ಗ್ರಂಥಗಳಲ್ಲಿ ಉಪಪಾದಿಸಿ ಹೇಳಿರುವದರಿಂದಾಗಲಿ. **ಆವೃತ್ತಿಭಿಃ**-ಎಂದು ಪ್ರಯೋಗವು.

**ಯೌವನಂ**-ಪ್ರಾಪ್ತವಯಸ್ಕನಾಗಿ ಜ್ಞಾನದ ಉತ್ಪತ್ತಿ ವಿಮರ್ಶ ಭಾಗಗಳು ಚನ್ನಾಗಿ ತಲೆದೋರಿರುವ ಕಾಲದಲ್ಲಿ ಶ್ರೀ ಭಾಷ್ಯಕಾರರ ದಿವ್ಯಸೂಕ್ತಿಗಳ ಆವೃತ್ತಿಗಳಿಂದ, **ನಿರ್ವಿಷ್ಟಂ**-ಕಾಲವನ್ನು ಕಳೆದನು ಎಂದು ಹೇಳಿದುದರಿಂದ ಇತರರಹವ್ಯಾಸಗಳಿಗೆ ಮನಸ್ಸನ್ನು ಕೊಡಲಿಲ್ಲವು ಎಂಬ ಅರ್ಥವು ತೋರಿಬರುತ್ತದೆ. ಯೌವನವನ್ನು ಹಾಗೆ ಕಳೆದನು ಎಂದು ಹೇಳಿರುವದೇನೋ ಸರಿ; ಅದಕ್ಕೆ ಪೂರ್ವವಯಸ್ಸಿನಲ್ಲಿ ಎಂದರೆ ಶಿಷ್ಯನಾಗಿ ಗುರುಗಳಿಂದ ಶಿಕ್ಷಿತನಾದ ಕಾಲದಲ್ಲಿ ಶ್ರೀಯತಿವರ್ಯರ ದಿವ್ಯಸೂಕ್ತಿಗೆ ಗಮನಕೊಡದೆ ಪೂರ್ವಪಕ್ಷ ನಿರಸನೆಗಳಿಗೆ ಉಪಯುಕ್ತವಾಗಿರಲೆಂದು, ಇತರ ಸಿದ್ಧಾಂತ ಪ್ರಕ್ರಿಯೆಗಳನ್ನು ತಿಳಿಯಲು ಉದ್ಯುಕ್ತನಾಗಿದ್ದೆನೆಂಬ ಭಾವವೂ ವ್ಯಕ್ತಪಡುತ್ತದೆ. ಆದರೆ ಇದಕ್ಕಾಗಿ ತಮಗೆ ಪರಿತಾಪವಿಲ್ಲವೆಂದು, **ಅಸತಾಂಗರ್ವೋಽಪಿ ನಿರ್ವಾಪಿತಃ**-ಎಂಬಲ್ಲಿ ಹೇಳಿಕೊಂಡಿರುತ್ತಾರೆ. ತಮ್ಮ ಸಿದ್ಧಾಂತ ಸ್ಥಾಪನೆಗೆ ವಿರೋಧವಾದುವಾಗಿ ಇತರ ಸಿದ್ಧಾಂತಗಳು ಇದ್ದರೆ, ಅವು ಶಾಸ್ತ್ರಪಙ್ತಿಗೆ ವಿರೋಧವೆಂದು ತೋರಿಸುವುದು ಅತ್ಯಾವಶ್ಯಕವು. ಆದುದರಿಂದ **ಅಸತಾಂಗರ್ವೋಽಪಿ ನಿರ್ವಾಪಿತಃ**-ಎಂದು ಹೇಳುತ್ತಾರೆ. ಯೌವನವನ್ನು ಕಳೆದನು ಎಂಬುದರಿಂದ, ಆವೃತ್ತಿಭಿಃ ಎಂಬಲ್ಲಿ **ಆವೃತ್ತಿ**-ಶಬ್ದವು ಸ್ತ್ರೀಲಿಂಗವಾಗಿರುವದರಿಂದ ಯೌವನಸ್ಥನು ಹೇಗೆ ತನ್ನ ಪತ್ನಿಯೊಂದಿಗೆ ಸರಸಸಲ್ಲಾಪಾದಿಗಳಲ್ಲೇ ಮಗ್ನನಾಗಿ ಪುನಃ ಪುನಃ ರಮಿಸುವನೋ, ಹಾಗೆ ತಾವೂ ಯತಿವರ್ಯರ ದಿವ್ಯಸೂಕ್ತಿಗಳಲ್ಲೇ ಸದಾರಮಿಸುತ್ತಾ ಆನಂದದಿಂದ್ದೆನೆಂಬ ಭಾವವು ತೋರಿಬರುತ್ತದೆ. ಸಾರದೀಪಿಕಾಚಾರ್ಯರು “ **ನಿರ್ವಿಷ್ಟ ಮೆನ್ಗ್ಯಿಯಾಲೇ ಆವೃತ್ತಿಗಳಾಗಿರ ಯುವತಿಗಳೋಡೆ ಅನುಭವಿಕ್ಕ ಪೆತ್ತದೆನ್ರು ತೋನ್ರುಗಿರದು** ”-ಎಂದೂ, ಸಾರಸಙ್ಗ್ರಹ ವ್ಯಾಖ್ಯಾತೃವು **ಲೋಕೇ ಪುಂಸಃ ಯೌವನೇ ಆವೃತ್ತಿಭಿರ್ಯುವತಿಭಿಸ್ಸಹ ವೃತ್ತಿಭಿ ರ್ಹಿಸುಖಿನೋ ಭವನ್ತಿ** ”-ಎಂದೂ ಬರೆದಿರುತ್ತಾರೆ. ಬಹು ವಚನದಿಂದ ಈ ಅರ್ಥವನ್ನು ಗ್ರಹಿಸಬಹುದು. ಶ್ರೀಯತಿವರ್ಯರ **ವಚಸಾ ಆವೃತ್ತಿಭಿಃ**-ಎಂದು ಇರುವದರಿಂದ ಶ್ರೀಯತಿವರ್ಯರ ದಿವ್ಯಸೂಕ್ತಿಗಳಲ್ಲೇ ಮಗ್ನನಾಗಿರುವ ಭಾವವೂ, ತದಿತರವಾದವುಗಳಲ್ಲಿ ಅಷ್ಟು ಅನುರಾಗವು ಇಲ್ಲವೆಂಬ ಭಾವವೂ ತೋರಿಬರುವದರಿಂದ, **ಆವೃತ್ತಿಭಿರ್ಯುವತಿಭಿಃ**-ಎಂಬುವಕ್ಕಿಂತಲೂ ಸಾಧ್ವಿಯಾದವಳು ತನ್ನ **ಪತಿ**ಯನ್ನೇ ನಂಬಿಕೊಂಡು, **ಆವೃತ್ತಿಭಿಃ**-ಅನುದಿನವೂ ಆತನೊಂದಿಗೆ ಸರಸಸಲ್ಲಾಪ ಭೋಗಗಳಲ್ಲೇ ಅನುರಕ್ತಳಾಗಿ ಆನಂದಿಸುವಳು ಎಂದೂ ಅರ್ಥಮಾಡಬಹುದು. ಆ ಯತಿವರ್ಯರ ದಿವ್ಯಸೂಕ್ತಿಯ ವಿಷಯದಲ್ಲಿ ತಮಗೆ ಪರಮೈಕಾಂತಿತ್ವವಿತ್ತೆಂದು ಹೇಳಿದಂತಾಯಿತು. ಈ ಅಭಿಪ್ರಾಯವು ಶ್ರೀ ಪರಾಶರವಾಕ್ಯವಾದ “ **ಯಾಪ್ರೀತಿ ರವಿವೇಕಾನಾಂ ವಿಷಯೇಷ್ವನಿವರ್ತಿನಾಮ್ । ತ್ವಾಮನುಸ್ಮರಿತ ಸ್ಸಾಮೇ ಹೃದಯಾನ್ಮಾಪಸರ್ಪತು** ”-ಎಂಬುದನ್ನು ಸ್ಮರಿಸುವ ಹಾಗೆ ಮಾಡುತ್ತದೆ. ವಿಷಯಗಳಲ್ಲೇ

ಸಕ್ತವಾದ ಮನಸ್ಸುಳ್ಳವರಿಗೆ ಆ ವಿಷಯೋಪಭೋಗಗಳಲ್ಲೇ ಯಾವ ವಿಶೇಷ ಪ್ರೀತಿಯುಂಟೋ, ಅಂತಹ ಐಕಾಂತ್ಯ ಪ್ರೀತಿಯು ನಿನ್ನನ್ನೇ ಅನುಸರಿಸುತ್ತಿರುವ ನನ್ನ ಹೃದಯವನ್ನು ಬಿಟ್ಟು ಹೋಗದೇ ನಿರಂತರವಿರಲಿ" ಎಂದು ಹೇಳಲ್ಪಟ್ಟಿರುತ್ತದೆ. ಶ್ರೀ ಯತಿವರ್ಯರ ದಿವ್ಯಸೂಕ್ತಿಯಲ್ಲೇ ಇಂತಹ ಪ್ರೀತಿಯು ಶ್ರೀ ನಿಗಮಾಂತ ದೇಶಿಕರಿಗೆ ನೆಲಿಸಿತ್ತು ಎಂಬುದು ತೋರಿಬರುತ್ತದೆ. ಕಾಮುಕನು ಕಾಮಿನಿಯನ್ನೇ ಹೇಗೆ ಸದಾಧ್ಯಾನಿಸುತ್ತಿರುವನೋ ಹಾಗೆಯೇ ಇವರೂ ಶ್ರೀಯತಿವರ್ಯರ ದಿವ್ಯಸೂಕ್ತಿಯನ್ನೇ ನಿರಂತರ ಚಿನ್ತನ ಮಾಡುತ್ತಿದ್ದರೆಂಬ ಭಾವವು.

ಆಗಲಿ, ಸದಾ ಹೀಗೆ ಯತಿವರ್ಯರ ದಿವ್ಯಸೂಕ್ತಿಗಳಲ್ಲೇ ಮುಖ್ಯ ಯೌವನವನ್ನೆಲ್ಲಾ ಕಳೆದನು ಎಂಬುದು ಹೇಗೆ ಸಾಧ್ಯವು. ದಾಂಪತ್ಯ ಭಾವವನ್ನು ಅವಲಂಬಿಸಿರುವ ತಮಗೆ ದೇಹ ಯಾತ್ರಾದಿಗಳು ನಡೆಯಬೇಡವೋ? ಐಹಿಕಗಳಲ್ಲಿ ಸಂಗವನ್ನು ತ್ಯಜಿಸಲು ಹೇಗೆ ಸಾಧ್ಯವೆಂದರೆ, ಅದಕ್ಕೆ ಸಮಾಧಾನವನ್ನು ಹೇಳುತ್ತಾರೆ. ಒಬ್ಬರನ್ನು ಹೋಗಿ ಆಶ್ರಯಿಸಿ, ಪಾರತಂತ್ರ್ಯವನ್ನು ಹೊಂದಿದ ಪ್ರವೃತ್ತಿಯು ನರಕಸಮಾನವೆನ್ನುತ್ತಾರೆ. ಆದುದರಿಂದಲೇ ತಮ್ಮ ಪ್ರಿಯಮಿತ್ರರಾದ ವಿದ್ಯಾರಣ್ಯರು ವಿಜಯನಗರದ ರಾಜರಲ್ಲಿ ಉನ್ನತ ಪದವಿಯನ್ನು ಹೊಂದಿದ ನಂತರ ಶ್ರೀ ದೇಶಿಕರನ್ನು ಕುರಿತು ಉಂಛ ವೃತ್ತಿಯನ್ನು ತ್ಯಜಿಸಿ ರಾಜರಲ್ಲಿಗೆ ಬಂದರೆ ತಮಗೆ ಸನ್ಮಾನ ದೊರೆಯುವದೆಂದು ಎಷ್ಟು ಬಲಾತ್ಕಾರ ಮಾಡಿದರೂ, ಅಂತಹ ಪಾರತಂತ್ರ್ಯವನ್ನು ನರಕವಾಗಿ ಭಾವಿಸಿ, ನಿಂದಿಸಿ " **ದುರೀಶ್ವರದ್ವಾರ ಬಹಿರ್ವಿತರ್ದಿಕಾ ದುರಾಸಿಕಾಯೈ ರಚಿತೋಯ ಮಂಜಲಿಃ** ಎಂದೂ, ತಮಗೆ " **ಧನವು ಧನಂಜಯ ಸ್ಯಂದನ ಭೂಷಣ** "ವೆಂದೂ " **ನಾಸ್ತಿ ಪಿತ್ರಾರ್ಜಿತಂ ಕಿಂಚಿನ್ನ ಮಯಾಕಿಂಚಿ ದಾರ್ಜಿತಮ್ । ಅಸ್ತಿಮೇ ಹಸ್ತಿಶೈಲಾಗ್ರೇ ವಸ್ತು ಪೈತಾಮಹಂ ಧನಮ್** "-ಎಂದೂ ಹೇಳಿದ ಮಹನೀಯರಾದುದರಿಂದ, ಅಂತಹ ಪಾರತಂತ್ರ್ಯವನ್ನು ನರಕವೆಂದು ಮುಂದೆ ಹೇಳುತ್ತಾರೆ. **ನಿರ್ಧೂತೇತರ ಪಾರತಂತ್ರ್ಯನಿರಯಾಃ,** ಇದು **ವಾಸರಾಃ**-ಎಂಬುದಕ್ಕೆ ವಿಶೇಷಣವು. ದಿವಸಗಳನ್ನು ಬಹು ಸುಖವಾಗಿಯೇ ಕಳೆದೆನು ; ಹೇಗೆ ಕಳೆದಿದ್ದು ಎಂದರೆ, ಯತಿವರ್ಯರ ದಿವ್ಯಸೂಕ್ತಿಯ ಆವೃತ್ತಿಯಲ್ಲದೆ, ಇತರ ವಿಷಯಗಳಿಗೆ ಗಮನಕೊಡದೇ ಕಳೆದೆನೆನ್ನುತ್ತಾರೆ **ನಿರ್ಧೂತ**-ಹೋಗಲಾಡಿಸಲ್ಪಟ್ಟ ಇತರ ಪಾರತಂತ್ರ್ಯವೆಂಬ ನರಕಗಳನ್ನುಳ್ಳ ದಿವಸಗಳು. ಅಲ್ಪಾಸ್ಥಿರ ಫಲಗಳನ್ನು ಬಂಧ ರೂಪದಲ್ಲಿ ಐಹಿಕಗಳು ಕೊಡುವದರಿಂದ ನರಕಗಳೆಂದು ಎಂದರೆ ನರಕ ತುಲ್ಯಗಳೆಂದು ಹೇಳಲ್ಪಟ್ಟವು. " **ಧಿಗಸ್ತು ಪರವಶ್ಯತಾಮ್** "-ಎಂಬುದು ಸೀತಾವಾಕ್ಯವು " **ನಾಥೇನಃ** "-ಎಂಬ ಮುಕುಂದ ಮಾಲಾ ೨೮ನೆಯ ಶ್ಲೋಕವನ್ನು ನೋಡಿ. ಅಭೀತಿಸ್ತವದಲ್ಲಿ " **ನವಕ್ತುಮಪಿ ಶಕ್ಯತೇನರಕಗರ್ಭವಾಸಾದಿಕಂ ವಪುಶ್ಚ ಬಹು ಧಾತುಕಂ ನಿಪುಣಚಿನ್ತನೇ**

**ಉದ್ಧೃತವ್** " (೧೩ನೆಯ ಶ್ಲೋಕವನ್ನು ಪರಾಂಬರಿಸಿ, ದೇಹ ಮೊದಲುಗೊಂಡು ಎಲ್ಲವೂ ನರಕಸಮಾನವೆಂದೂ ಹೇಳಿರುತ್ತಾರೆ. ಇಲ್ಲಿನ ಪುರುಷಾರ್ಥವೆಲ್ಲಾ ತೃಣಕ್ಕೆ ಸಮಾನವೆಂದೂ ಅನೇಕ ಕಡೆ ಹೇಳಿರುತ್ತಾರೆ. ಆದುದರಿಂದ ತಾವು ವೈರಾಗ್ಯ ಶಿಖಾ ಮಣಿಗಳಾದುದರಿಂದ ಹಾಗೆ ಹೇಳಲು ಸಾಧ್ಯವು. ಆದುದರಿಂದಲೇ ಇವರ ಮಕ್ಕಳ " **ಯಃಖ್ಯಾತಿ ಲಾಭಪೂಜಾಸು ವಿಮುಖಃ** "-ಎಂದು ಹೇಳಿರುತ್ತಾರೆ. ಯಾವು ದಕ್ಕೂ ಪರತಂತ್ರನಾಗದೆ ಸುಖವಾಗಿ ಕಾಲಕಳೆದನು ಎನ್ನುತ್ತಾರೆ. **ಸುಖಂ**-ಎಂಬ ಶಬ್ದದಿಂದ ತೋರುವದೇನೆಂದರೆ, ಪ್ರಸನ್ನನ ಉತ್ತರಕೃತ್ಯಗಳು ಯಾವುವೋ ಅವುಗಳೇ ಇತಿಕರ್ತವ್ಯಗಳೆಂದು ಭಾವಿಸಿ, ತಾವೂ ಜ್ಞಾನವನ್ನು ಸಂಪಾದಿಸಿಕೊಂಡು ಇತರರಾದ ಆ ಕಾಲದವರಿಗೆ ಪಾಠಪ್ರವಚನವನ್ನು ಮಾಡುತ್ತಾ, ಮುಂದೆ ಬರುವವರ ಜ್ಞಾನಪ್ರಾಪ್ತಿಗಾಗಿ ನಿರಂತರ ಗ್ರಂಥರಚನೆಯನ್ನು ಮಾಡುತ್ತಾ ಕಾಲಯಾಪನೆಯನ್ನು ಮಾಡಿದೆನೆಂಬ ಅರ್ಥವು ತೋರಿಬರುತ್ತದೆ; ಕೃತಕೃತ್ಯನೆಂದು ಭಾವಿಸಿ, ಸುಖವಾಗಿ ತಿಂದು, ಸುಖವಾಗಿ ಮಲಗಿ, ಸುಖವಾಗಿ ಇತರರೊಂದಿಗೆ ಹರಟೆಯಲ್ಲಿ ಕಾಲಕಳೆದೆನೆಂಬರ್ಥವಲ್ಲವು. ಸ್ನಾನ ಸಂಧ್ಯಾವಂದನೆ ಮೊದಲಾದ ನಿತ್ಯಕರ್ಮಾನುಷ್ಠಾನಗಳು ನಡೆಸಲ್ಪಟ್ಟವೋ ? ಹೇಗೆ ? ಎಂದರೆ **ಅಂಗೀ ಕೃತ್ಯ ಸತಾಂಪ್ರಸತ್ತಿಂ**–ಸತ್ಸಂಪ್ರದಾಯ ಪ್ರವೃತ್ತಿಯನ್ನು ತ್ಯಜಿಸಲಿಲ್ಲವು, ಅಂಗೀ ಕರಿಸಿದೆವು; ಕರ್ಮನಿಷ್ಠೆ ಜ್ಞಾನನಿಷ್ಠೆ ಎರಡೂ ಬೇಕೆಂಬುದನ್ನು ತಿಳಿದು, ಸತ್ಸಂ **ಪ್ರದಾಯರೀತ್ಯಾ** ನಡೆಸಿ, ಅವರುಗಳ **ಪ್ರಸತ್ತಿಂ**-ಎಂದರೆ ಪ್ರಸನ್ನತೆ, ಅನುಗ್ರಹ ವನ್ನು ಹೊಂದಿದೆನೆನ್ನುತ್ತಾರೆ. ಪುರುಷಾರ್ಥಕಾಷ್ಠೆಯೇ ಇದು ಎಂದು ತಿಳಿದವ ನಾದುದರಿಂದ ಆ ವಿಷಯದಲ್ಲಿ ತುಂಬಾ ಜಾಗರೂಕನಾಗಿದ್ದೆನೆಂದು ಇದರಿಂದ ಹೇಳುತ್ತಾರೆ. ಪುರುಷಾರ್ಥಕಾಷ್ಠಾಧಿಕಾರದಲ್ಲಿ ಹೀಗೆಯೇ ಹೇಳಲ್ಪಟ್ಟಿರುತ್ತದೆ. " **ಶುದ್ಧಾನಾಂತುಲಭೇಮಹಿ ಸ್ಥಿರಧಿಯಾಂ ಶುದ್ಧಾನ್ತ ಸಿದ್ಧಾನ್ತಿನಾಂ ಮುಕ್ತ್ಯೈಶ್ವರ್ಯ ದಿನ ಪ್ರಭಾತ ಸಮಯಾ ಸತ್ತಿಂ ಪ್ರಸತ್ತಿಂ ಮುಹುಃ** " **ಇಲ್ಲಿ ಸತಾಂ**-ಎಂಬುದಕ್ಕೆ ವ್ಯಾಖ್ಯಾನವು ದೊರೆಯುತ್ತದೆ. ಅವರೆಂತವರೆಂದರೆ **ಶುದ್ಧನಾಂ**-ಅಂತಃ ಬಾಹ್ಯತಃ ಮಹಾ ಪರಿಶುದ್ಧರು, ಸ್ಥಿರಧಿಯರು ವಿಷಯ ಚಂಚಲತ್ವವಿಲ್ಲವು, **ಶುದ್ಧಾನ್ತ ಸಿದ್ಧಾನ್ತಿಗಳು**-ಲಕ್ಷ್ಮಿಯು ಹೇಗೆ ಪತಿ ಪರಾಯಣ ಳಾಗಿಯೇ ಸದಾ ಇರುವಳೋ ಹಾಗೆಯೇ ಇವರು ಐಕಾನ್ತ್ಯದಿಂದ ಭಗವಂತನನ್ನು ಧ್ಯಾನಿಸುತ್ತಿರುವವರು; ಇಂತಹ **ಸತಾಂ**-ಮಹಾಭಾಗವತೋತ್ತಮರ, ಪ್ರಸತ್ತಿ ಯನ್ನು ಅನುಗ್ರಹವನ್ನು ಅಂಗೀಕರಿಸಿರುವದಾಗಿ ಹೇಳಿದರು. ಕರ್ಮನಿಷ್ಠೆ ಮೊದ ಲಾದವುಗಳಲ್ಲಿ ಅವರು ಏರ್ಪಡಿಸಿದ ಸತ್ಸಂಪ್ರದಾಯವನ್ನೇ ತಾವು ಅನುಸರಿಸಿದವರು ಎಂದು ಹೇಳಿದರು. ಅಸತ್ತುಗಳ ವಿಷಯದಲ್ಲಿ ಹೇಗೆ ನಡೆದುಕೊಂಡಿರಿ ? ಎಂದರೆ ಅವರುಗಳ **ಗರ್ವೋಽಪಿ ನಿರ್ವಾಪಿತಃ**-ಅವರುಗಳ ಗರ್ವವನ್ನು ಕೂಡ ನಿರ್ಮೂಲ

ಮಾಡಿದೆನು ಎನ್ನುತ್ತಾರೆ. ಅಸತ್ತುಗಳು ಯಾರೆಂದರೆ, ಶಾಸ್ತ್ರಪಜ್ಞ್ರಗಳನ್ನು ಒಪ್ಪದವರು, ಮತ್ತು ಅಯಥಾರ್ಥವನ್ನು ಹೇಳುವವರು. ಬಾಹ್ಯ ಕುದೃಷ್ಟಿಗಳು. ಅವರು ಪುನಃ ತಲೆಯೆತ್ತಕೂಡದು, ಹಾಗೆ, ಅವರುಗಳನ್ನು ವಾದದಲ್ಲಿ ಶತದೂಷಣಿ ಪರಮತ ಭಂಗ ಮುಂತಾದ ಗ್ರಂಥಗಳಲ್ಲಿ ಗೆದ್ದಿರುವೆನು ಎಂಬ ಭಾವವು. ಇದನ್ನು ಶ್ರೀಯತಿವರ್ಯರು ಶ್ರೀ ಭಾಷ್ಯದಲ್ಲಿ ಇತರ ಸಿದ್ಧಾಂತಗಳನ್ನು ಯಾವ ರೀತಿಯಲ್ಲಿ ಸರಿಯಲ್ಲನೆಂದೂ ಶಾಸ್ತ್ರಸಮ್ಮತವಲ್ಲವೆಂದೂ ಹೇಗೆ ತೋರಿಸಿರುತ್ತಾರೋ ಹಾಗೆಯೇ ತಾವೂ ತೋರಿಸಿರುವದೂ ಎಂಬ ಭಾವವು. ಅವರ ಗರ್ವವನ್ನು ನಿರ್ಮೂಲ ಮಾಡಿದೆ ಎಂಬ ಹೇಳಿಕೆಯೂ ಗರ್ವಪ್ರದರ್ಶನವಾಗುವದಿಲ್ಲವೋ ? ಎಂದರೆ ಸ್ವಮತ ಸ್ಥಾಪನೆಗಾಗಿ ಅದಕ್ಕೆ ವಿರೋಧವಾದ ಮತಗಳ ನಿರಸನವೂ ಅತ್ಯಾವಶ್ಯಕವು. ಹಾಗೆ ಮಾಡದ ಪಕ್ಷದಲ್ಲಿ ಸ್ವಮತಸ್ಥಾಪನೆಯೂ ಅದರ ಉಪಪಾದನೆಯೂ ಕೂಡುವದಿಲ್ಲವು. ಹೀಗೆ ವಾದದಿಂದ ಖಂಡನೆಯೂ ಎಂದಿಗೂ ಗರ್ವಪ್ರದರ್ಶನವಾಗುವದಿಲ್ಲವು. ಪೂರ್ವಪಕ್ಷಕ್ಕೆ ಸಮಾಧಾನವು ಆವಶ್ಯಕವು. ಸಮಾಧಾನವನ್ನು ಹೇಳಲು ಅಶಕ್ತರಾಗಿ, ಪಂಡಿತರೆಂದು ಹೇಳಿಕ್ಕೊಳ್ಳುವರಿಗೆ ಪೂರ್ವಪಕ್ಷವನ್ನು ತರುವವನ ಮೇಲೆ ಕೋಪದಲ್ಲಿ ಪರ್ಯವಸಾನವನ್ನು ಹೊಂದುತ್ತದೆ. ಯಥಾರ್ಥ ಜ್ಞಾನವುಳ್ಳವನು, ಅಯಥಾರ್ಥವನ್ನು ನಿರಾಕರಿಸುವದು, ಆತನ ಇತಿಕರ್ತನ್ಯತೆಯಲ್ಲೇ ಸೇರಿತು. ಗುರುವು "**ಸ್ಖಲಿತ್ಸೇ ಶಾಸಿತಾ**"ವಾಗಿಯೇ ಇರಬೇಕಾದುದು ತುಂಬಾ ಆವಶ್ಯಕವು. **ರಾಮಶಬ್ದ ಮಾಹಾತ್ಮ್ಯೆಯನ್ನು ಬೋಧಿಸುವರೊಬ್ಬರು, ರಾ-ಎಂದು ಬಾಯಿ ಬಿಟ್ಟಾಗ ಆತನ** ಪುಣ್ಯಪಾಪಗಳು **ಹೊರಗೆ** ಬರುತ್ತವೆಂದೂ, **ಮ**-ಶಬ್ದೋಚ್ಚಾರಣೆಯಲ್ಲಿ ಬಾಯನ್ನು ಮುಚ್ಚಿದರೆ, ಹೊರಗೇ ನಿಂತುಹೋಗುವವೆಂದೂ ಹೇಳಿದರೆ, ಅದೇನೋ ಪುರಾಣ ಚಮತ್ಕಾರವಾದರೂ, ಕೇಳಿದವನನ್ನು ವಿಚಾರಿಸಿದರೆ, ಪಾಪವೆಲ್ಲಾ ಹೊರಗೆ ಬರುತ್ತದೆ, ಒಳಗೆ ಹೋಗಲು ಯತ್ನಿಸಿದರೆ ಸಾಧ್ಯವಿಲ್ಲದೇ ಹೋಗುತ್ತದೆಂದು ಹೇಳಿದನು. ಆದರೆ ಪಾಪಕರ್ಮವು ಮಾಡಿದುದು ಆಗಲೇ ನಶಿಸಿಹೋಯಿತು, ಅದೇನೂ ದ್ರವ್ಯರೂಪವಾದುದಲ್ಲವು. ಸುಕೃತದಿಂದ ಬರುವದು ಭಗವದನುಗ್ರಹವೂ, ದುಷ್ಕೃತದಿಂದ ಭಗವನ್ನಿಗ್ರಹವು; ಈ ರೂಪದಲ್ಲಿ ಕರ್ಮಫಲಗಳು ದೊರೆಯುವುವು ಎಂದು ಹೇಳುವದು ಶಾಸ್ತ್ರಾರ್ಥವು. ಮೊದಲಿನ ಹೇಳಿಕೆಯು ಭ್ರಮಜ್ಞಾನಕ್ಕೆ ಕಾರಣವಾಗುವದರಿಂದ ಚಮತ್ಕಾರವಿದ್ದರೂ ನಿಂದ್ಯವು. ಇಂತಹ ಶಾಸ್ತ್ರಸಮ್ಮತವಲ್ಲದ ಉಪದೇಶಗಳ ನಿರಾಕರಣೆಯು ಆವಶ್ಯಕವು. ಭಗವಂತನಿಗೆ ಈ ಜೀವಾತ್ಮನು ದಾಸಭೂತನೆಂದು ಎಲ್ಲಾ ಶಾಸ್ತ್ರಗಳು ಹೇಳುತ್ತಿರುವಾಗ ತಾನೇ ಪರಮಾತ್ಮನೆಂಬ ಹೇಳಿಕೆಯನ್ನು ನಿರಾಕರಿಸತಕ್ಕದ್ದು ನ್ಯಾಯವು. ಆದುದರಿಂದ "**ಅಸತಾಂಗರ್ವೋಪಿ ನಿರ್ವಾಪಿತಃ**"-ಆಗಲಿ, ಶ್ರೀ ದೇಶಿಕರವರು ಸಙ್ಕಲ್ಪ ಸೂರ್ಯೋದಯದಲ್ಲಿ ತಾವೇ ಶಿಷ್ಯರಾಗಿಯೂ ಶ್ರೀಯತಿವರ್ಯರನ್ನೇ ಗುರುವಾಗಿ

ಭಾವಿಸಿಕೊಂಡು, ವಿವೇಕನೆಂಬ ರಾಜನ ಸಭೆಯಲ್ಲಿ, ತಮಗೆ ಪ್ರತಿಭಟರಾದ ಇತರ ಮತವಾದಿಗಳು ಪ್ರಗಲ್ಭವಾದವನ್ನು ಖಂಡಿಸುವ ಸಂದರ್ಭದಲ್ಲಿ ತಾವೂ ಪ್ರತಿಭಟರ ಆಟೋಪಕ್ಕೆ ಕುಪಿತರಾಗಿ ಹೇಳುತ್ತಾರೇನೆಂದರೆ—

“ **ಯತೀಶ್ವರ ಸರಸ್ವತೀ ಸುರಭಿತಾಶಯಾನಾ ಸತಾಂ | ಮಹಾವಿಚರಣಾಂ ಬುಜಂ ಪ್ರಣತಿಶಾಲಿನ್ ಮೌಲಿನಾ | ತದನ್ಯಮತ ದುರ್ಮದ ಜ್ವಲಿತ ಚೇತಸಾಂ ವಾದಿನಾಂ| ಶಿರಸ್ಸು ನಿಹತಂ ಮಯಾ ಪದಮುದಕ್ಷಿಣಂ ಲಕ್ಷ್ಯತಾಮ್** ” ಯತೀಶ್ವರರ ದಿವ್ಯಸೂಕ್ತಿಗಳ ಪರಿಮಳವುಳ್ಳ ಎಂದರೆ ಯಥಾರ್ಥಾರ್ಥಗಳನ್ನು ಸಂಶಯ ವಿಪರ್ಯಯಗಳಿಲ್ಲದ ಹಾಗೆ ಗ್ರಹಿಸಿದವರ ಪಾದಕಮಲಗಳನ್ನು ನಾನು ಶಿರಸ್ಸಿನಲ್ಲಿ ಧರಿಸುವೆನು. ಆದರೆ ಅದಕ್ಕೆ ವಿರುದ್ಧಗಳಾದ ಇತರ ಮತಗಳ ದುರಭಿಮಾನದಿಂದ ಜ್ವಲಿಸಲ್ಪಟ್ಟ ಮನಸ್ಸುಳ್ಳ ಕುವಾದಿಗಳ ಶಿರಸ್ಸಿನಲ್ಲಿ ನನ್ನ ಎಡಗಾಲನ್ನು ಇಡುವೆನು, ಎಂಬುದು ಶ್ಲೋಕ ತಾತ್ಪರ್ಯವು. ಹೀಗೆ ಸ್ವಾಮಿ ದೇಶಿಕರವರು ಹೇಳಿರವದು ನ್ಯಾಯವೋ? ಎಂದಾಕ್ಷೇಪ ತಂದರೆ ಸಮಾಧಾನ ಹೇಗೆಂದರೆ ? ಇದು ನಾಟಕವು, ಪ್ರತಿಕಕ್ಷಿಗಳಿಗೂ ಇವರಿಗೂ ವಾಕ್ಕಲಹವು ನಡೆಯುವ ಸಂದರ್ಭವು. ತಮ್ಮ ರಾಜನಾದ ವಿವೇಕನು ಕೇಳುವ ಹಾಗೆ ನೇಪಥ್ಯದಲ್ಲಿ ಪ್ರತಿಕಕ್ಷಿಗಳು ಜಂಭ ಮಾಡಿರುತ್ತಾರೆ. ರಾಜನೆದುರಿಗೆ ತಾವೂ ತಮ್ಮ ಪರಾಕ್ರಮವನ್ನು ಹೇಳಿಕೊಳ್ಳುವ ಸಂದರ್ಭವನ್ನು, ಸಾಧಾರಣ ಕಾಲದವ್ಯಾಪಾರವನ್ನಾಗಿ ಭಾವಿಸಿ, ದೋಷಾರೋಪಣೆಯು ಸರಿಯಲ್ಲವು. ಸ್ವಾಮಿದೇಶಿಕರವರು ಆತ್ಮಪ್ರಶಂಸೆಯನ್ನಾಗಲಿ ಗರ್ವವನ್ನಾಗಲಿ ಎಂದಿಗೂ ಪ್ರದರ್ಶಿಸರು. ಕೆಲವು ಆಗದವರು ಇವರಿಗೆ ಅವಮಾನವನ್ನು ಮಾಡಬೇಕೆಂದು ಯೋಚಿಸಿ ಇವರು ಬರುವ ಮಾರ್ಗದಲ್ಲಿ ಪಾದರಕ್ಷೆಗಳನ್ನು ಜೋಡಿಸಿ ಕಟ್ಟಿದುದನ್ನು ಕಂಡು ಸ್ವಲ್ಪವೂ ಕೋಪವಿಲ್ಲದೆ ಹೇಳುತ್ತಾರೇನೆಂದರೆ, “ **ಕರ್ಮಾವಲಂಬಕಾಃಕೇಚಿತ್ಕೇಚಿ ಜ್ಞಾನಾವಲಂಬಕಾಃ | ವಯಂತು ಹರಿದಾಸಾನಾಂ ಪಾದರಕ್ಷಾವಲಂಬಕಾಃ** ”-ಕೆಲವರು ಕರ್ಮವನ್ನೂ ಕೆಲವರು ಜ್ಞಾನವನ್ನೂ ಅವಲಂಬಿಸಿರುತ್ತಾರೆ. ತಾವಾದರೋ ಭಾಗವತರ ಪಾದರಕ್ಷೆಯನ್ನು ಅವಲಂಬಿಸಿದವರು ಎಂದು ಹೇಳಿ ಅವರುಗಳು ಲಜ್ಜಿಸುವ ಹಾಗೆ ಹೇಳಿರುತ್ತಾರೆ. ಆದುದರಿಂದ ಯಾವ ಆಕ್ಷೇಪಕ್ಕೂ ಕಾರಣವಿಲ್ಲವು. ಅಶಬ್ದ ಸ್ವಾರಸ್ಯದಿಂದ ಮಿಕ್ಕ ವಯಸ್ಸಿನಲ್ಲೂಂ ಹಿಂದೆ ಎರಡು ಪಾದಗಳಲ್ಲಿ ಹೇಳಿದುದನ್ನು ಅಪರ ವಯಸ್ಸಿನಲ್ಲೂ ಮಾಡಲ್ಪಟ್ಟಿತು, ಅದನ್ನು ಬಿಡಲಿಲ್ಲವೆಂಬ ಅ ರ್ಥವೂ ತೋರಿಬರುತ್ತದೆ.

ಯೌವ್ವನವನ್ನೇನೋ ಶ್ರೀ ಯತಿವರ್ಯರ ದಿವ್ಯಸೂಕ್ತಿಗಳಿಂದ ಕಳೆದಿದ್ದಾಯಿತು. ಮಿಕ್ಕವಯಸ್ಸಿನಲ್ಲಿ ನಡೆಸಿದುದು ಏನು ? ಎಂದರೆ, ತಾವು ಹಾಗೆ ಯೌವನವನ್ನು

ಕಳೆಮುದರಿಂದ ಧನ್ಯರು, ಕೃತ್ಯಕೃತ್ಯರೆಂಬ ಭಾವದಿಂದ ಹೇಳುತ್ತಾರೆ. **ಶೇಷಾ ಯುಷ್ಯಪಿ**-ಮಿಕ್ಕ ಆಯುಸ್ಸಿನಲ್ಲಾದರೋ, **ಶೇಷಿದಂಪತಿದಯಾ ದೀಕ್ಷಾ**-ಶೇಷಿಗಳಾಗಿ ಲೋಕದಂಪತಿಗಳಾದ ಲಕ್ಷ್ಮೀನಾರಾಯಣರ ದಯಾರೂಪ ದೀಕ್ಷೆ ಯನ್ನು, **ಉದೀಕ್ಷಾಮಹೇ**-ಎದುರುನೋಡುತ್ತಿದ್ದೇವೆ ಎಂದು ಹೇಳುತ್ತಾರೆ. **ಶೇಷಿದಂಪತಿದಯೆಯು**-ತಮಗೆ ಸಿದ್ಧವೆಂಬ ಮಹಾ ವಿಶ್ವಾಸವು ಇಲ್ಲಿ ದ್ಯೋತಿತವು. ಶ್ರೀ ಯತಿವರ್ಯರ ದಿವ್ಯಸೂಕ್ತಿಗಳಿಗೇ ಮನಸ್ಸನ್ನು ಕೊಟ್ಟು, ಅವರು ಶರಣಾಗತಿ ಗದ್ಯದಲ್ಲಿ ಹೇಳಿರುವ ಹಾಗೆ ಉಪಾಯಾನುಷ್ಠಾನುವನ್ನು ಮಾಡಿ, ಅವರು **ನಿತ್ಯ** ವಲ್ಲಿ ಹೇಳಿರುವ ಹಾಗೆ ಅನುಷ್ಠಾನಾದಿಗಳನ್ನು ನಡೆಸಿಕೊಂಡು, ಉತ್ತರಕೃತ್ಯಗಳನ್ನು ಜಾಗರುಕರಾಗಿ ನಡೆಸಿಕೊಂಡು ಬಂದಿರುವದರಿಂದ, **ದಯಾದೀಕ್ಷಾಂ ಉದೀ ಕ್ಷಾಮಹೇ**-ಎಂದು ಹೇಳುವದು ನ್ಯಾಯವಾದುದು. **ದಯಾದೀಕ್ಷೆಯು**-ಯಾವು ದೆಂದರೆ **ಅಭಯಪ್ರದಾನವು,** “ **ಸಕೃದೇವ** ”-ಎಂಬ ಶ್ಲೋಕದಲ್ಲಿ ರಾಮಾ ವತಾರಿಯಾಗಿ ಪ್ರತಿಜ್ಞೆಮಾಡಿದುದೂ, ಕೃಷ್ಣಾವತಾರಿಯಾಗಿ “ **ಸರ್ವಧರ್ಮಾ ಪರಿತ್ಯಜ್ಯ** ”-ಎಂಬ ಶ್ಲೋಕದಲ್ಲಿ ಮಾಡಿದ ಪ್ರತಿಜ್ಞೆಯೂ ದೀಕ್ಷೆಯು. ಅದನ್ನು ಎದುರುನೋಡುವದಾಗಿ ಹೇಳಿದರು. ದಿವ್ಯವೈಕುಂಠದಲ್ಲಿದ್ದುಕೊಂಡು ಪರಿಪೂರ್ಣ ಬ್ರಹ್ಮಾನುಭವವನ್ನು ಮಾಡುತ್ತಾ ಪರಮಪುರುಷನಿಗೆ ಮಾಡುವ ನಿತ್ಯಕೈಂಕರ್ಯ ಪ್ರಾಪ್ತಿಯು; ಇಲ್ಲಿ **ದಯಾದೀಕ್ಷಾ**-ಎಂಬ ಪ್ರಯೋಗವು, ಶ್ರೀ ಯತಿವರ್ಯರ ಶ್ರೀಭಾಷ್ಯದ ಮಂಗಳ ಶ್ಲೋಕದಲ್ಲಿರುವ “ **ವಿನತ ವಿವಿಧ ಭೂತವ್ರಾತ ರಕ್ಷೈಕ ದೀಕ್ಷೆ**-ಎಂಬ ಪ್ರಯೋಗವನ್ನು ಸ್ಮರಿಸುತ್ತದೆ. ಸತ್ಯಸಙ್ಕಲ್ಪನ ಸಙ್ಕಲ್ಪವೇ ದೀಕ್ಷೆ ಯೆಂದು ಭಾವಿಸತಕ್ಕದ್ದು. ಆಶ್ರಿತರನ್ನು ಎಂದಿಗೂ ಕೈಬಿಡುವದಿಲ್ಲವೆಂಬ ಸಙ್ಕಲ್ಪವೇ ದೀಕ್ಷೆಯು: “ **ಅಪ್ಯಹಂ ಜೀವಿತಂ ಜಹ್ಯಾಂತ್ವಾಂವಾ ಸೀತೇ ಸಲಕ್ಷ್ಮಣಾಂ । ನಹಿಪ್ರತಿಜ್ಞಾಂ ಸಂಶ್ರುತ್ಯ ಬ್ರಾಹ್ಮಣೇಭ್ಯೋ ವಿಶೇಷತಃ** ”-(ರಾ ) ಎಂಬಲ್ಲಿ ಇಂತಹ ಪ್ರತಿಜ್ಞೆಯು ವ್ಯಕ್ತವು. ಹಾಗೆಯೇ “ **ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯ ಕಥಂಚನ** ” “ **ರಾಮೋದ್ವಿರ್ನಾಭಿಭಾಷತೇ** ”-ಇತ್ಯಾದಿಗಳು ಅನುಸಂಧೇಯಗಳು. “ **ನಾಭಿನಂದೇತ ಮರಣಂ ನಾಭಿ ನಂದೇತ ಜೀವಿತಮ್ । ಕಾಲಮೇವ ಪ್ರತೀಕ್ಷೇತ ನಿರ್ದೇಶಂ ಭೃತಕೋ ಯಥಾ** ” ॥ ಯಾವುದನ್ನೂ ಕುರಿತು ಸಂತೋಷಿಸದೆ ಸಂಬಳಗಾರನಾದ ಸೇವಕನು ಹೇಗೆ ೩೦ ದಿನಗಳು ತುಂಬಿ ಮಾಸಾಶನವು ಯಾವಾಗ ದೊರೆಯುತ್ತೋ ಎಂದು ನಿರೀಕ್ಷಿಸುವನೋ ಹಾಗೆ ಮೋಕ್ಷಾರ್ಥಿಯಾಗಿರುವ ಈ ಶೇಷಭೂತರಾದ ಪ್ರಪನ್ನರಾದ ನಾವು ಸ್ವಾಮಿಯು ಮಾಡಿದ ಅಭಯಪ್ರದಾನವು ಯಾವಾಗ ಲಭಿಸುತ್ತದೋ ಎಂದು ಚಾತಕ ಪಕ್ಷಿಯ ಹಾಗೆ ನಿರೀಕ್ಷಿಸುತ್ತಾ ಇರುವೆವು ಎಂದು ಹೇಳಿಕೊಂಡಿರು ತ್ತಾರೆ. **ಉದೀಕ್ಷಾಮಹೇ**-ತದೇಕ ದೃಷ್ಟಿಯುಳ್ಳವರಾಗಿ ಯಾವಾಗ ಲಭೀಸೀತು

**ಶೆಪ್ಪಚ್ಚೆವಿಕ್ಕವಮುತೆನ್ನ ತಿಗಳುಮ್ ಶೆಳುಜ್ಙಣತ್ತು |**
**ತಪ್ಪತ್ತವರ್ಕ್ಕು ತಾಮೇ ಯುಗನ್ದು ತರು ನ್ತಗವಾಲ್ ||**
**ಒಪ್ಪತ್ತೊ ನಾನ್ಮರೈಯುಳ್ಳಕ್ಕರುತ್ತಿ ಉರೈತ್ತುರೈತ್ತ |**
**ಮುಪ್ಪತ್ತಿರಣ್ಡೆನ್ಬ ಮುತ್ತಮಿಳ್‌ಶೇರ್‌ನ್ದ ಮೊಳಿತ್ತಿರುವೈ ||೪೦||**

ಎಂದು ಎದುರುನೋಡುತ್ತೇನೆ. ಇವರಿಂದ ಮಹಾ ವಿಶ್ವಾಸತ್ವರಾತಿಶಯಗಳು ಬೋಧಿತವು.

**ಅವತಾರಿಕೆಯು**-ಗ್ರಂಥಕರ್ತ್ತರು ಬಹು ಸ್ವಾರಸ್ಯವಾಗಿ ಮುಮುಕ್ಷುವಾದವನು ತಿಳಿಯಬೇಕಾದ ತತ್ವಗಳೇನು, ಅನುಷ್ಠಿಸಬೇಕಾದ ಹಿತವೇನು ಫಲರೂಪವಾದ ಪುರುಷಾರ್ಥವೇನು ಇವುಗಳನ್ನೆಲ್ಲಾ ಸಪ್ರಮಾಣವಾಗಿ ಉಪಪಾದಿಸಿ, ಇವೆಲ್ಲಾ ಅರ್ಥಗಳು ಮೂರು ರಹಸ್ಯಗಳಲ್ಲೂ ಅಡಗಿವೆ ಎಂದು ಆದಿಯಲ್ಲಿ ಒಂದು ಶ್ಲೋಕದ ಮೂಲಕವೂ ಅಧಿಕಾರಾಂತ್ಯದಲ್ಲಿ ಒಂದು ಶ್ಲೋಕದ ಮೂಲಕವು ಬಹು ಸ್ವಾರಸ್ಯವಾಗಿ ಶಾಸ್ತ್ರಾರ್ಥಗಳನ್ನೆಲ್ಲಾ ಉಪದೇಶಿಸಿರುತ್ತಾರೆ. ಹೀಗಿರುವಾಗ ಅಧಿಕಾರಾಂತ್ಯದಲ್ಲಿ ಮಣಿಪ್ರವಾಳ ರೀತಿಯಲ್ಲಿ ಒಂದು ತಮಿಳ ಗಾಥೆಯ ಮೂಲಕ ಅಧಿಕಾರಾರ್ಥವನ್ನು ಪುನಃ ಸಙ್ಗ್ರಹಿಸಿ ಹೇಳಲು ಕಾರಣವೇನು ? ಎಂದರೆ ಸಮಾಧಾನವನ್ನು ಹೇಳು ತ್ತಾರೆ. ಇವು ಇಲ್ಲದಿದ್ದರೆ ಈ ಗ್ರಂಥಕ್ಕೆ ಮಣಿಯನ್ನು ಪ್ರವಾಳವನ್ನು ಕೆತ್ತದಿದ್ದರೆ ಹೇಗೆ ಶೋಭಿಸುವದಿಲ್ಲವೋ ಹಾಗೆ ಶೋಭಿಸುವದಿಲ್ಲವೆಂದೂ ಅವು ಇರುವದರಿಂದ ಶಬ್ದದ ಗೌರವವೂ, ಅರ್ಥದ ಸ್ವಾರಸ್ಯವೂ, ಗಾನಮಾಧುರ್ಯವೂ ಹೀಗೆ ಮೂರು ವಿಧವಾದ ಮಾಹಾತ್ಮ್ಯೆಯು ಈ ರಹಸ್ಯತ್ರಯಸಾರವೆಂಬ ಗ್ರಂಥಕ್ಕೆ ಉಂಟಾಧ ಲೆಂದೂ, ಶಿಷ್ಯರುಗಳು ಈ ಅಮೋಘಾರ್ಥಗಳನ್ನು ನಿರಂತರಜಾಗಿ ಅನುಸಂಧಾನ ಮಾಡಲು ಅನುಕೂಲಿಸಲೆಂದೂ, ಹೇಳಿರುತ್ತೇನೆ. ಆದುದರಿಂದ ಈ ಗ್ರಂಥಕ್ಕೆ ಈ ಅಧಿಕಾರ ಸಙ್ಗ್ರಹ ಪಾಶುರಗಳು ಸಂಪತ್ಸಂಪಾದಕಗಳೆಂದು ಭಾವಿಸತಕ್ಕದ್ದು ಎನ್ನುತ್ತಾರೆ.

**ಅರ್ಥವು:-ಶೆಪ್ಪ**-ಉಚ್ಚರಿಸಿದರೆ, ಅರ್ಥಾನುಸಂಧಾನದ ಮಾತು ಹಾಗಿರಲಿ, ಸುಮ್ಮನೆ ಉಚ್ಚರಿಸಿದರೂ, **ಶೆವಿಕ್ಕು**-ಕೇಳುವವರ ಕಿವಿಗೆ, **ಅಮುದೆನ್ನ**-ಅಮೃತ ವನ್ನು ಪಾನಮಾಡಿದರೆ ಎಷ್ಟು ಮನೋಹರವೋ, ಅಷ್ಟು ಮನೋಹರವಾಗಿ- **ತಿಗಳುಮ್**-ಪ್ರಕಾಶಿಸುತ್ತಾ ಇರುತ್ತದೆ. **ಶೆಳುಜ್ಙಣತ್ತು**-ಶಮದಮಾದಿ ಶ್ರೇಷ್ಠ ಗುಣಗಳಲ್ಲಿ, **ತಪ್ಪತ್ತವರ್ಕ್ಕು**-ಸ್ಖಾಲಿತ್ಯಗಳಿಲ್ಲದ ಸಚ್ಛಿಷ್ಯರಿಗೆ, **ತಾಮೇಉಗನ್ದು,** ತಾವೇ ಸಂತೋಷಚಿತ್ತರಾಗಿ, **ತರುಮ್**-ತಮ್ಮ ಸ್ವಭಾವವನ್ನೇ ಉಂಟುಮಾಡುವ, **ತಗವಾಲ್**-ಭಗವದ್ಭಾಗವತ ಕೃಪೆಯಿಂದ, **ಒಪ್ಪತ್ತ**-ನಿರುಪಮವಾದ, **ನಾನ್ಮರೈ**-ನಾಲ್ಕು ವೇದಗಳೇ ಇದು ವೇದಾಂತಗಳಿಗೂ ಉಪಲಕ್ಷವು, ಎಂದರೆ ಉಪನಿಷತ್ತು ಗಳ, ಮತ್ತೂ ಅವುಗಳ ಉಪಬ್ರಹ್ಮಣಗಳಾದ ಪುರಾಣೇತಿಹಾಸಗಳ, **ಉಳ್ಳಮ್**

**ಕರುತ್ತಿಲ್**-ಅಂತರ್ಗತವಾದ ರಹಸ್ಯದ **ತಾತ್ಪರ್ಯದಲ್ಲಿ, ಉರೈತ್ತುರೈತ್ತ**-ಮನಸ್ಸು ಹಿಡಿಯುವ ಹಾಗೆ ಪುನಃ ಪುನಃ ನಿಷ್ಕರ್ಷಿಸಿ **ಹೇಳಿದ, ಇನ್ನೈಮುಪ್ಪತ್ತಿರಣ್ಣು**-ಈ ಮೂವತ್ತೆರಡು ಅಧಿಕಾರ ಸಂಗ್ರಹ **ಪಾಶುರಗಳು, ಮುತ್ತಮಿಳ್‌ಶೇರ್‌ನ್ದ**-ಮೂರು ವಿಧಗಳಾದ ತಮಿಳ್ ಲಕ್ಷಣಂಗಳಾದ ಕೂಡಿದ, ಅವು ಮೂರು ಯಾವು ವೆಂದರೆ ವಕ್ತೃ ವಾಚ್ಯ ವಚನ ವೈಲಕ್ಷಣ್ಯಗಳು ಅಥವಾ ಶಬ್ದ ಸೌಷ್ಠವ ಅರ್ಥಗಂಭೀರ, ಗಾನಮನೋಹರತ್ವಗಳು, ಇವುಗಳಿಂದ ಕೂಡಿದ, **ಮೊಳಿತ್ತಿರುವೇ**-ತಮಿಳ್ ಪಾಶುರ ರೂಪವಾದ ಸಂಪತ್ತೇ. ಇಂತಹ ಪಾಶುರಗಳು ಶೋಭಾಯಮಾನವಾಗಿ, ಶಬ್ದಾರ್ಥಗಳ ಗಾಂಭೀರ್ಯದಿಂದಲೂ ಗಾನಮಾಡಿದರೆ ಮನೋಹರವಾಗಿಯೂ ಇವೆ ಎಂಬ ಭಾವವು.

**ಉಪಪಾದನೆಯು:—ಶೆಪ್ಪ ಚ್ಚೆವಿಕ್ಕು ಅಮ್ರುತಂ**-ಅಮೃತದ ಸ್ವಾದು ತಮತ್ವವನ್ನು ನಾಲಿಗೆಯ ಮೂಲಕ ಅನುಭವಿಸಬಹುದು. ಕಿವಿಗೆ ಹೇಗೆ ಅಮೃತವು ? ಎಂದರೆ, **ಅಮೃತವು ಹೇಗೆ** ಸವಿದರೆ ಮನೋಹರವೋ ಹಾಗೆ ಇದನ್ನು **ಕೇಳಿದವರಿಗೆ ಮನೋಹರವು ಎಂಬ ಭಾವವು.** ಇದರ ಗಾನಾಮೃತಾನುಭವವು ತುಂಬಾ ಮನೋಹರವೆಂದು **ಹೇಳುವ** ಅಭಿಪ್ರಾಯದಿಂದ ಹಾಗೆ ಪ್ರಯೋಗವು. **ಶೆಪ್ಪ**-ಎಂಬುದರಿಂದ ಗಾನಮಾಡುವದಕ್ಕೆ ತುಂಬಾ ಉಚಿತವಾದುದು ಎಂಬ ಭಾವವು ತೋರುಬರುತ್ತದೆ. ಆದುದರಿಂದ **ಹೇಳುವವರಿಗೂ** ಕೇಳುವವರಿಗೂ ಈ ಪಾಶುರಗಳು ಆನಂದವನ್ನುಂಟುಮಾಡುತ್ತವೆ ಎಂಬ ತಾತ್ಪರ್ಯವು. ಬರೀಗಾನರೂಪದಲ್ಲಿ ಮಾತ್ರ ಆನಂದವನ್ನುಂಟು ಮಾಡುವದಿಲ್ಲವು ಸಮುದ್ರದಿಂದ ಸಾರಭೂತವಾದ ಅಮೃತ ಉಂಟಾದಹಾಗೆ ಅಗಾಧವಾದ ನಾಲ್ಕುವೇದಗಳಲ್ಲಿ ಪರಮಶ್ರೇಷ್ಠವಾದ ವೇದಾಂತ ವೆಂದರೆ ಉಪನಿಷತ್ತುಗಳ ಸಾರತಮವಾದ ಶಾಸ್ತ್ರಾಭಿಪ್ರಾಯ.ಗಳನ್ನೆಲ್ಲಾ ಒಳಗೊಂಡು ಇರುವುವು ಈ ರಹಸ್ಯತ್ರಯದ ಮೂವತ್ತೆರಡು ಅಧಿಕಾರಗಳ ಸಙ್ಗ್ರಹ ಪಾಶುರವು ಹೀಗೆ ವಾಚ್ಯಮಹಿಮೆಯುನ್ನುಳ್ಳದ್ದಾಗಿ ಅರ್ಥವೈಲಕ್ಷಣವನ್ನು ಹೊಂದಿರುವ ದಿವ್ಯ ಸ್ತೂಕಿಗಳು. ಆದುದರಿಂದ **ಒಪ್ಪತ್ತ ನಾನ್ಮರೈಯುಳ್‌ಕ್ಕರತ್ತು**-ಇವುಗಳಲ್ಲಿ ತುಂಬಿವೆ ಎಂದು ಹೇಳಿದರು. “ **ನವೇದಾಂತಾತ್ಶಾಸ್ತ್ರಂ** ”-ಎಂದು ಹಿಂದೆ, ಹೊಗಳಿರುವದಕ್ಕೆ ಅನುಗುಣವಾಗಿ ಇಲ್ಲಿಯೂ, **ಒಪ್ಪತ್ತನಾನ್ಮರೈಯುಳ್ಳಕ್ಕರತ್ತು**-ಎಂದು ಉಪನಿಸತ್ತಿನ ಭಾಗವು ನಿರುಪಮವಾದುದೆಂದು ಹೇಳಿದರು. **ನಾನ್ಮರೆ ಯುಳ್ಳ** ಕರುತ್ತು ಎಂಬ ಪ್ರಯೋಗವು, ವೇದಗಳ ಸಾರಭೂತಾರ್ಥವು ಉಪನಿಷತ್ತಿನಲ್ಲಿ ಅಡಗಿವೆ ಎಂಬ ಭಾವವನ್ನು ಸೂಚಿಸುತ್ತದೆ. **ಉಳ್ಳಕರತ್ತು**-ಎಂಬುದರಿಂದ ಆ ಉಪನಿಷತ್ತಿನ ಸಾರತಮಾಭಿಪ್ರಾಯವು, ಈ ಮೂವತ್ತೆರಡು ಪಾಶುರಗಳಲ್ಲಿವೆ ಎಂದು ಈ ಅಧಿಕಾರ ಸಙ್ಗ್ರಹಕ್ಕೆ ಇರುವ ಮಾಹಾತ್ಮ್ಯೆಯನ್ನು ತಿಳಿಸಿದರು, **ಉರೈತ್ತುರೈತ್ತ**-ತನಗೆ ಭಗವದ್ಭಾಗವತ ಕೃಪೆಯಿಂದ ಬಂದುದನ್ನು ಇತರರಿಗೆ

ಉಪದೇಶಿಸಿದ **ಎಂಬರ್ಥವು ತೋ**ರುವ ಹಾಗೆಯಾಗಲಿ, ಅಥವಾ ಈ ಹಸಾರ್ಥ್ಯರ್ಥವು ಪುನಃ ಪುನಃ ಅನುಸಂಧಾನವತದಾಡೂಕ್ಕದ್ದೆಂಬ ಭಾವನೆಯಿಂದಲಾಗಲಿ, ಆ ರಹಿಸ್ಯಾರ್ಥಗಳ ವಿಮರ್ಶೆಯು ಪುನಃ ಪುನಃ ವಿಚಾರಮಾಡತಕ್ಕದ್ದೆಂಬ ಭಾವನೆಯಿಂದಾಗಲಿ ದ್ವಿರುಕ್ತಿಯು. ಈ ಮೂವತ್ತೆರಡು ಅಧಿಕಾರಗಳೂ **ಮುತ್ತಮಿಳ್ ಶೇರನ್ದದು** ಎಂದು ಹೇಳಲ್ಪಟ್ಟಿತು, ಇದಕ್ಕೆ ಮೇಲೆ ಹೇಳಿದ ಎರಡು ವಿಧವಾದ ಅರ್ಥಗಳಲ್ಲದೆ ಇನ್ನು ಒಂದು ವಿಧವಾಗಿಯೂ ಅರ್ಥಹೇಳಬಹುದು; ಹೇಗೆಂದರೆ ಈ ಪ್ರತಿಯೊಂದು ಅಧಿಕಾರದಲ್ಲೂ, ಸಂಸ್ಕೃತದಲ್ಲಿ ಒಂದು ಪ್ರತಿಜ್ಞಾರೂಪ ಶ್ಲೋಕವೂ, ಅನಂತರ ತಮಿಳ್‌ನಲ್ಲಿ ಅದರ ವಿಸ್ತರವಾದ ಉಪಪಾದನೆಯೂ ಅನಂತರ ಒಂದು ದ್ರಾವಿಡ ಪ್ರಬಂಧಪಾಶುರವೂ ಹೀಗೆ ಇರುವದರಿಂದ **ಇದು ಮುತ್ತಮಿಳ್ ಶೇರ್‌ನ್ದ ಮೊಳಿ**-ದಿವ್ಯಪ್ರಬಂಧವು, ಹೀಗೆ ಅಧಿಕಾರ ಸಙ್ಗ್ರಹ ಪಾಶುರಗಳು ಅತಿಮನೋಹರಗಳಾಗಿ ಪ್ರಕಾಶಿಸುತ್ತಿವೆ ಎಂಬ ತಾತ್ಪರ್ಯವು.

ಹೀಗೆ ಹೇಳಿಕ್ಕೊಳ್ಳುವದು ಆತ್ಮಸ್ತುತಿಯಾಗುವದಿಲ್ಲವೇ ? ಎಂದರೆ ಇಲ್ಲವೆಂಬ ಭಾವವನ್ನು ಸೂಚಿಸುತ್ತಾರೆ ; ಇವು ತಮ್ಮ ಸ್ವಂತ ಅಭಿಪ್ರಾಯಗಳಲ್ಲವು ; ಮಹತ್ತಾದ ಗುಣಗಳುಳ್ಳ ಆಚಾರ್ಯರುಗಳು ಕಲ್ಯಾಣಗುಣಗಳುಳ್ಳ ಸಚ್ಛಿಷ್ಯರನ್ನು ಹುಡುಕಿ ಅಂತವರಿಗೆ ಪರಮಕೃಪೆಯಿಂದ ಉಪದೇಶಿಸಿದೆವು ; ಆದುದರಿಂದ ಭಗವತ್ಕೃಪಯಿಂದ ಸತ್ಸಂಪ್ರದಾಯರೀತ್ಯಾ ಬಂದವೇ ವಿನಾ ತಾವೇ ಸ್ವತಂತ್ರಿಸಿ ಹೇಳಿದವಲ್ಲವೆನ್ನುತ್ತಾರೆ. **ತಿಗಳುಮ್ ಶೆಳುಙ್ಗುಣತ್ತೋ ತಪ್ಪತ್ತವರ್ಕ್ಕು ತಾವೇ ಯುಗನ್ದು ತರುಮ್ ತಗವಾಲ್**-ಆಚಾರ್ಯರು ಸದಾಚಾರ ನಿಷ್ಠರಾಯ್ ಕರ್ಮನಿಷ್ಠೆ ಜ್ಞಾನನಿಷ್ಠೆಗಳಿಂದಲೂ **ಶಮದಮಾದಿಗಳುಳ್ಳ**ನಾಗಿರಬೇಕೆಂದು ತಿಳಿಸುವದಕ್ಕಾಗಿ **ಶೆಳುಮ್ ಗುಣತ್ತು**-**ಎಂಬ ಪ್ರಯೋಗವು. ಶಿಷ್ಯರು ಹೇ**ಗಿರಬೇಕೆಂದರೆ ? **ತಪ್ಪತ್ತವರ್-ಸ್ಖಾ**ಲಿತ್ಯರಹಿತರಾಗಿ "**ಸದ್ಬುದ್ಧಿ ಸ್ಸಾಧುಸೇವಿ**" ಎಂಬಲ್ಲಿ ಹೇಳಿರುವ ಹಾಗಿರಬೇಕೆಂದು **ಹೇ**ಳಲ್ಪಟ್ಟಿತು ; ಇದರಿಂದ ಶಿಷ್ಯರೆಂದು ಬಂದವರಿಗೆಲ್ಲಾ ಹೇಳಕೂಡದೆಂಬ ಮತ್ತೂ **ಅವರನ್ನು** ಆಚಾರ್ಯನು ಪರೀಕ್ಷಿಸಿ ಯೋಗ್ಯನಾಗಿದ್ದರೇನೇ ಉಪದೇಶಿಕಬೇಕು ಎಂಬ **ನ್ಯಾಯವು ಸೂಚಿತವು.** ಹೇಗೆ ಉಪದೇಶಿಕ್ಕತಕ್ಕದ್ದೆಂದರೆ **ಉಗನ್ದು ತರಮ್**-ಪರಮಪ್ರೀತಿಯಿಂದ ಏನೊಂದು ಪ್ರತಿಫಲವನ್ನು ಅಪೇಕ್ಷಿಸದೇ ಹೇಳಬೇಕೆಂಬುದೂ ಇದರಿಂದ **ಸೂಚಿತವು.** ಸಚ್ಛಿಷ್ಯನುಸಿಕ್ಕಿದರೆ ತಾವೇ ಆತನಿಗೆ ಉಪದೇಶಿಸಿ ಆಚಾರ್ಯ ಋಣವನ್ನು ಕಳೆದುಕ್ಕೊಳ್ಳಬೇಕೆಂಬ ಭಾವವು, **ತಾಮೋ ಉರೈತ್ತು ರೈತ್ತ**-ಎಂಬುದರೊಂದಿಗೆ ಅನ್ವಯಿಸಬಹುದು. ಆಚಾರ್ಯರಿಂದ ಪಡೆದ ಜ್ಞಾನವನ್ನು ತನ್ನಲ್ಲೇ ಇಟ್ಟುಕೊಂಡವನು "**ವಿದ್ಯಾಚೋರನು, ಗುರುದ್ರೋಹಿಯೂ**"-ಆಗುವನು. ತಾನು ಯಾರು ಒಬ್ಬನನ್ನಾದರೂ ಆರಿಸಿ ಆತನಿಗೆ "**ನಿಸ್ಪೃಹೋ ವದೇತ್**"-ಎಂಬಲ್ಲಿ ಹೇಳಿರುವ ಹಾಗೆ ಉಪದೇಶಿಸತಕ್ಕದ್ದು. ದಾಸನಿಗೆ ಅಂತವ

ರ್ಯಾರೂ ಸಿಕ್ಕಲಿಲ್ಲವಾಗಿ ಈ ಗ್ರಂಥರೂಪದಲ್ಲಿ ಬರೆದು ಆಚಾರ್ಯ ವಿಷಯವಾದ ಇತಿಕರ್ತವ್ಯತೆಯನ್ನು ನಡೆಸಿರುತ್ತೇನೆ.

**ಅವತಾರಿಕೆಯು**:—ತಮ್ಮ ಜೀವಮಾನಕಾಲದಲ್ಲಿ ಅನೇಕ ಶಿಷ್ಯರು ತಮ್ಮ ಉಪದೇಶವನ್ನು ಪರಿಗ್ರಹಿಸುವದರ ಮೂಲಕ ಆಚಾರ್ಯ ಋಣವು ಅಲ್ಲಿಗೆ ಕಳೆಯಿತು. ಹೀಗೆ ಈ ಗ್ರಂಥವನ್ನು ರಚಿಸಿದುದು ಏತಕ್ಕೆ? ಈ ಅಮೋಘ ಗ್ರಂಥದ ಉಪದೇಶದ ಪರಿಗ್ರಹಕ್ಕೆ ಅಧಿಕಾರಿಗಳು ಮುಂದಕ್ಕೆ ಸಿಕ್ಕುವರೋ ಇಲ್ಲವೋ ಹಾಗೆ ಸಿಕ್ಕದಿದ್ದರೆ, ವೃಥಾಯಾಸವಾಗಿ ಅರಣ್ಯರುದಿತವಾಗುವುದಿಲ್ಲವೇ ? ಅನೇಕರಿಗೆ ಅಸ್ತಿಕಬುದ್ಧಿಯೇ ಇರುವುದಿಲ್ಲವು. ಒಂದುವೇಳೆ ಇದ್ದರೂ ಇವುಗಳನ್ನು ಗ್ರಹಿಸುವ ಸೂಕ್ಷ್ಮಬುದ್ಧಿ ಇರುವುದಿಲ್ಲವು. ಒಂದುವೇಳೆ ಸೂಕ್ಷ್ಮಬುದ್ಧಿ ಇದ್ದರೂ ಅಸೂಯಾಪರನಾಗಬಹುದು. ಅಸೂಯೇ ಇಲ್ಲದಿದ್ದರೂ ನಿತ್ಯಕರ್ಮಾನುಷ್ಠಾನ ಮೊದಲಾದ ಸತ್ಸಂಪ್ರದಾಯದಿಂದುಂಟಾದ ಪರಿಶುದ್ಧತೆ ಇರುವುದಿಲ್ಲವು. ಅದರಿಂದ ರಾಜಸತಾಮಸಗಳಲ್ಲಿ ಅಭಿರುಚಿ ಇರುತ್ತದೆ. ನಶ್ವರವಾದ ಭೋಗಾಸಕ್ತರಾಗಿರುವರು. ಹೀಗಿರುವಾಗ ನಿಮ್ಮ ಈ ನಿರತಿಶಯ ಫಲವನ್ನು ಕೊಡುವ ಸನ್ಮಾರ್ಗಕ್ಕೆ ಅಧಿಕಾರಿಗಳು ಯಾರು ? ಎಂದರೆ ಕೆಲವರು ಇವುಗಳನ್ನೆಲ್ಲ ದೈವಕೃಪೆಯಿಂದ ಹೊಂದಿದವರೂ ಉಂಟು, ಲೋಕದಲ್ಲಿ ಕಂಡಿರುವೆವು ಅವರುಗಳೇ ಅಧಿಕಾರಿಗಳು ಎಂದು ಅದಕ್ಕೆ ಸಮಧಾನವನ್ನು ಹೇಳುತ್ತಾರೆ. ಈ ಸತ್ಸಂಪ್ರದಾಯವಾಗಿ ಬಂದ ದಿವ್ಯಾಭಿಪ್ರಾಯಗಳನ್ನು ಆದರಿಸಿ ಈ ಸನ್ಮಾರ್ಗವನು ಅವಲಂಬಿಸುವರುಂಟು ಎಂದು ಹೇಳುತ್ತಾರೆ.

**ಅರ್ಥವು**:—ಎಂತಹ ಗುಣಗಳುಳ್ಳವನು ತಮ್ಮ ಗ್ರಂಥವನ್ನು ಅಭಿಮಾನಿಸುವನು ಎಂದರೆ ಹೇಳುತ್ತಾರೆ. **ಅಸ್ತಿಕ್ಯವಾನ್**-ಪರಮಾತ್ಮನು 'ಒಬ್ಬನುಂಟು' ಎಲ್ಲಾ ಜಗತ್ತಿಗೂ ಕಾರಣಭೂತನಾಗಿ, ಎಂದು ಒಪ್ಪಿಕೊಳ್ಳುವವನು, ಮತ್ತು ಎಲ್ಲಾ ವೇದಶಾಸ್ತ್ರವೂ ಪರಮಾತ್ಮನು ದಯಪಾಲಿಸಿದುದು ಎಂದು ನಂಬುವವನು, ಆಸ್ತಿಕಬುದ್ಧಿ ಏನೋ ಇರಬಹುದು : ಅಲ್ಲಿ ಉಪದೇಶಿಸಿರುವ ತತ್ವಹಿತ ಪುರುಷಾರ್ಥಗಳನ್ನು ಗ್ರಹಿಸುವ ಯೋಗ್ಯತೆಯೂ ಇರಬೇಕಾದುದು ಆವಶ್ಯಕವಾದುದರಿಂದ, '**ನಿಶಿತಬುದ್ಧಿಃ** ಅಸಿಧಾರೆಯ ಹೀಗೆ ಸೂಕ್ಷ್ಮವಾದ ಬುದ್ಧಿಯುಳ್ಳವನು, ಶಾಸ್ತ್ರಪಜ್ಞಗಳಿಗೆ ಪರಸ್ಪರ ವಿರೋಧವಿಲ್ಲದ ಹಾಗೆ ಸಾಮುಂಜಸ್ಯವನ್ನು ಗ್ರಹಿಸುವವನು, **ಅನಭ್ಯಸೂಯುಃ**-ನಾಸ್ತಿಕನೂ ಅಲ್ಲವು, ಸೂಕ್ಷ್ಮಬುದ್ಧಿಯುಕ್ತನೂ ಆಗಿರಬಹುದು ; ಅದರೆ ತಮ್ಮ ವಿಷಯದಲ್ಲಿ ಅಸೂಯೆಯಿಂದ ನೋಡತಕ್ಕವನಾದರೆ ಪ್ರಯೋಜನವಿಲ್ಲವು ; ಆದುದರಿಂದ ತಮ್ಮ ಪಂಗಡಕ್ಕೆ ಸೇರದವನಾದುದರಿಂದ ದೋಷವಿಲ್ಲದೆ ಪರಮೋಪಾದೇಯವಾದುದನ್ನು ದೂಷಿಸಿದವನು ಅಸೂಯುಪರನು; ಹಾಗೆ ದೋಷಬುದ್ಧಿಯಿಂದ ನೋಡದವನು **ಅನಭ್ಯಸೂಯುಃ**-ಮೇಲೆ ಹೇಳಿದ ಗುಣಗಳೆಲ್ಲಾ ಇರಬಹುದು, ಆದರೆ ಆಚಾರ ನಿಷ್ಠನಲ್ಲದೇ ಹೋದರೆ ಪ್ರಯೋಜನವಿಲ್ಲವೆಂದು, **ಸತ್ಸಂಪ್ರದಾಯ**

**ಆಸ್ತಿಕ್ಯವಾರ್ನ್ನಿಶಿತ ಬುದ್ಧಿರನಭ್ಯಸೂಯು**
**ಸ್ಸತ್ಸಂಪ್ರದಾಯ ಪರಿಶುದ್ಧಮನಾ ಸ್ಸದರ್ಥೀ ।**
**ಸಂಕೇತ ಭೀತಿರಹಿತ ಸತ್ತೃಣೇಷ್ವಸಕ್ತ**
**ಸ್ಸದ್ವರ್ತ್ತನೀ ಮನುವಿಧಾಸ್ಯತಿ ಶಾಶ್ವತೀಂನಃ ॥೭೯॥**

**ಪರಿಶುದ್ಧಮನಾಃ**-ಮಹಾರ್ಗಗಳಾದ ಸಂಪ್ರದಾಯವಾದ ವರ್ಣಾಶ್ರಮ ಧರ್ಮರೀತ್ಯಾ ಆಜ್ಞಾಕೈಂಕರ್ಯಗಳಾದ ನಿತ್ಯನೈಮಿತ್ತಿಕಾನುಷ್ಠಾನಗಳಿಂದ ಉಪಾಯಾನುಷ್ಠಾನುಕ್ಕೆ ಪ್ರತಿಬಂಧಕಗಳಾದ ಪಾಪಗಳನ್ನು ಹೋಗಲಾಡಿಸಿಕೊಂಡ, **ಪರಿಶುದ್ಧಮನಾಃ**-ಪರಿಶುದ್ಧವಾದ ಮನಸ್ಸನ್ನುಳ್ಳವನು, ಆಕಾರಣದಿಂದ, **ಸದರ್ಥೀ**-ಸತ್ಪುರುಷರೊಂದಿಗೆ ಸಂಗ, ಸರಸಸಲ್ಲಾಪ, ಸದುಪದೇಶ, ಸಾತ್ವಿಕಾಹಾರ, ತೃಣಪ್ರಾಯವಾದ ಭೋಗಗಳನ್ನು ತೊರೆದು ಒಳ್ಳೆಯ ಭೋಗ ಪುರುಷಾರ್ಥಗಳು, ಇವುಗಳನ್ನು ಬಯಸುವವನು, ಇವೆಲ್ಲಾ ಗುಣಗಳೂ ಇರಬಹುದು; ಆದರೆ ನಾನು ಪರಪಕ್ಷಕ್ಕೆ ಸೇರಿದವನು, ಶ್ರೀ ದೇಶಿಕರವರ ಅಭಿಪ್ರಾಯಗಳೇನೋ ನನ್ನ ಬುದ್ಧಿಗೆ ಸರಿ ಎಂದು ತೋರುತ್ತವೆ. ನಮ್ಮವರು ಏನು ಹೇಳುತ್ತಾರೋ ಎಂಬ ಭೀತಿಯು ಬಾಧಿಸುತ್ತದೆಂದರೆ ಪ್ರಯೋಜನವಿಲ್ಲವು; ಆದುದರಿಂದ **ಸಂಕೇತ ಭೀತಿರಹತನೂ**-ಆಗಿರಬೇಕು ಎನ್ನುತ್ತಾರೆ, ಸಂಕೇತವು ಯಾವುದೆಂದರೆ ಶ್ರೀ ದೇಶಿಕರವರು ಹೇಳಿದುದನ್ನು ತಿರಸ್ಕರಿಸತಕ್ಕದ್ದೂ ಎಂಬುದು, ಅಂತಹ, **ಭೀತಿರಹಿತಃ**-ಭಯವಿಲ್ಲದಿರೋಣವು; ಇವುಗಳೆಲ್ಲಾ ಇದ್ದರೂ ವೈರಾಗ್ಯವಿಲ್ಲದಿದ್ದರೆ ಇಂದ್ರಿಯಗಳಿಗೆ ವಶನಾಗಿ ಕೆಟ್ಟು ಹೋಗುವನಾದುದರಿಂದ ಅವುಗಳಿಂದುಂಟಾಗುವ ಉಪಭೋಗದಲ್ಲಿ ರತಿಯು ಇಲ್ಲದವನಾಗಿಯೂ ಇರಬೇಕು ಎನ್ನುತ್ತಾರೆ—**ತೃಣೇಷ್ವಸಕ್ತಃ. ನಃ**- ನಮ್ಮ ಎಂದರೆ ನಮ್ಮ ಈ ಗ್ರಂಥದಲ್ಲಿ ಉಪಪಾದಿತವಾಗಿರುವ, **ಶಾಶ್ವತೀಂ**-ಎಂದಿಗೂ ಚ್ಯುತಿಯಿಲ್ಲದೆ ಶಾಶ್ವತವಾದ, **ಸದ್ವರ್ತ್ಮನೀಂ**-ಒಳ್ಳೆಮಾರ್ಗವನ್ನು, ನಿರತಿಶಯ ಸುಖವನ್ನು ಕೊಡುವ ಈ ಸಪರಿಕರವಾದ ಭರನ್ಯಾಸರೂಪವಾದ ಉಪಾಯಾನುಷ್ಠಾನವನ್ನು ಅದಕ್ಕೆ ಬೇಕಾದ ಜ್ಞಾನ ಪ್ರವೃತ್ತಿ ಮೊದಲಾದವುಗಳನ್ನೂ, **ಅನುವಿಧಾಸ್ಯತಿ**-ಅನುಸರಿಸಿ ನಡೆಯುವನು. ಇಂತವರು ಈ ಕಲಿಕಾಲದಲ್ಲಿ ವಿರಳರಾದರೂ ಸುಕೃತವಿಶೇಷದಿಂದ ಪರಮಾತ್ಮ ಕೃಪೆಯನ್ನು ಹೊಂದಿ ಜನಿಸದವರು ಎಲ್ಲಾ ಕಾಲವಲ್ಲೂ ಉಂಟು, ಅಂತವರು ಈ ನಮ್ಮ ಗ್ರಂಥವನ್ನು ಪುರಸ್ಕರಿಸುವರೆಂಬ ನಂಬಿಕೆಯುಂಟಾದುದರಿಂದ ತಮ್ಮ ಈ ಗ್ರಂಥ ನಿರ್ಮಾಣದ ಆಯಾಸವು ಸಫಲವು ಎಂದು ಹೇಳಿಕೊಂಡರು.

**ಉಪಪಾದನೆಯು:**—ಈ ತಮ್ಮ ಗ್ರಂಥವನ್ನು ಬಹುಮಾನಿಸುವರು ಈ ಅಧರ್ಮಕಾಲದಲ್ಲೂ ಉಂಟು ಎಂಬ ನಂಬಿಕೆಯಿಂದ ಹೇಳುತ್ತಾರೆ. ಅವರು ಎಂತವರೆಂದರೆ **ಆಸ್ತಿಕ್ಯವಾರ್**-ಪರಮಾತ್ಮನೂ, ಅವನು ದಯಪಾಲಿಸಿಕೊಟ್ಟ

ಶಾಸ್ತ್ರವೂ ಸಹ **ಅಸ್ತಿ**-ಉಂಟೆಂದು ನಂಬುವವನು ಆಸ್ತಿಕನು. ಅಂತಹ ಜ್ಞಾನವುಳ್ಳವನು **ಆಸ್ತಿಕ್ಯವಾನ್**-ನಾವು ಮೂರು ಪ್ರಮಾಣಗಳಿಂದ ಪ್ರಮೇಯಗಳನ್ನು ಅರಿಯುವವು, ಪ್ರತ್ಯಕ್ಷ ಅನುಮಾನ ಶಾಬ್ದ. ಇಹಲೋಕದ ವಸ್ತುಗಳು ಕಣ್ಣಿಗೆ ಕಾಣತಕ್ಕವುಗಳನ್ನು ಪ್ರತ್ಯಕ್ಷಾನುಮಾನಗಳಿಂದ ಗ್ರಹಿಸುವೆವು. ಇವೆರಡರಿಂದಲೂ ಗ್ರಹಿಸುವದಕ್ಕಾಗದೇ ಇರುವದನ್ನು ಎಂದರೆ ಆತ್ಮ ಪರಮಾತ್ಮರುಗಳ ಸ್ವರೂಪ ಸ್ವಭಾವಾದಿ ಮೊದಲಾದವುಗಳನ್ನು ಶ್ರುತಿಯಿಂದಲೂ ಅವುಗಳ ಉಪಬ್ರಹ್ಮಣಗಳಿಂದಲೂ ಅರಿಯುವೆವು. ಪಾಶ್ಚಾತ್ಯರು ಕೆಲವು ಅತೀಂದ್ರಿಯ ವಿಷಗಳನ್ನು ಒಪ್ಪಿದರೂ ಮುಖ್ಯವಾಗಿ ತರ್ಕಮೂಲವಾಗಿಯೇ ಅವರುಗಳ ಸಿದ್ಧಾಂತಗಳು ಏರ್ಪಟ್ಟಿರುವದರಿಂದ ಅವುಗಳಿಗೆ ಸ್ಥಿರವಾದ ಅಸ್ಥಿಭಾರವಿಲ್ಲವು. ಆದುದರಿಂದ ಅವರುಗಳಲ್ಲಿ ಆಸ್ತಿಕ್ಯಭಾವದಲ್ಲಿ ನ್ಯೂನತೆಯಿರುವದರಿಂದ, ಪ್ರಾಣಹಿಂಸೆ ಮುಂತಾದವುಗಳನ್ನು ಎಸಗುವದರಲ್ಲಿ ಹಿಂತೆಗೆಯುವದಿಲ್ಲವು. ವೇದಪ್ರಾಮಣ್ಯವನ್ನು ಒಪ್ಪುವ ಆಸ್ತಿಕ್ಯಬುದ್ಧಿಯು ಹಿಂದೂ ದೇಶದಲ್ಲಿ ಹೆಚ್ಚಾಗಿ ಉಂಟು. ಆದುದರಿಂದ ಪ್ರಪಂಚದಲ್ಲಿ ಹಿಂದುಗಳು ತುಂಬಾ ಮಾನ್ಯರು. ವೇದಕ್ಕೆ ಅಷ್ಟು ಪ್ರಾಮುಖ್ಯತೆ ಹೇಗೆ? ಎಂದರೆ ಅದರಲ್ಲಿನ ವಿಧಿ ನಿಷೇದ ಉಪದೇಶಗಳನ್ನು ಯಾರೂ ಸರಿಯಲ್ಲವೆಂದು ಹೇಳಲಾರರು. ಅದರಲ್ಲೂ ಉಪನಿಷದ್ಭಾಗವು ಸಹಸ್ರಮಾತಾಪಿತೃಗಳು ಹೇಳುವ ಹಿತಕ್ಕಿಂತಲೂ ಪರಮಹಿತವನ್ನು ಬೋಧಿಸುವಂತಾದ್ದು ನಮ್ಮ ವೇದಾಂತ ಶಾಸ್ತ್ರವು. ಇದನ್ನು ನಂಬುವವನು ಆಸ್ತಿಕ್ಯನು. " **ಅಸನ್ನೇವಸಭವತಿ** "- ಎಂಬ ಆನಂದವಲ್ಲಿಯ ೬ನೆಯ ಅನುವಾಕದ ವಾಕ್ಯವು ಇಲ್ಲಿ ಅನುಸಂಧೇಯವು. ಪಾಶ್ಚಾತ್ಯರ ವಾದ ಸರಣಿಯನ್ನು ನಾವು ನಿರಾಕರಿಸುವುದಿಲ್ಲವು. ಆ ವಾದಕ್ಕೆ ಎಲ್ಲರೂ ಒಪ್ಪತಕ್ಕ ಒಂದು ಶಾಸ್ತ್ರವು ತಳಹದಿಯಾಗಿರಬೇಕು. ಅದು ಇಲ್ಲವು. ಆದುದರಿಂದಲೇ ಬರೀ ತರ್ಕವು ಸರಿಯಾದ ಜ್ಞಾನಕ್ಕೆ ಹೇತುವಾಗುವದಿಲ್ಲವೆಂದು ಶ್ರೀ ವ್ಯಾಸರು " **ತರ್ಕಾಽಪ್ರತಿಷ್ಠಾನಾತ್** "-ಎಂಬ (   ) ಸೂತ್ರದಲ್ಲಿ ಹೇಳಿರುತ್ತಾರೆ. ತರ್ಕವು ಯಾವಾಗ ಪ್ರತಿಷ್ಠಿತ ಜ್ಞಾನಕ್ಕೆ ಹೇತುವಾಗುತ್ತೋ ಆಗ ಅದು ಸತ್ತರ್ಕವೆನಿಸುತ್ತದೆ. " **ಆರ್ಷಂಧರ್ಮೋಪದೇಶಂಚ ವೇದಶಾಸ್ತ್ರಾ ವಿರೋಧಿನಾ | ಯಸ್ತರ್ಕೇಣಾನುಸಂಧತ್ತೇ ಸಧರ್ಮಂವೇದ ನೇತರಃ** "- ಇಂತಹ ತರ್ಕವು ಸತ್ತರ್ಕವು. ಇಲ್ಲವಾದರೆಕುತರ್ಕವು. ಇದನ್ನು ಸದೃಷ್ಟಾಂತವಾಗಿ ಹಿಂದೆಯೂ ಉಪಪಾದಿಸಿರುತ್ತೇವೆ. ಇದನ್ನೆಲ್ಲಾ ಗ್ರಹಿಸುವದಕ್ಕೆ ಶಾಸ್ತ್ರದಲ್ಲಿ ಪೂರ್ಣವಿಶ್ವಾಸವಿರಬೇಕು. ಆದುದರಿಂದಲೇ ಶ್ರೀಕೃಷ್ಣಭಗವಾನ್‌ರವರು ಅರ್ಜುನನಿಗೆ " **ತಸ್ಮಾಚ್ಛಾಸ್ತ್ರಂ-ಪ್ರಮಾಣಂತೇ ಕಾರ್ಯಾ ಕಾರ್ಯವ್ಯವಸ್ಥಿತೌ** "-ಎಂದು ಉಪದೇಶಿಸಿರುತ್ತಾರೆ.

ಆಗಲಿ ಶಾಸ್ತ್ರದಲ್ಲೇನೋ ಒಂದು ವಿಧವಾದ ನಂಬಿಕೆ ಇರಬಹುದು; ಅಷ್ಟೇ ಸಾಲದು. ಶಾಸ್ತ್ರ ಪಂಕ್ತಿಗಳಿಗೆ ಸರಿಯಾದ ಸಮಂಜಸಾರ್ಥಗಳನ್ನು ಗ್ರಹಿಸಲು

ಬೇಕಾದ **ನಿಶಿತ ಬುದ್ಧಿಯು** ಇರಬೇಕು. ಅವುಗಳಿಗೆ ಪರಸ್ಪರ ವಿರುದ್ಧಾರ್ಥಗಳನ್ನು ಹೇಳಕೂಡದು. ಶ್ರೀ ಯತಿವರ್ಯರು **ಸರ್ವಂ ಸಮಂಜಸಮ್** ಎಂದು ಉಪದೇಶಿಸಿರುತ್ತಾರೆ. ಶ್ರುತಿಯು ಒಂದೆಡೆಯಲ್ಲಿ "**ಸದೇವಸೋಮ್ಯೇದಮಗ್ರ ಆಸೀತ್ ಏಕಮೇವಾ ದ್ವಿತೀಯಂ**" ಒಂದೇ ಇತ್ತೆಂದೂ, ಇನ್ನೊಂದು ವಾಕ್ಯದಲ್ಲಿ "**ದ್ವಾಸುಪರ್ಣಾಸಯುಜಾ**" ಎರಡು ವಿಧವಾದ ಆತ್ಮರೆಂದೂ, ಮತ್ತೊಂದು ವಾಕ್ಯದಲ್ಲಿ "**ಭೋಕ್ತಾಭೋಗ್ಯಂ ಪ್ರೇರಿತಾರಂಚಮತ್ವಾ**" ಮೂರು ತತ್ವಗಳುಂಟೆಂದೂ, "**ಆನೀದವಾತಗ್ಂ ಸ್ವಧಯಾತದೇಕಂ**" ಎಂಬ ಮತ್ತೊಂದು ವಾಕ್ಯದಲ್ಲಿ ನಾಲ್ಕು ಉಂಟೆಂದೂ ಶ್ರುತಿವಾಕ್ಯಗಳಿವೆ. ಇವು ಪರಸ್ಪರ ವಿರುದ್ಧವಾದವೆಂದು ವೇದ ವಿದೂಷಕನಾಗಕೂಡದು. ಇವುಗಳಿಗೆ ಪರಸ್ಪರ ವಿರೋಧವಿಲ್ಲದ ಹಾಗೆ ಸಾಮಂಜಸ್ಯವನ್ನು ಕಲ್ಪಿಸುವ **ನಿಶಿತಬುದ್ಧಿಯೂ ಬೇಕು**. ಗೀತೆಯಲ್ಲಿ ಒಂದು ಕಡೆಯಲ್ಲಿ "**ಕುರುಕರ್ಮೈವ ತಸ್ಮಾತ್ತ್ವಂ, ಯಜ್ಞೋದಾನ ತಪಶ್ಚೈವನತ್ಯಾಜಂ ಕಾರ್ಯಮೇವತತ್**" ಎಂದು ಹೇಳಿ, ಇನ್ನೊಂದು ಕಡೆಯಲ್ಲಿ "**ಸರ್ವ ಧರ್ಮಾ ಪರಿತ್ಯಜ್ಯಮಾಮೇಕಂಶರಣಂ ವ್ರಜ**" ಎಂದು ಹೇಳಿದ್ದರೆ, ಇವುಗಳಿಗೆ ಪರಸ್ಪರ ವಿರೋಧವಿಲ್ಲದ ಹಾಗೆ ಅನ್ವಯಿಸಿಕ್ಕೊಳ್ಳುವ **ನಿಶಿತಬುದ್ಧಿ**ಯಿರಬೇಕು. ಈ ಗ್ರಂಥದಲ್ಲೇ ಈ ನಮ್ಮ ಆತ್ಮಾವನ್ನು ಪರಮಾತ್ಮನಲ್ಲಿ ಸಮರ್ಪಿಸತಕ್ಕದ್ದೆಂದೂ, ಇನ್ನೊಂದು ಕಡೆಯಲ್ಲಿ ಈ ಆತ್ಮಾ ಪರಮಾತ್ಮನ ಸ್ವತ್ತೆಂದೂ ಹೇಳಿದರೆ ಆತನ ಸ್ವತ್ತನ್ನು ಆತನಿಗೇ ಸಮರ್ಪಿಸುವದು ಹೇಗೆ ಉಪಾಯವಾದೀತೆಂಬ ವಿರೋಧಕ್ಕೆ ಸಮಾಧಾನವನ್ನು ಗ್ರಹಿಸುವ **ನಿಶಿತ ಬುದ್ಧಿ**ಯಾಗಿರಬೇಕು.

**ಮೂರನೆಯದು– ಆಸ್ತಿಕ್ಯವೂ** ನಿಶಿತ ಬುದ್ಧಿಯೂ ಎರಡೂ ಒಂದು ವೇಳೆ ಇರಬಹುದು; ಆದರೆ ಗುಣಗಳಿರುವ ಕಡೆಯಲ್ಲಿ ದೋಷವನ್ನು ಆರೋಪಿಸುವ ಸ್ವಭಾವವಿರಬಹುದು. ಅಂತವನು ಈ ಗ್ರಂಥದಲ್ಲಿ ದೋಷವನ್ನೇ ಊಹಿಸುವ ದೋಷದೃಕ್ಕಾಗಬಹುದು. ಆಚಾರ್ಯರ ಧರ್ಮೋಪದೇಶಕ್ಕೆ ಅನುಗುಣವಾಗಿ ನಡೆಯುವವರ ಮೂಲಕ ಪರಿಶುದ್ಧವಾದ ಮನಸ್ಸನ್ನುಳ್ಳವನು ಎಂದೂ ಅರ್ಥ ಹೇಳಬಹುದು. ಏಕೆಂದರೆ ಅವರ ಉಪದೇಶಗಳೆಲ್ಲಾ ವೇದ ಶಾಸ್ತ್ರಾನುಗುಣವಾದುವು. ಅಂತವನು ತಮ್ಮ ಗ್ರಂಥಕ್ಕೆ ಅಧಿಕಾರಿಯಾಗುವನು; ಆದುದರಿಂದ **ಅನಭ್ಯಸೂಯುಃ-** ಅಸೂಯಾರಹಿತನಾಗಿರಬೇಕೆಂದು ಹೇಳಲ್ಪಟ್ಟಿತು. ಯಾವನು ಅಸೂಯಾಪರನಾಗುವನೋ, ಅವನಿಗೆ ಗುಣವನ್ನು ಗ್ರಹಿಸುವ ಶಕ್ತಿಯೇ ಇಲ್ಲವಾಗುತ್ತದೆ. ಅನೇಕರು, ತಪ್ಪೋ ನೆಪ್ಪೋ ಒಬ್ಬರು ಹೇಳಿದ ಹಾಗೆ

ಪ್ರವೃತ್ತಿಯುಳ್ಳವರಾಗುವರು. ಚೇತನನು ಜ್ಞಾನವಾನ್ ಆದುದರಿಂದ ಸರಿಯಾದ ಜ್ಞಾನವನ್ನು ಸಂಪಾದಿಸಿಕೊಂಡು, ನಿರ್ಭಯನಾಗಿ ತದನುಗುಣವಾಗಿ ವರ್ತಿಸ ತಕ್ಕದ್ದು. ಇಂತಹ ಮನಸ್ಥೈರ್ಯವು ಅನೇಕರಿಗೆ ಇರುವದಿಲ್ಲವು. ಸ್ವಾಮಿದತ್ತ ೋ.ವ ಜ್ಞಾನಾಧಿಕ್ಯವಾಗಲಿ ಐಶ್ವರ್ಯವಾಗಲಿ ಇದ್ದ ಪಕ್ಷದಲ್ಲಿ ಸಾಧಾರಣ ಮನು ಷ್ಯನು ಅಂತಹ ಅತಿಶಯವು ತನಗಿಲ್ಲದುದರಿಂದ ಅಂತವರ ವಿಷಯದಲ್ಲಿ ಅಸೂ ಯಾಪರನಾಗುವುದು ಸಾಮಾನ್ಯವು. ಇಂತಹ ಅಸಹಿಷ್ಣುಗಳೇ ಲೋಕದಲ್ಲಿ ಹೆಚ್ಚು. ಆದುದರಿಂದ ಈ ಗ್ರಂಥಕರ್ತರು ಮಹತ್ತಾದ ಜ್ಞಾನಾಗ್ರೇಸರರಾದುದ ರಿಂದ ಅನೇಕರ ಅಸೂಯೆಗೆ ಗುರಿಯಾಗಿ ತುಂಬಾ ಕಷ್ಟವನ್ನು ಅನುಭವಿಸಿ ದರು. ಇದನ್ನು ಇವರ ಅಭೀತಸ್ತವದ ಕೊನೆಯ ಶ್ಲೋಕದಲ್ಲಿ ಪರಸ್ಪರ **ಹಿತೈಷಿ ಣಾಂ ಪರಿಸರೇಷು ಮಾಂವರ್ತಯ"** ಎಂದು ಶ್ರೀರಂಗನಾಥನನ್ನು ಪ್ರಾರ್ಥಿಸಿ ರುತ್ತಾರೆ. ಇವಕ್ಕೆ ದಾಸನು ಬರೆದಿರುವ ಉಪಪಾದನೆಯನ್ನು ನೋಡಿ.

**ಸತ್ಸಂಪ್ರದಾಯ ಪರಿಶುದ್ಧಮನಾಃ**--ವಿಹಿತ ವರ್ಣಾಶ್ರಮ ಕರ್ಮಾನು ಷ್ಠಾನವನ್ನು ಅವಲಂಬಿಸಿದವರು ನಮ್ಮ ಆಚಾರ್ಯರುಗಳು, ಅಂತಹ ನಿತ್ಯ ನೈಮಿ ತ್ತಿಕ ರೂಪವಾದ ಆಜ್ಞಾಕೈಂಕರ್ಯಗಳನ್ನು ನಡೆಸೋಣದರಿಂದ ಪರಿಶುದ್ಧವಾದ ಮನಸ್ಸನ್ನು ಹೊಂದಿದವರು. **"ಕಷಾಯೇ ಕರ್ಮಭಿಃ ಪಕ್ವೇತತೋ ಜ್ಞಾನಂ ಪ್ರವರ್ತತೇ"** ಕರ್ಮಯೋಗದಿಂದ ಪಾಪಗಳು ಹೋದರೆ ಆನಂತರ ಉಪಾಯಾ ನುಷ್ಠಾನ ಮಾಡಬೇಕೆಂಬ ಆಶೆಯುಂಟಾಗುತ್ತದೆ. **"ಧರ್ಮೇಣ ಪಾಪಮಪ ನುದತಿ"** ಎಂಬ ಪ್ರಮಾಣವುಂಟು. ಹಾಗೆಯೇ ಗೀತೆಯಲ್ಲಿ **"ಯಜ್ಞೋ ದಾನಂತಪಶ್ಚೈವ ಪಾವನಾನಿ ಮನೀಷಿಣಾಮ್"** ಎಂದು ಇರುತ್ತದೆ. ಇನ್ನೊಂದು ಕಡೆಯಲ್ಲೂ **"ಯೋಗಯುಕ್ತೋ ವಿಶುದ್ಧಾತ್ಮಾ" "ಬ್ರಹ್ಮಣ್ಯಾ ಧಾಯ ಕರ್ಮಾಣಿ ಸಜ್ಞಂತ್ಯಕ್ತ್ವಾ ಕರೋತಿಯಃ। ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ" "ಯೋಗಿನಃ ಕರ್ಮಕುರ್ವನ್ತಿ ಸಜ್ಞಂ ತ್ಯಕ್ತ್ವಾ ತ್ಮಶುದ್ಧಯೇ"** ಇತ್ಯಾದ್ಯನೇಕ ಪ್ರಮಾಣಗಳು ಸತ್ಸಂಪ್ರದಾಯದಿಂದ ಪರಿಶುದ್ಧ ಮನಸ್ಸುಂಟಾಗುತ್ತದೆಂದು ಬೋಧಿಸುತ್ತವೆ. ಅಥವಾ **ಸತ್ಸಂಪ್ರದಾಯ**ವೆಂದರೆ ಆಚಾರ್ಯರ ಧರ್ಮೋಪದೇಶಕ್ಕೆ ಅನುಗುಣವಾಗಿ ನಡೆಯುವುದು. ಅದರ ಮೂಲಕ ಪರಿಶುದ್ಧವಾದ ಮನಸ್ಸನ್ನು ಎಂದೂ ಅರ್ಥ ಹೇಳಬಹುದು. ಏಕೆಂದರೆ ಅವರ ಉಪದೇಶಗಳೆಲ್ಲಾ ವೇದಶಾಸ್ತ್ರಾನುಗುಣವಾದವು.

ಹೀಗೆ ಯಾವಾಗ ಸತ್ಸಂಪ್ರದಾಯಾನುಷ್ಠಾನದಿಂದ ಮನಸ್ಸು ಪರಿಶುದ್ಧವಾ ಯಿತೋ, ಆಗ ಆತನು **ಸದರ್ಥಿ**ಯಾಗುತ್ತಾನೆ, ಸತ್ಸಂಗ, ಸಾತ್ವಿಕರೊಂದಿಗೆ ಭಾಷಣ, ಸಾತ್ವಿಕಾಹಾರ ಸೇವನೆ, ಸದಾಚಾರ್ಯಸೇವೆ ಮೊದಲಾದುವುಗಳಲ್ಲೇ ಅಭಿರುಚಿ ಯುಂಟಾಗುತ್ತದೆ. ಅನಂತರ **"ಬಂಧಾಯವಿಷಯಾಸಜ್ಞ ಮುಕ್ತ್ಯೈ ನಿರ್ವಿಷ**

**ಯಂ ಮುನಿಃ"** ಎಂದು ಹೇಳಿರುವ ಹಾಗೆ ಈ ಅಶಾಶ್ವತಗಳಾಗಿ ತುಚ್ಛವಾಗಿರುವ ಪುರುಷಾರ್ಥಗಳಲ್ಲಿ ಮಮತೆಯು ಕಳೆದು ಹೋಗಿ ಪರಮಪುರುಷಾರ್ಥವನ್ನೇ ಮನಸ್ಸು ಬಯಸುತ್ತದೆ. ಇದನ್ನೇ ಮುಂದೆಯೂ, **"ಸತೃಣೀಷ್ವಸಕ್ತಃ"** ಐಹಿಕೈಶ್ವರ್ಯಗಳೂ, ಸ್ವರ್ಗಾದ್ಯುಪಭೋಗಗಳು ಎಲ್ಲವೂ ಅಲ್ಪಾಸ್ಥಿರಗಳಾದುದರಿಂದ ತೃಣಕ್ಕೆ ಸಮಾನವು. ಅವುಗಳಲ್ಲಿ ಸಕ್ತನಾಗದೆ **"ಸಮಲೋಷ್ಟಾಶ್ಮಕಾಂಚನಃ"** ಎಂದು ಹೇಳಿರುವ ಹಾಗೆ ಕಲ್ಲು ಮಣ್ಣು ಹೊನ್ನು ಇವುಗಳನ್ನು ಸಮನಾಗಿ ಭಾವಿಸುವನಾಗುವನು.

**ಸಂಕೇತ ಭೀತಿರಹಿತಃ** ಇದು ಗೂಢವಾದ ಪ್ರಯೋಗವು. ಇದಕ್ಕೆ ಗ್ರಂಥಕರ್ತರೇ ಅರ್ಥವನ್ನು ಮುಂದಿನ ಪಾಶುರದಲ್ಲಿ **ತಿರೈವಳರ್ಕ್ಕುಂ ಶಿಲಮಾಂದರ್ ಶಙ್ಕೇತತ್ತಾಲ್ ಶಿದೈಯೂದತಿಣ್ಣರಿಯೋರ್** ಎಂದು ವಿವರಿಸಿರುತ್ತಾರೆ:- ಬಂಧನವನ್ನು ಬೆಳೆಸುವ ಕೆಲವು ಮನ್ದಮತಿಗಳು, ತಾವೇ ತಿಳಿದಿರುವದೇ ಸರಿ, ಇತರವಲ್ಲವು, ಎಂದು ಹೇಳುವವರ ಭಯವಿಲ್ಲದ ಸ್ಥಿರ ಮತಿಗಳೆಂದು ಉಪಾದಿಸಿರುತ್ತಾರೆ. ಇದರಿಂದ ಶಾಸ್ತ್ರಾರ್ಥಕ್ಕೆ ಅನುಗುಣವಾಗಿಯೇ ನಡೆಯತಕ್ಕದ್ದೆಂದೂ- ತಾನು ಗ್ರಹಿಸಿದುದು ಸರಿಯೇ ಇಲ್ಲವೇ ಎಂಬುದನ್ನು ತಿಳಿದವರೊಂದಿಗೆ ಚರ್ಚೆ ಮಾಡಿ, ತಾನು ಗ್ರಹಿಸಿದುದು ಸಮಂಜಸವಲ್ಲವೆಂದು ತೋರಿದರೆ ಅದನ್ನು ಪರಿತ್ಯಾಗ ಮಾಡಿ, ಸರಿಯಾದ ಅರ್ಥವನ್ನು ಅವಲಂಬಿಸತಕ್ಕದ್ದೆಂದು ಹೇಳಿದಂತಾಯಿತು ಅನೇಕರು ತಾವು ಪಂಡಿತರೆಂದು ಹೇಳಿಕೊಂಡು ತಮ್ಮ ಅಭಿಪ್ರಾಯವನ್ನೇ ಇತರರೂ ಅವಲಂಬಿಸಬೇಕೆಂಬ ಗರ್ವವುಳ್ಳವರಾಗಿರುವವರು. ತಮ್ಮ ಅಭಿಪ್ರಾಯದ ಮೇಲೆ ಪೂರ್ವಪಕ್ಷವನ್ನು ತಂದರೆ ಸಹಿಸದೆ ಕೋಪವನ್ನು ತಾಳುವರು. ಪ್ರತಿಯೊಂದು ಶಾಸ್ತ್ರಾರ್ಥಸ್ಥಾಪನೆಗೂ ಪೂರ್ವಪಕ್ಷವು ಅತ್ಯಾವಶ್ಯಕವು. ಆದುದರಿಂದ ಹೀಗೆ ವಿಚಾರ ಮಾಡದೆ ಇರುವವರು ಶಾಸ್ತ್ರಸಮ್ಮತವಲ್ಲದ ಅಭಿಪ್ರಾಯಗಳನ್ನು ತಂದರೆ ನಿರ್ಭಯನಾಗಿ ಅದನ್ನು ನಿರಾಕರಿಸುವ ಮನಸ್ಥೈರ್ಯವಿರಬೇಕೆಂಬ ಭಾವವು. ಇದಕ್ಕೆ ಒಂದೆರಡು ನಿದರ್ಶನವನ್ನು ಗೀತಾಶಾಸ್ತ್ರದಿಂದ ಹೇಳುವೆವು. **"ಕರ್ಮಣೈವ ಹಿಸಂಸಿದ್ಧಿಂ ಆಸ್ಥಿತಾ ಜನಕಾದಯಃ"** ಎಂಬುದಕ್ಕೆ ಒಬ್ಬ ಪಂಡಿತರು ಕರ್ಮದಿಂದಲೇ ಜನಕಾದಿಗಳು ಮೋಕ್ಷವನ್ನು ಹೊಂದಿದರೆಂದು, **ಏವ ಹಿ** ಪ್ರಯೋಗಗಳಿರುವದರಿಂದಲೂ, **ಸಂಸಿದ್ಧಿ** ಶಬ್ದಕ್ಕೆ ಮೋಕ್ಷವೆಂಬರ್ಥವಾಗುವದರಿಂದಲೂ, ಹಾಗೆ ಅರ್ಥ ಹೇಳಿದರೆ, ಇದರಿಂದ ನಾವು ಭ್ರಾಂತರಾಗಿ, ಪಂಡಿತರು ಎಂಬ ಭಯದಿಂದ ಗ್ರಹಿಸತಕ್ಕದ್ದಲ್ಲವು. ಏಕೆಂದರೆ ಮುಂದೆ **ನಾಹಂ ವೇದೈರ್ನತಪಸಾ ನದಾನೇನ ನಚೇಜ್ಯಯಾ** ಎಂಬಲ್ಲೂ "**ಇಯಾಜ ಸೋಪಿ ಸುಬಹೂ**" ಎಂಬಲ್ಲೂ, ಕೇವಲ ಕರ್ಮಯೋಗದಿಂದ ಮೋಕ್ಷವಿಲ್ಲವೆಂದು ಹೇಳಲ್ಪಟ್ಟಿರುತ್ತದೆ. ಲಕ್ಷ್ಮಿಯನ್ನು ಕುರಿತು ಬೋಧಿಸುವ ಎಲ್ಲಾ ಶಾಸ್ತ್ರಪ್ರಮಾಣಗಳು ಆಕೆಯು ಲೋ

ಕೈಕೇಶ್ವರಿ ಎಂದು ಹೇಳುತ್ತಿದ್ದರೂ, ಕೆಲವರು ನಮ್ಮಹಾಗೆಯೇ ಜೀವಕೋಟಿಗೆ ಸೇರಿದವಳೆಂದು ಹೇಳುವರು. ಅಂತಹ ಸಂದರ್ಭದಲ್ಲಿ ಶಾಸ್ತ್ರಜ್ಞನು ಅಂತಹ ಅಭಿಪ್ರಾಯವನ್ನು ನಿರಾಕರಿಸುವ ಮನಸ್ಥೈರ್ಯವಿರತಕ್ಕದ್ದು. ಕೆಲವು ಮಹನೀಯರು ಅಂತಹ ಶಾಸ್ತ್ರಾನುಮತಿಯಿಲ್ಲದ ಅಭಿಪ್ರಾಯಗಳನ್ನು ನಿರಾಕರಿಸಿಯೂ ಇರುತ್ತಾರೆ. ಗೀತೆಯ ೧೨ನೆಯ ಅಧ್ಯಾಯದ ಪ್ರಥಮ ಶ್ಲೋಕವಾದ **"ಏವಂ ಸತತಯುಕ್ತಾ ಯೇ"** ಎಂಬ ಶ್ಲೋಕದ ಪೂರ್ವಾರ್ಧ ಉತ್ತರಾರ್ಧಗಳಲ್ಲಿ ಹೇಳಲ್ಪಟ್ಟ ಅಧಿಕಾರಿಗಳು ಯಾರು ಎಂಬ ಚರ್ಚೆಯಲ್ಲಿ, ಕೆಲವು ಜ್ಞಾನಾಗ್ರೇಸರುಗಳು ಭಿನ್ನ ಭಿನ್ನವಾಗಿ ಅರ್ಥಗಳನ್ನು ಹೇಳಿರುತ್ತಾರೆ. ಅವರುಗಳ ಅರ್ಥಗಳು **ಏವಂ** ಎಂದರೆ ಪೂರ್ವೋಕ್ತಪ್ರಕಾರೇಣ ಎಂದು ಅರ್ಜುನವಾಕ್ಯವು ಆರಂಭಿಸುವದರಿಂದ ಈ ಅನ್ವಯದ ಅರ್ಥಕ್ಕೆ ಸರಿಹೋಗದೆ, ಹಿಂದೆ ಹನ್ನೊಂದು ಅಧ್ಯಾಯಗಳಲ್ಲೂ ಅವು ಎಲ್ಲಯೂ ಹೇಳದೇ ಇದ್ದರೆ ಅದನ್ನು ನಿರಾಕರಿಸುವ ಮನಸ್ಥೈರ್ಯವಿರಬೇಕೆಂದು ಹೇಳಿದರು. ಅಷ್ಟು ದೂರದಲ್ಲಿ ಚಂದ್ರಗ್ರಹಣವು ನಡೆದರೆ ಅದಕ್ಕಾಗಿ ಇಲ್ಲಿ ಆಚರಣೆ ಮೊದಲಾದವು ಏಕೆ ಅತ್ಯಾವಶ್ಯಕವು? ಆಕಾಲದಲ್ಲೇ ಊಟ ಮೊದಲಾದವು ಏಕೆ ಕೂಡದು? ಎಂದು ಪ್ರಬಲರಾದವರು ಹೇಳಿದರೆ ಅದಕ್ಕೆ ಭಯಪಟ್ಟು ನಾವು ಮೋಹಿತರಾಗಕೂಡದು. ಅದನ್ನು ಮನಸ್ಥೈರ್ಯದಿಂದ ನಿರಾಕರಿಸಿ, ನಾಲ್ಕು ಸಾವಿರ ಮೈಲಿಗಳ ದೂರದಲ್ಲಿ ನಡೆದ ಸಂಗೀತ ಇಲ್ಲಿ ನಾವು ಅನುಭವಿಸುತ್ತಿರುವಾಗ, ಅಷ್ಟು ದೂರದ ಚಂದ್ರಗ್ರಹಣದಿಂದ ಸಂಬಂಧವುಂಟಾಗಲಾರದೇ ಎಂದು ಕೇಳತಕ್ಕದ್ದು. ಆದುದರಿಂದ ಮಂದಪ್ರಜ್ಞರ ಮಾತಿಗೆ ಬೆರಗಾಗಕೂಡದು. ಹೀಗೆ ಅವರ ಮಾತಿಗೆ ವಶವಾಗದ ಸ್ಥಿರಮನಸ್ಕರು ತಮ್ಮ ಗ್ರಂಥಕ್ಕೆ ಅಧಿಕಾರಿಗಳೆಂದು ಹೇಳಿದರು. ಈ ಉಪದೇಶವು ಏತಕ್ಕೆಂದರೆ ಶ್ರೀ ನಿಗಮಾಂತ ದೇಶಿಕರ ಕಾಲದಲ್ಲೇ ಕೆಲವರು ಇವರ ಉಪದೇಶಕ್ಕೆ ವಿರುದ್ಧವಾಗಿ ಶಾಸ್ತ್ರಸಮ್ಮತವಲ್ಲದ ವಿಷಯಗಳನ್ನು ಪ್ರಕಟಿಸುತ್ತಿದ್ದರು. ಅದಕ್ಕಾಗಿ **ಸಂಕೇತಭೀತಿರಹಿತಃ,** ಎಂಬ ಪ್ರಯೋಗವು. ಅವರುಗಳು ಸಂಕೇತ ಭೀತಿ ಇಲ್ಲದವರಾದರೆ ತಮ್ಮ ಅಭಿಪ್ರಾಯವನ್ನೆಲ್ಲಾ ಅನುಮೋದಿಸಿರುತ್ತಾರೆ.

**ಸತೃಣೇಷ್ವಸಕ್ತಃ**:- ತೃಣಕ್ಕೆ ಸಮಾನಗಳಾದ ಖ್ಯಾತಿ ಲಾಭಪೂಜೆಗಳಲ್ಲಿ ಸಕ್ತನಾಗದೆಯೂ ಅಲ್ಪಾಸ್ಥಿರಗಳಾದ ಐಹಿಕೋಪಭೋಗಗಳಲ್ಲಿ ಆಶೆಯಿಲ್ಲದಿರುವರು. ತಮ್ಮ ಗ್ರಂಥಕ್ಕೆ ಅಧಿಕಾರಿಗಳು ಎಂದು ಹೇಳಿದರು. "ಧರ್ಮಾರ್ಥಕಾಮೈರಖಿ ಮಲ್ಪಕಾಸ್ತೆ" ಎಂಬ ಶ್ರೀಪರಾಶರೋಕ್ತಿಯು ಅನುಸಂಧೇಯವು.

ಅನೇಕ ವಿರಕ್ತ ಶಿಖಾಮಣಿಗಳು ಈ ಗ್ರಂಥದಲ್ಲೂ ಮತ್ತು ಇವರ ಇತರ ಗ್ರಂಥಗಳಲ್ಲೂ ಅಸದೃಶವಾದ ಆದರವುಳ್ಳವರನೇಕರು ಇರುತ್ತಾರೆ. ಆದುದರಿಂದ ತಾವು ಈಗ ಈ ಗ್ರಂಥದಲ್ಲಿ ಉಪಪಾದಿಸಿರುವದು. **ಶಾಶ್ವತೀಸದ್ವರ್ತನೀ-**

**ಮರ್ರೈಯುರ್ರೈಕ್ಕು ಪ್ಪೊರುಳೆಲ್ಲಾಮ್ ಮೆಯ್ಯೆನ್ ರೋರ್‌ವಾರ್**
**ಮನ್ನಿಯ ಕೂರ್‌ಮತಿಯುಡೈಯಾರ್‌ವಣ್ ಗುಣತ್ತಿಲ್!**
**ಕುರೈಯುರೈಕ್ಕ (ನಿನೈಕ್ಕ) ನಿನೈ ವಿಲ್ಲಾರ್ಗ್ ಕುರುಕ್ಕಳವಾಲ್**
**ಕೋದತ್ತ ಮನನ್ಪೈತ್ತಾರ್ ಕೊಳ್‌ವಾರ್‌ನನ್ಮೈ (ನೈ)**

---

ಪರಮಹಿತವಾದ ಶಾಶ್ವತ ಫಲದಾಯಕವಾದ ಮಾರ್ಗವು. ಇವನ್ನು ಮೇಲೆ ಹೇಳಿದ ಅಧಿಕಾರಿಗಳೆಲ್ಲರೂ ಅವಲಂಬಿಸುವರು. ಏನೊಂದೂ ನಿರರ್ಥಕವಾಗಿ ಬರೆದೆನೇ ಎಂಬ ಕೊರತೆಯು ಇಲ್ಲವೆಂದು ಅಪ್ಪಣೆ ಕೊಡಿಸಿದರು. ತಮ್ಮ ಪೂರ್ವಾಚಾರ್ಯರು ತೋರಿಸಿದ ಮತ್ತು ಸತ್ಸಂಪ್ರದಾಯ ರೀತ್ಯಾ ಬಂದುದೇ ಸರಿಯಾದ ಮಾರ್ಗವೆಂದು ಹಿಂದೆಯೂ ತಿಳಿಸಿರುತ್ತಾರೆ. " **ಹೃದ್ಯಾಹೃತ್ಪದ್ಮಸಿಂಹಾಸನ** " ವೆಂಬ ಗುರುಪರಂಪರಾಧಿಕಾರಾಂತ್ಯದಲ್ಲಿರುವ ಶ್ಲೋಕವನ್ನು ನೋಡಿ.(೧೧೨ನೆಪುಟ)

**ಅವತಾರಿಕೆಯು.** ಮೇಲಿನ ಶ್ಲೋಕದಲ್ಲಿ ಹೇಳಿದ ವಿಷಯವನ್ನೇ ಉಪಪಾದಿಸಿ ಈ ಮುಂದಿನ ಪಾಶುರದ ಮೂಲಕ ತಿಳಿಸುತ್ತಾರೆ.

**ಅರ್ಥವು- ಮರ್ರೈಯುರ್ರೈಕ್ಕುಮ್**-- ವೇದಗಳು ಹೇಳುವ, ಬೋಧಿಸುವ, **ಪ್ಪೊರುಳೆಲ್ಲಾಮ್**- ತತ್ವಹಿತ ಪುರುಷಾರ್ಥರೂಪಾಭಿಪ್ರಾಯಗಳೆಲ್ಲಾ, **ಮೆಯ್ಯೇನ್** ಪರಮಾರ್ಥವೆಂದು, **ಓರ್‌ವಾರ್**- ತಿಳಿದು ಪರಮ ವಿಶ್ವಾಸವನ್ನು ಇಟ್ಟ ಆಸ್ತಿಕರು, (ಇದು ಆಸ್ತಿಕ್ಯವಾ೯ ಎಂದು ಹಿಂದಿನ ಶ್ಲೋಕದಲ್ಲಿರುವದರ ಅರ್ಥವು,) **ಮನ್ನಿಯಕೂರ್ ಮತಿಯುಡೈಯಾರ್; ಮನ್ನಿಯ**- ದೃಢವಾದ ಸ್ಥಿರವಾದ, **ಕೂರ್**-ಸೂಕ್ಷ್ಮವಾದ, **ಮತಿಯುಡೈಯಾರ್**, ಬುದ್ಧಿಯಳ್ಳವರು (**ನಿಶಿತಬುದ್ಧಿಯ** ಅರ್ಥವು), **ವಣ್‌ಗುಣತ್ತಿಲ್**- ಇತರರಾದ ಪ್ರಾಜ್ಞರ ವಿಲಕ್ಷಣವಾಗಿ ಸ್ತೋತ್ರಾರ್ಹವಾದ ಗುಣವಲ್ಲಿ, **ಕುರೈಯುರೈಕ್ಕ**- ಇಲ್ಲದ ನ್ಯೂನತೆಯನ್ನು ಹೇಳುವ ಅಥವಾ ಎಣಿಸುವ, **ನಿನೈವಿಲ್ಲಾರ್**- ಸಙ್ಕಲ್ಪವಿಲ್ಲದವರು (ಇದು **ಅನಭ್ಯಸೂಯುಃ** ಎಂಬುದರ ಅರ್ಥವು,) ಗುಣವಿರುವ ಸ್ಥಳದಲ್ಲಿ ದೋಷಾರೋಪಣೆಯು ಅಸೂಯೆಯು, ಅದಿಲ್ಲದವರು ಎಂಬಅರ್ಥವು. **ಕುರುಕ್ಕಳತನ್ನಾಲ್**- ಸದ್ಗುರುಗಳ ಮೂಲಕ, **ಕೋದತ್ತ**- ನಿಸ್ಸಾರವಾದ ಭ್ರಮಜ್ಞಾನಗಳನ್ನು ಉಪದೇಶ ಮೂಲಕ ಕಳೆದುಕೊಂಡ, **ಮನನ್ಪೈತ್ತಾರ್**- ಪರಿಶುದ್ಧ ಮನಸ್ಸನ್ನು ಹೊಂದಿದವರು (ಇದು **ಸತ್ಸಂಪ್ರದಾಯ ಪರಿಶುದ್ಧಮನಾಃ** ಎಂಬುದರ ವ್ಯಾಖ್ಯಾನವು.) **ಕೊಳ್‌ವಾರ್‌ನನ್ಮೈ**- ನನ್ಮೈಯನ್ನು ಎಂದರೆ ಗುಣಗ್ರಾಹಿಗಳು ಸಾರಭೂತವಾಗಿ ಉಪಾದೇಯವಾದವನ್ನು ಗ್ರಹಿಸುವವರು, **ಕೊಳ್‌ವಾರ್ ನನ್ಮೈ** ಎಂದು ಪಾಠವಾದರೆ ನಮ್ಮನ್ನು ಕೊಳ್ಳುವ ಎಂದರೆ ಆಳುವ ಪ್ರಪನ್ನರು

**ಶಿರ್ರೈವಳರ್ಕ್ಕುಂ ಶಿಲವೂನ್ದರ ಶಙ್ಕೇತಕ್ಕಾಲ್**
**ಶಿತ್ರೈಯೂದ ತಿಣ್ಮತಿಯೋರ್ ತೆರಿನ್ದದೋರ್ವಾರ್ (ತೆರಿನ್ದತೋರ್ವಾರ್)**
**ಪೊರೆನಿಲತ್ತಾನ್‌ಮಿಕು ಮ್ಪುನಿದರ್‌ಕಾಟ್ಟುಂ ಎಙ್ಗಳ್**
**ಪೊನ್ರಾದ ನನ್ನೆರಿಯಿಲ್ ಪುಕುದವಾರೇ ||೫೨||**

---

ಭಾಗವತಶೇಷತ್ವವು ಹೇಳಲ್ಪಟ್ಟಿತು ; ಪ್ರಪನ್ನ ಆಜ್ಞಾನಿರ್ವಾಹಕರು ಎಂಬರ್ಥವು) **ಶಿರ್ರೈವಳರ್ಕ್ಕುಂ**- ಬಂಧನವನ್ನು ಎಂದರೆ ಸಂಸಾರವನ್ನು ಬೆಳೆಸುವ, **ಶಿಲವೂಂದರ್** ಕೆಲವು ಶಾಸ್ತ್ರದ ಸರಿಯಾದ ಜ್ಞಾನವಿಲ್ಲದ ಮಂದಮತಿಗಳ, **ಸಂಕೇತತ್ತಾಲ್**- ನಾವು ಹೇಳುವದೇ ಸರಿ ಎಂಬ ಹಟದಿಂದ, **ಶಿದ್ರೈಯೂದ ತಿಣ್‌ಮತಿಯೋರ್**- ವ್ಯತ್ಯಸ್ತವನ್ನು ಹೊಂದದ ಸ್ಥಿರಬುದ್ಧಿಯುಳ್ಳವರು (ಇದು **ಸಂಕೇತ ಭೀತಿ ರಹಿತಃ** ಎಂಬುದರ ಅರ್ಥವು , **ಶಿರನ್ದದು ಓರ್‌ವಾರ್**- ನಿರತಿಶಯವಾದ ಪುರುಷಾರ್ಥವನ್ನು ಅಪೇಕ್ಷಿಸುವವರು, **ತೆರಿನ್ದದು ಓರ್‌ವಾರ್** ಎಂಬ ಪಾಠವಾದರೆ, ಸದಸದ್ವಿವೇಕವನ್ನು ಹೊಂದಿ ಅಸತ್ತಾದ ಖ್ಯಾತಿ ಲಾಭಪೂಜೆಯನ್ನು ಬಿಟ್ಟು ಸತ್ತನ್ನು ಪರಿಗ್ರಹಿಸುವವರು ; ( ಇದು ಸತ್ಯಪೇಕ್ಷ್ಯಸಕ್ತಃ ಎಂಬುದರವ್ಯಾಖ್ಯಾನವು ) ಇಂತಹ ಅಧಿಕಾರಿಗಳು,

**ಪೊರೆನಿಲತ್ತಾನ್**- ಕ್ಷಮಾಸೀಮಾ ಭೂಮಿಯಲ್ಲಿ **ಮಿಗುಮ್‌ಪುನಿದರ್** ಅಧಿಕಪರಿಶುದ್ಧರು, ಎಂದರೆ ನಿರತಿಶಯ ಕ್ಷಮಾಗುಣ ವಿಶಿಷ್ಟರಾದ ನಮ್ಮ ಆಚಾರ್ಯರು **ಕಾಟ್ಟುಂ** ತೋರಿಸಲ್ಪಟ್ಟ (**ಸದ್ವರ್ತ್ಮನೀಂ ಎಂಬುದರ ಅರ್ಥವು) ಎಙ್ಗಳಪೊನ್ರಾದ** ನಮ್ಮ ಶಾಶ್ವತವಾದ (**ಶಾಶ್ವತೀಂ** ಅರ್ಥವು) **ನನ್ನೆರಿಯಿಲ್**- ಒಳ್ಳೇ ಮಾರ್ಗದಲ್ಲಿ, **ಪುಕುದವಾರೆ**- ಅವಶ್ಯಕವಾಗಿ ಪ್ರವೇಶಿಸುವರಷ್ಟೇ.

**ಉಪಪಾದನೆಯು- ಮರ್ರೈಉರಕ್ಕುಂ ಪೊರುಳಿಲ್ಲಾಮೆಯ್ ನೋರ್ ವಾರ್** ಎಂಬುದರಿಂದ ಪ್ರಮಾಣಶರಣರುತಾವೆಂದೂ, ವೇದ ವೇದಾಂತಗಳಿಗೆಲ್ಲಾ ಸಾಮಂಜಸ್ಯವನ್ನು ಕಂಡುಹಿಡಿದು ಯಥಾರ್ಥಾಭಿಪ್ರಾಯವನ್ನು ಗ್ರಹಿಸಿದವರಾದ **ವೇದಾಂತಾಚಾರ್ಯರು** ತಾವೆಂದೂ, ಹಾಗೆ ತಮ್ಮನ್ನು ಆಶ್ರಯಿಸಿದವರು ಈ ಗ್ರಂಥವನ್ನು ಅನುಮೋದಿಸುವರೆಂದು ಹೇಳಲ್ಪಟ್ಟಿತು. ಇಲ್ಲಿ ವೇದ ವೇದಾಂತಗಳನ್ನು ಹೇಳಿದುದು ಅವುಗಳ ಉಪಬ್ರಹ್ಮಣಗಳಾದ ಸ್ಮೃತಿ, ಇತಿಹಾಸ ಪುರಾಣಗಳೂ, ಸಂಹಿತಾ, ಸೂಕ್ತ ಮೊದಲಾದವುಗಳೂ ಹೇಳಲ್ಪಟ್ಟವು. ಕೆಲವು ಶ್ರುತಿಗಳು ಪರಸ್ಪರ ವಿರೋಧವಿರುವ ಅರ್ಥಗಳನ್ನು ಉಪಪಾದಿಸುವ ಹಾಗೆ ತೋರಬಹುದು. ಆದುದರಿಂದ ಸಾಧಾರಣ ಬುದ್ಧಿ, ಮತ್ತು ಮಂದಬುದ್ಧಿಗಳಿಗೂ ಸರಿಯಾದ ಅರ್ಥಗ್ರಹಣ ಉಂಟಾಗದೆ "**ತ್ರಯ್ಯಾಪಿವ್ಯೆಯಾಕುಲೀ**" ಎಂಬುದನ್ನನುಸರಿಸಿ ಅಪಾರ್ಥಗಳನ್ನು ಹೇಳುವ ಕುದೃಷ್ಟಿಗಳಾಗ ಬಹುದು. ಆದುದರಿಂದ ವೇದಾಂ

ತಾರ್ಥಗಳನ್ನು ಸರಿಯಾಗಿ ಗ್ರಹಿಸುವ ಸೂಕ್ಷ್ಮಬುದ್ಧಿಯುಳ್ಳವರಾಗಿರಬೇಕೆಂದು **ಮನ್ನಿಯ ಕೂರ್ ಮತಿಯೋರ್** ಎಂದು ಹೇಳಲ್ಪಟ್ಟರು. ಇದರಿಂದ ಮಂದ ಮತಿಗಳು ಈ ಗ್ರಂಥದಲ್ಲಿ ಅಡಗಿರುವ ಸ್ವಾರಸ್ಯಗಳನ್ನೆಲ್ಲಾ ಗ್ರಹಿಸಲಾರರೆಂದೂ ಹೇಳಿದಂತಾಯಿತು. ಆದುದರಿಂದ ಗ್ರಹಿಸಬೇಕೆಂಬ ಶ್ರದ್ಧೆ ಇದ್ದುದಾದರೆ ಒಬ್ಬ ಪ್ರಾಜ್ಞರಾದ ಆಚಾರ್ಯರನ್ನು ವರಿಸಿ ಉಪದೇಶವನ್ನು ಹೊಂದಬೇಕೆಂದು ತಿಳಿಸುವದಕ್ಕಾಗಿ **ಗುರುಕ್ಕಳ್ ತನ್ಪಾಲ್ ಕೋದತ್ತ ಮನಂಪೆತ್ತಾರ್** ಎಂದು ಹೇಳಿದರು. ಗುರುಗಳ ಉಪದೇಶದ ಮೂಲಕ ಭ್ರಮಜ್ಞಾನಗಳೂ ಅನ್ಯಥಾ ವಿಪರೀತ ಜ್ಞಾನಗಳೂ ಇವೆಲ್ಲವೂ ತೊಲಗಿ ಮನಸ್ಸು ನಿರ್ಮಲವಾಗಿ ಪರಿಶುದ್ಧವಾಗುತ್ತದೆ. ; ಅಂತವರು ಅಧಿಕಾರಿಗಳು ಎಂದು ಹೇಳಿದರು. ಗುರುಗಳೇ ಬೇಕಿಲ್ಲವು: ಎಲ್ಲವನ್ನೂ ನಾನೇ ಗ್ರಹಿಸಬಲ್ಲೆನೆಂಬ ಅಹಂಭಾವವುಳ್ಳವನು ಇದಕ್ಕೆ ಅಧಿಕಾರಿಯಲ್ಲವೆಂದು ಇದರಿಂದ ಹೇಳಿದಂತಾಯಿತು. ಏಕೆಂದರೆ ಸದ್ಗುರುವು ಸ್ವಾಲಿತ್ಯೋಶಾಸಿತಾವಾದುದರಿಂದ ಸರಿಯಾದ ಜ್ಞಾನವುಂಟಾಗಲು ಅವಶ್ಯಕವು. ಸದ್ಗುರುವು ಪರಮಾತ್ಮನ ಹಾಗೆ ಹತ್ತು ಗುಣಗಳನ್ನುಳ್ಳವನೆಂದು ಹಿಂದೆಯೇ ಉಪಾದಿತವಾಗಿರುವದರಿಂದ ಸರ್ವೇಶ್ವರನಲ್ಲಿ ಎಷ್ಟು ಭಕ್ತಿಯನ್ನು ಇಡತಕ್ಕದ್ದೋ ಅಷ್ಟು ಭಕ್ತಿಯಿಂದಲೂ ಪರಮಾಚಾರ್ಯರನ್ನು ಆಶ್ರಯಿಸತಕ್ಕದ್ದು. ಎಲ್ಲರೂ ಪರಮಾಚಾರ್ಯರಾಗಲಾರರು : ಆದುದರಿಂದ ವಿವೇಕದಿಂದಲೂ ಜಾಗರೂಕತೆಯಿಂದಲೂ ತಿಳಿದವರೊಂದಿಗೆ ಆಲೋಚಿಸಿ ಮಹತ್ತಾದ ವಿರಕ್ತಿಭಾವದಿಂದಲೂ ಕರ್ಮನಿಷ್ಠೆ ಜ್ಞಾನನಿಷ್ಠೆಗಳಿಂದಲೂ ಪ್ರಖ್ಯಾತರಾದ ಅತ್ಯಂತ ಪ್ರಾಜ್ಞರಾದ, ಆಚಾರ್ಯರನ್ನು ಆಶ್ರಯಿಸತಕ್ಕದ್ದಾಗಿರುತ್ತದೆ. ಹೀಗೆ ಸತ್ಸಂಪ್ರದಾಯದಿಂದ ಬಂದ ಉಪದೇಶದಿಂದಲೇ ಮನಸ್ಸು ಪರಿಶುದ್ಧತೆಯನ್ನು ಹೊಂದುತ್ತದೆಂದೂ, ಅಂತವರು ತಮ್ಮ ಗ್ರಂಥವನ್ನು ಆದರಿಸುವರೆಂದು ಹೇಳಿದರು. **ನನ್ಮೈಕೊಳ್ವಾರ್**- ಶಾಸ್ತ್ರಜ್ಞಾನಾವಲಂಬಿಯಾಗಿ ಗುಣಗ್ರಾಹಿಗಳಾದರೆ ಅವರು ತಮ್ಮ ಪಂಗಡಕ್ಕೆ ಸೇರಿಯೇ ಇರಲಿ, ಸೇರದೇ ಇರಲಿ, ಇದನ್ನು ಪರಿಗ್ರಹಿಸದೇ ಇರರೆಂಬ ಭಾವವು- **ನಮ್ಮೈಕೊಳ್ವಾರ್ರೆಂಬ** ಪಾಠವಾದರೆ ಶ್ರೀದೇಶಿಕಗುರುಗಳಿಂದ ಈ ಗ್ರಂಥದಲ್ಲೇ **ಕ್ರಯ ವಿಕ್ರಯಾರ್ಹರು** ಪ್ರಪನ್ನರು, ಪರಸ್ಪರ ಶೇಷ ಶೇಷಿ ಭಾವವನ್ನು ಹೊಂದಿದವರು ಎಂದು ಹೇಳಲ್ಪಟ್ಟಿರುವವರು : ಅಂತವರು ಅಧಿಕಾರಿಗಳೆಂದು ಹೇಳಿದರು. ಆದರೆ ಹಿಂದಿನ ಸಂಸ್ಕೃತಶ್ಲೋಕದ **ಸದರ್ಥೀ** ಎಂಬುದರ ವ್ಯಾಖ್ಯಾನವು ಇದಾದುದರಿಂದ **ನನ್ಮೈ ಕೊಳ್ವಾರ್** ಎಂಬ ಪಾಠವೇ ಸರಿಯಾದುದಾಗಿ ತೋರುತ್ತದೆ. **ಶಿರೈವಳರ್ಕ್ಕಿಂ ತಿಣ್ಮತಿಯೋರ್**- ಇದು **ಸಂಕೇತ ಭೀತಿರಹಿತಃ** ಎಂಬುದರ ಉಪಪಾದನೆಯು. ಕೆಲವರು ಸಂಸಾರವರ್ಧಕರೆಂದು ಇಲ್ಲಿ ಹೇಳಿದುದು ಏಕೆಂದರೆ ಅವರಿಗೆ ಪ್ರಪದನವು ಉಪಾಯವೇ ಅಲ್ಲವೆಂಬ ಅಭಿಪ್ರಾಯವುಳ್ಳವರಾದು

ದರಿಂದ ಉಪಾಯಾನುಷ್ಠಾನವನ್ನು ಅವರು ಮಾಡುವುದಿಲ್ಲವಾದುದರಿಂದ; ಏಕೆಂದರೆ ಈ ಜೀವಾತ್ಮನು ಭಗವಂತನ ಸ್ವತ್ತು ; ಆತನ ಪದಾರ್ಥವನ್ನು ತನ್ನದು ಎಂದುಬಹು ಕಾಲ ಭ್ರಮಿಸಿ ಹಾಗೆ ಚೋರಕೃತ್ಯವನ್ನು ನಡೆಸಿ, ಅನಂತರ ಜ್ಞಾನವುಂಟಾಗಿ, ಅದನ್ನು ಅವನಿಗೆ ಸಮರ್ಪಿಸಿಬಿಟ್ಟರೆ, ಆತನು ಅವಕ್ಕಾಗಿ ಕೃಪೆ ಮಾಡಬೇಕೆಂಬ ಅವಶ್ಯಕ ಕವೇನು ಎನ್ನುವರು ; ಆಕಾರಣದಿಂದ ಆತ್ಮ ಸಮರ್ಪಣೆಯು ಉಪಾಯವಾಗು ವದಿಲ್ಲವೆಂಬುದು ಕೆಲವರ ಅಭಿಪ್ರಾಯವು. ಶರಣ್ಯನ ದಿವ್ಯಸೂಕ್ತಿಗಳೇ ಆತ್ಮಸಮ ರ್ಪಣೆಯು ಒಂದು ಮಹತ್ತಾದ ಉಪಾಯವೆಂದು, **"ಸಕೃದೇವ ಪ್ರಪನ್ನಾಯ" "ಸರ್ವಧರ್ಮಾನ್ ಪರಿತ್ಯಜ್ಯ" "ಮಿತ್ರಭಾವೇನ ಸಂಪ್ರಾಪ್ತಂ"** ಇತ್ಯಾದ್ಯನೇಕ ಸಂದರ್ಭಗಳಲ್ಲಿ ಹೇಳಿರುವವನ್ನೂ, **"ಓಮಿತ್ಯಾತ್ಮಾನಂಯುಂಜೀತ" "ಮುಮುಕ್ಷುರ್ವೈಶರಣಮಹಂಪ್ರಪದ್ಯೇ"** ಇತ್ಯಾದಿ ಶ್ರುತಿವಾಕ್ಯಗಳನ್ನೂ ಗಮನಿಸದೆ ತಪ್ಪು ಅಭಿಪ್ರಾಯಗಳುಳ್ಳವರಾದುದರಿಂದ ಅವರು **ಮಾನ್ದರ್**- ಬುದ್ಧಿಮಾಂದ್ಯರು ಅಜ್ಞರೆಂದು ಹೇಳಲ್ಪಟ್ಟರು. ಇವರುಗಳು ತಮ್ಮ ಅಭಿಪ್ರಾಯವೇ ಸರಿಯಾದುದು! ಇತರರ ಅಭಿಪ್ರಾಯವು ಸರಿಯಲ್ಲನೆಂಬ ಸಂಕೇತನನ್ನು ಮಾಡಿಕೊಂಡವನು ; ವಿವೇಕಬುದ್ಧಿಯಿಂದ ವಿಮರ್ಶಿಸಿ ಸಾಧ್ವಸಾಧುವೆಂಬುದನ್ನು ನಿಶ್ಚಯಿಸದೇ ಹಟ ಹಿಡಿದವರು. ಆಗಮೋತ್ಥಜ್ಞಾನ ಮತ್ತು ವಿವೇಕೋತ್ಥಜ್ಞಾನ ಇವೆರಡೂ ಸರಿಯಾದ ಅಭಿಪ್ರಾಯಗಳನ್ನು ಗ್ರಹಿಸಲು ಬೇಕಾದವು; ಇವೆರಡೂ ಇಲ್ಲದವರು ; ಇಂತವರ ಸಂಬಂಧ ತಮಗಿದ್ದರೂ ಅಂತಹ ಅಭಿಪ್ರಾಯಗಳಿಗೆ ಮನಗೊಡದೆ ಸ್ಥಿರಮತಿಗಳನ್ನು ಳ್ಳವರೂ ತಮ್ಮ ಗ್ರಂಥಕ್ಕೆ ಅಧಿಕಾರಿಗಳೆಂದು ಹೇಳಿದರು. ಹೀಗೆ ಸ್ಥಿರಮತಿಗ ಳಾಗಿ ತಮ್ಮ ಈ ಗ್ರಂಥವನ್ನು ಆದರಿಸಿರುವದಕ್ಕೆ ದೃಷ್ಟಾಂತ ಉಂಟೋ ? ಎಂದರೆ ಒಂದೆರಡನ್ನು ಹೇಳುವೆವು:- ಪ್ರತಿವಾದಿ ಭಯಂಕರ ಅಣ್ಣನ್ ಎಂಬ ಮಹನೀಯರು ; ಮತ್ತು ಯತೀನ್ದ್ರರಾದ ಶ್ರೀಮದ್ವರದ ರಾಮಾನುಜ ದೇಶಿಕ ವರ್ಯರು. ಇದೂ ಅಲ್ಲದೆ ಶ್ರೀ ನಿಗಮಾನ್ತ ದೇಶಿಕರವರ ಗ್ರಂಥಗಳ ಮಹಾತ್ಮ್ಯ ಯನ್ನು ಗ್ರಹಿಸಿದ ಅನೇಕ ಪ್ರಾಜ್ಞರೂ ಅಸೂಯೆಯ ಗಂಧವೇ ಇಲ್ಲದೆ ಇರುವದನ್ನೂ ಕೂಡ ನಾವು ಕಂಡಿರುವೆವು ಯಾರು ಅಸೂಯಾಪರರು ಎಂದರೆ ಶಾಸ್ತ್ರಜ್ಞಾನ ವಿವೇಕಜ್ಞಾನ, ಎರಡೂ ಇಲ್ಲದವರು ಮಾತ್ರವೇ. ಒಬ್ಬ ಮಾಧ್ವ ಘನ ಪಂಡಿತರು ಇವರ ಸಂಕಲ್ಪ ಸೂರ್ಯೋದಯ ಗ್ರಂಥವನ್ನು ಅವಲೋಕಿ ಸುತ್ತಾ " **ದರ್ಪೋದಗ್ರದಶೇಂದ್ರಿಯಾನನಮನೋ** "ಎಂಬ ಶ್ಲೋಕಾರ್ಥ ವನ್ನು ಗ್ರಹಿಸಿ, ಪುಸ್ತಕವನ್ನು ಕೆಳಗಿಟ್ಟು ಕೈಜೋಡಿಸಿ ನಮಸ್ಕಾರ ಮಾಡಿ ಮಹಾನುಭಾವರೆಂದು ಶ್ಲಾಘಿಸಿದುದನ್ನು ಕಂಡಿರುವೆನು. ಕುಂಭಕೋಣದ ಒಬ್ಬ ಅದ್ವೈತ ಸಿದ್ಧಾನ್ತ ಘನಪಂಡಿತರು ಈ ರಹಸ್ಯತ್ರಯಸಾರದ ಮುಖ್ಯ ಸಂಸ್ಕೃತ ಶ್ಲೋಕಗಳನ್ನೆಲ್ಲಾ ಬಾಯಲ್ಲಿ ಹೇಳಿದುದನ್ನು ನಾನು ಕಂಡಿರುವೆನು. ಮಹಾನು

ಭಾವರಾದ ಅಪ್ಪೈಯ್ಯದೀಕ್ಷಿತರೇ ಮೊದಲಾದವರೇ ಇವರ ಗ್ರಂಥಗಳನ್ನು ಪುರಸ್ಕರಿಸಿರುವಾಗ ಇತರರ ಮಾತೇನು. **ಆದುದರಿಂದ ನಮ್ಮ ಶ್ರೀ ವೈಷ್ಣವ ಸಂಗಡದಲ್ಲೇ** ತುಂಬಾ ಪ್ರಾಜ್ಞರಾದವರು ಎಲ್ಲರೂ ಇವರ ಗ್ರಂಥಗಳನ್ನು ಆದರಿಸುವರೆಂಬುವದು ನಿಸ್ಸಂದೇಹ ವಿಷಯವು. ಇವರ ಗ್ರಂಥವನ್ನು ಆದರಿಸುವ ಅಧಿಕಾರಿಯಾಗುವುದಕ್ಕೆ ಇನ್ನೊಂದು ಮುಖ್ಯ ಕೇತುವನ್ನು ಹೇಳುತ್ತಾರೆ. ಐಹಿಕವನ್ನು ಚನ್ನಾಗಿ ತೊರೆದು ಮೋಕ್ಷಾಪೇಕ್ಷೆಯುಳ್ಳ ವೈರಾಗ್ಯವುಳ್ಳವರು ಮುಖ್ಯಾಧಿಕಾರಿ ಎಂದು ಹೇಳುತ್ತಾರೆ. ಏಕೆಂದರೆ ಇದು ಮೋಕ್ಷ ಶಾಸ್ತ್ರವು; ಅದು ನಿಪುಣತರವಾಗಿ ಎಲ್ಲರಿಗೂ ತಿಳಿಯುವ ಶೈಲಿಯಲ್ಲಿ ರಚಿಸಲ್ಪಟ್ಟಿರುವುದರಿಂದ ಪರಮಗ್ರಾಹ್ಯವು. ತತ್ವಹಿತ ಪುರುಷಾರ್ಥವು ಬಹು ವಿಶದವಾಗಿ ಉಪಪಾದಿತವು. ಆದುದರಿಂದ **ತೆರಿನ್ದ ದೋೀರಾರ್**-ತೃಣಕ್ಕೆ ಸಮಾನಗಳೆಂದು ತಿಳಿದ ಐಹಿಕಗಳನ್ನು ಅಪೇಕ್ಷಿಸದೇ ಇರುವರು. ಇದು **ಸತ್ಯಕೇಷ್ವಸಕ್ತಃ**, ಎಂಬುದರ ಉಪಪಾದನೆಯು. ಯಾವಾಗ ಕ್ಷುದ್ರಗಳನ್ನು ಅಪೇಕ್ಷಿಸದವರು ಎಂದು ಹೇಳಲ್ಪಟ್ಟಿತೋ, ಆಗ ನಿರತಿಶಯ ಪುರುಷಾರ್ಥವಾದ ಮೋಕ್ಷಾಪೇಕ್ಷೆಯುಳ್ಳವರೆಂದೂ ಹೇಳಿದಂತಾಯಿತು. ಇದಕ್ಕೆ **ಇನ್ನೊಂದು ಪಾಠ ಉಂಟು;** ಅದು ಈ ಎರಡನೆಯ ಅಭಿಪ್ರಾಯವನ್ನೇ **ತಿಳಿ**ಸುತ್ತದೆ, **ತೆರಿನ್ದ ದೋೀರಾರ್** ಎಂಬುದು ಇನ್ನೊಂದು ಪಾಠವು; **ತೆರಿನ್ದು ಅದು ಓರ್ವಾರ್**-ಇದು ಕ್ಷುದ್ರಫಲ ಇದು ಶಾಶ್ವತಫಲವೆಂದು ಹೀಗೆ ಸದಸದ್ವಿವೇಕವನ್ನು ಹೊಂದಿ, ಅಸತ್ತನ್ನು ತ್ಯಾಗ ಮಾಡಿ, ಸತ್ತಾದ ನಿರತಿಶಯ ಫಲವನ್ನು **ಒರ್ವಾರ್**-ಅಪೇಕ್ಷಿಸುವವರು; ಎರಡು ಪಾಠಗಳೂ ಒಂದೇ ಅರ್ಥವುಳ್ಳವು, ಇದರಿಂದ ಅಸತ್ತಾದ ಕ್ಷುದ್ರ ಫಲವನ್ನು ಕೋರುವರಲ್ಲವೆಂಬುದು ವ್ಯಕ್ತವು.

**ಪೊರ್ಱೈ ನಿಲತ್ತಿನ್ ಮಿಕುಮ್ಮುನಿತೆರ್**—ಕ್ಷಮಾಸೀಮಾ ಭೂಮಿಯಲ್ಲಿ ಹೆಚ್ಚಾದ ಪರಿಶುದ್ಧರಾದ ತಮ್ಮ ಆಚಾರ್ಯರು, **ಕಾಟ್ಟುಂ**–ಅವರುಗಳಿಂದ ತೋರಿಸಲ್ಪಟ್ಟ, **ಪೊನ್ನಾದ**-ಶಾಶ್ವತವಾದ, **ಸನ್ಮರ್ತ್ತಿನಿಯಿಲ್**-ಸಮೀಚೀನವಾದ ಮಾರ್ಗದಲ್ಲಿ ಎಂದರೆ ಉಪಾಯದಲ್ಲಿ, **ಪುಗುದುವಾರೆ**-ಪ್ರವೇಶಿಸುವರಷ್ಟೆ. ಈ ಗ್ರಂಥದಲ್ಲಿ ಉಪಪಾದಿತವಾದ ಲಘುವಾಗಿ, ಕ್ಷಿಪ್ರದಲ್ಲಿ ಭಗವತ್‌ಪ್ರಸನ್ನತೆಯನ್ನು ಸಂಪಾದಿಸಿಕೊಡುವ ಶಾಶ್ವತವಾದ ಭರನ್ಯಾಸರೂಪ ಮಾರ್ಗವನ್ನು ಮೇಲೆ ಹೇಳಿದ ಎಲ್ಲಾ ಅಧಿಕಾರಿಗಳು ಅವಲಂಭಿಸುವರು, ಇದರಲ್ಲೇನೂ ಸಂದೇಹವಿಲ್ಲವೆಂಬ ಭಾವದಿಂದ **ಪುಗುದವಾರೇ** ಎಂದು ಹೇಳಿದರು. **ಈ** ಸಾಧ್ಯೋಪಾಯ ಮಾರ್ಗವನ್ನು ಬೋಧಿಸುವರ್ಯಾರು? ಎಂದರೆ ತಮ್ಮ ಗುರುಗಳಾದ ಕಿಡಾಂಬಿ ಅಪ್ಪುಳ್ಳಾರವರು, ಅವರು ಎಂತಹವರೆಂದರೆ ಕೊಂಡಾಡುತ್ತಾರೆ. **ಕ್ಷಮಯಾ ಪೃಥಿವೀಸಮಃ** ಎಂಬಲ್ಲಿ ಹೇಳಿರುವ ಹಾಗೆ ಕ್ಷಮಾಗುಣದ ಅತಿ ಪಡವನ್ನು ಹೊಂದಿರುವುದರಿಂದ ಆ ಕ್ಷಮಾ ಶಬ್ದದಿಂದ

**ಬೋಧಿತ**ವಾದ ಪೃಥ್ವಿಗೆ ಸಮಾನರು. ಮನಸಾಪಿ ಯಾರನ್ನೂ ದ್ವೇಷಿಸದ **ಮಹನೀ**ಯರು. ಇಂತಹ **ಸದ್ವರ್ತ್ತಿನೀಂ** ಸನ್ಮಾರ್ಗವನ್ನು ಅವಲಂಬಿಸಿ ಶಾಶ್ವತಪದವನ್ನು ಹೊಂದುವ ಅಧಿಕಾರಿಗಳು; ಈ ಮೇಲೆ ಉಪಪಾದಿತವಾದ ಒಳ್ಳೇ ಗುಣಗಳನ್ನುಳ್ಳವರೆಂದು **ಹೇಳಲ್ಪಟ್ಟಿ**ತು. ತಾವು ಉಪದೇಶಿಸಿರುವದು ಹೀಗೆ ಸತ್ಸಂಪ್ರದಾಯ ರೀತ್ಯಾ ಪರಮ ಸದ್ಗುರುವಿನಿಂದ **ಬಂದುದು ಮಾತ್ರವೇ ಅಲ್ಲದೆ**, ಶ್ರುತಿಸ್ಮೃತಿವಾಕ್ಯಗಳಿಗೂ **ಅವುಗಳ ಉಪ**ಬ್ರಹ್ಮಣಗಳಾದ ವೈಶಂಪಾಯನ, ವಾಲ್ಮೀಕಿ, ಶುಕ,ವ್ಯಾಸ, ಪರಾಶರ, **ಪರಾಂಕುಶ, ಪರಕಾಲ**, ನಾಥ, ಯಾಮುನ, ಯತಿವರಾದಿಗಳ ದಿವ್ಯ ಸೂಕ್ತಿಗಳಿಗೆ ಅನುಗುಣವಾಗಿಯೂ ಇರುವದರಿಂದ **ಸದ್ವರ್ತ್ತನೀ** ಎಂದು ಹೇಳಿದರು. ಇತರರ ಅಭಿಪ್ರಾಯಗಳಾದರೋ ಇವೆಲ್ಲಾ ದಿವ್ಯ ಸೂಕ್ತಿಗಳಿಗೂ ವಿರೋಧವಾದವು; ಆದುದರಿಂದ **ಸದ್ವರ್ತ್ತಿನೀ** ಎಂದು ಹೇಳಲು ಸಾಧ್ಯವಿಲ್ಲವೆಂಬ ಭಾವವು.

**ಅವತಾರಿಕೆಯು**-ಹಿಂದಿನ ಶ್ಲೋಕದಲ್ಲಿ ತಮಗೆ ಭಗವತ್ಕೃಪೆಯಿಂದ ದೊರೆತ **ಜ್ಞಾನಾಗ್ರೇಸರರಾಗಿ** ಪರಮ ಗುರುಗಳಾದ ತಮ್ಮ ಸೋದರ **ಮಾವಂದಿರನ್ನು ಹಿಂದಿನ ಪಾಶುರದಲ್ಲಿ ಪೊರ್ಕೈನಿಲತ್ತಿನ ಮಗುವುಮ್ ಪುನಿದರ್** ಇಷ್ಟು ಮಾತ್ರದಿಂದ ಶ್ಲಾಘಿಸಿದುದು ಸಾಲದೆ, ಅವರನ್ನು ಮುಂದಿನ ಎರಡು **ಪಾಶುರಗಳಿಂದ ಸ್ತುತಿ**ಸುವರಾಗಿ, **ಅಂತಹ ಭಾಗ್ಯೋದಯವು** ತಮಗೆ ಉಂಟಾದುದು ಪರಮ ಲಾಭವೆನ್ನುತ್ತಾರೆ. ಅವರುಗಳು ತಮ್ಮಲ್ಲಿದ್ದ ಅನೇಕ ನ್ಯೂನತೆಗಳನ್ನೂ ಪರಿಗಣಿಸದೆ ಇಂತಹ ಸನ್ಮಾರ್ಗವನ್ನು ನಮಗೆ ಚೆನ್ನಾಗಿ **ಬೋಧೆ**ಯುಂಟಾಗುವ ಹಾಗೆ **ಉಪದೇಶಿ**ಸಿದರಲ್ಲಾ, ಅವರು ಎಂತಹ ಮಹನೀಯರೋ ಎಂದು ಕೊಂಡಾಡುತ್ತಾರೆ.

**ಅರ್ಥವು. ಇದು** ಈ ಗ್ರಂಥದಲ್ಲಿ ಉಪಪಾದಿತವಾಗಿರುವದೇ, **ಇನ್** ತುಂಬಾ ಮಧುರವಾದ-**ಅಮುದು**-ಅಮೃತಸದೃಶವಾಗಿ ಮೋಕ್ಷವನ್ನು ಕೊಡುವ, **ವಳಿ**-ಸರ್ವೋತ್ಕೃಷ್ಟವಾದ ಪರಮಭೋಗ್ಯವಾದ ಮಾರ್ಗವು, **ಎನ್ರವರ್**-ಎಂದು ಉಪದೇಶಿಸಿದರು; ಯಾರೆಂದರೆ **ಎಙ್ಗಳ್ ದೇಶಿಕರೇ**-ನಮ್ಮ ಆಚಾರ್ಯರಾದ ಆತ್ರೇಯ ರಾಮಾನುಜಾಚಾರ್ಯರು ಎಂದು ಮುಂದೆ ಇದೆ; ಅಥವಾ ನಮ್ಮ ಆಚಾರ್ಯ ಪರಂಪರೆ ಎಂದೂ **ಅರ್ಥಮಾಡಬಹುದು**. ಶ್ರೀ ವಕುಳಾಭರಣರು (ನಮ್ಮಾಳ್ವಾರ್) ನಾಥ, ಯಾಮುನ, ಯತಿವರ, ಕಿಡಾಂಬಿಯಾಚಾರ್ಯ, ವಾದಿಹಂಸಾಂಬುವಾಹಾರ್ಯಾದಿಗಳು ಎಂದೂ ಹೇಳಬಹುದು. **ಇನ್ಪುಲನ್**-ಅಲ್ಪಸಾರಗಳಾದ ಶಬ್ದಾದಿ ವಿಷಯೋಪಭೋಗಗಳನ್ನೂ ಮತ್ತು ಇತರ ಹೇಯವೃತ್ತಿಗಳನ್ನೂ, **ವೇರಿಡುವಾರ್**-ಬಿಡತಕ್ಕವುಗಳೆಂದು ನಿರಾಕರಿಸಿದರು; ತಾವೂ ಪರಿತ್ಯಾಗ ಮಾಡಿದುದೂ ಅಲ್ಲದೆ, ಪರಿತ್ಯಾಗ ಮಾಡತಕ್ಕವೆಂದು ಶಿಷ್ಯರಿಗೆ ಉಪದೇಶಿಸಿದರು. **ಇದುವಳಿಯಾವುಮ್**-ಇದರಲ್ಲಿ ಉಪದೇಶಿಸಿರುವುದೇ ಭಗವತ್ಕೃಪೆಯನ್ನು ಸಂಪಾದಿಸುವುದಕ್ಕೆ ಮುಖ್ಯೋಪಾಯವೇ, ಎಂದೂ, **ಅಲ್**-ತದ್ವ್ಯತಿರಿಕ್ತವಾದುವೆಲ್ಲಾ ಉಪಾಯವಲ್ಲಾ **ಎನ್ರಿನಾರ್**-ಎಂದು

**ಇದುವಳಿ ಯಿನ್ನಮುದೆನ್ರವರಿನ್ ಪುರ್ಲ (ವಿಣ್ ಪುನಲ್) ವೇರಿಡುವಾರ್ |**
**ಇದುವಳಿ ಯೂಮುಲವೆನ್ ರರಿವಾರೆ ಙ್ಗಳ್ ದೇಶಿಕರೇ |**
**ಇದುವಳಿ ಯೆಯ್ ದುಕವೆನ್ರುಗ ಪ್ಪಾಲೆನ್ ಪಿಳ್ಳೈ ಪೊರುಪ್ಪಾರ್ |**
**ಇದುವಳಿ ಯೂಮುರೈಯೋರರುಳಾಲ್ ಯೂಮಿಶ್ಚೆನ್ದನಮೋ ||೫೩||**

ನಿರ್ಣಯಿಸಿ ಉಪದೇಶಿಸಿದರು. **ಇದುವಳಿ**–ಈ ಗ್ರಂಥದಲ್ಲಿ ಉಪಪಾದಿತವಾದ, ಸನ್ಮಾರ್ಗವನ್ನೇ **ಎಯ್ ದುಗ**–ಬೇಗ ಹೊಂದೋಣ ಎನ್ರು-ಎಂಬುದಾಗಿ, **ಉಗ ಪ್ಪಾಲೇ**–ಈ ಸನ್ಮಾರ್ಗ ಪ್ರವಚನ ಸಂತೋಷದಿಂದ ಸಂತೋಷಚಿತ್ತರಾಗಿ ಎಂಬ ರ್ಥವು, **ಎನ್ ಪಿಳ್ಳೈ ಪೊರುಪ್ಪಾರ್**–ನಮ್ಮ ಸಮಸ್ತ ನ್ಯೂನತೆ ಸ್ಖಾಲಿತ್ಯಗಳನ್ನು ಸಹಿಸಿಕೊಳ್ಳುವರು, ಇವೆಲ್ಲಕ್ಕೂ ಕರ್ತೃ ಪದವು. **ಎಙ್ಗಳ್ ದೇಶಿಕರೇ** ಎಂಬುದು. ನಮ್ಮಲ್ಲಿ ಎಷ್ಟು ನ್ಯೂನತೆ ಅಥವಾ ದೋಷಗಳನ್ನು ಕಂಡರೂ ಕ್ಷಮಿಸಿ ನಮಗೆ ಉಪದೇಶಿಸಿದರೆಂಬ ಭಾವವು; ಆದುದರಿಂದ **ಯೂವ್-ನಾವು ಮರೆಯೋರ್ ಅರುಳಾಲ್**-ಪರಮ ವೇದವಿತ್ತುಗಳಾದ ಆಚಾರ್ಯರ ಕೃಪೆಯಿಂದ **ಇದುವಳಿಯೂ** ಈ ಗ್ರಂಥದಲ್ಲಿ ನಾವು ಉಪದೇಶಿಸಿರುವುದೇ ರಾಜಮಾರ್ಗ, ಘಂಟಾಪಥವೆಂದು **ಇಶ್ಚೇನ್ದನಮೋ** – ಅಂಗೀಕಾರವನ್ನು ಹೊಂದಿದೆವು. ಇದರಿಂದ ಗುರುಮಾರ್ಗವಾದ ಉಪಾಸನವನ್ನು ಬಿಟ್ಟು, ಈ ಉಪದೇಶಿಸಲ್ಪಟ್ಟ ಲಘುಮಾರ್ಗವೇ ಸರ್ವೋತ್ಕೃಷ್ಟವಾದ ರಾಜಮಾರ್ಗವೆಂದು ಭಾವಿಸಿದೆವು ಎಂಬ ಭಾವವು.

**ತಾತ್ಪರ್ಯ** – ಈ ಗ್ರಂಥದಲ್ಲಿರುವ ಉಪದೇಶವೆಲ್ಲಾ ಆಚಾರ್ಯ ಪರಂಪರೆಯಿಂದ ಬಂದ ಸಮುಪದೇಶದ ಮೂಲಕ ತಮ್ಮ ಆಚಾರ್ಯರೇ ಇದೇ ಸರ್ವೋತ್ಕೃಷ್ಟ ಮಾರ್ಗ ವೆಂದು ಉಪದೇಶಿಸಿದ ವಿಷಯವೇ ವಿನಾ ತಮ್ಮ ಸ್ವಂತ ಕಲ್ಪನೆಯಲ್ಲವೆಂದು **ಎಙ್ಗಳ್ ದೇಶಿಕರೇ** ಎಂಬುದರಿಂದ ತಿಳಿಸಿದರು. ವೇದಗಳ ಹಾಗೆ ಇವರುಗಳ ಅಭಿಪ್ರಾಯ ಗಳೂ ಕೂಡ ಪ್ರಮಾಣ ಕೋಟಿಯಲ್ಲೇ ಸೇರಿದವೆಂಬ ಭಾವವು. **ಇದುವಳಿಇನ್ ಅಮುದು** ಎಂಬಲ್ಲಿ ಅಮೃತ ಶಬ್ದವು ಮೋಕ್ಷಪ್ರಾಪ್ತಿಯನ್ನು ಬೋಧಿಸುತ್ತದೆ. **"ಅಮೃತಸ್ಯೈಷಸೇತುಃ"** (ಮುಂಡಕ ೨-೨-೬.) ಎಂಬಲ್ಲಿ ಅಮೃತಶಬ್ದವು ಪರ ಬ್ರಹ್ಮನನ್ನು ಬೋಧಿಸುತ್ತದೆ; ಏಕೆಂದರೆ **"ತಮೇವಂ ವಿದ್ವಾನ್ ಅಮೃತ ಇಹ ಭವತಿ"** ಎಂಬಲ್ಲಿ ಆತನು ಅಮೃತಪ್ರಾಪ್ತಿ ಮೋಕ್ಷಪ್ರಾಪ್ತಿಯನ್ನುಂಟುಮಾಡುವ ನಾದುದರಿಂದ; ಅಥವಾ **ಇನ್ ಅಮುದು** ಅಮೃತದ ಹಾಗೆ ಅತಿ ಭೋಗ್ಯವಾದ ಉಪಾಯವು, ಏಕೆಂದರೆ **ಅಮೃತತ್ವ**ವನ್ನುಂಟುಮಾಡುವದರ ಮೂಲಕವೆಂಬ ಭಾವವು **"ಯ ಏತದ್ವಿದುರಮೃತಾಸ್ತೇ ಭವನ್ತಿ"** ಎಂಬ ಶ್ವೇತಾಶ್ವತರವಾಕ್ಯವು(೩-೯) ಅನುಸಂಧೇಯವು. **ಭಕ್ತಿ**ಪ್ರಪತ್ತಿಗಳೆರಡೂ ಉಪಾಯವಾದರೂ ನಮ್ಮ ದೇಶಿಕರು

ಗುರುವಾಗಿ, ತುಂಬಾ ಕಷ್ಟಸಾಧ್ಯವಾಗಿ, ತ್ರೈವರ್ಣದವರಿಗೆ ಮಾತ್ರವೇ ಅಧಿಕಾರವುಳ್ಳದ್ದಾಗಿ, ಪ್ರಾರಬ್ಧಾನುಭವಕ್ಕಾಗಿ ವಿಳಂಬವುಳ್ಳದ್ದಾಗಿ, ಅಸಕೃತ್ಕರ್ತವ್ಯವಾಗಿರುವ ಭಕ್ತಿಯೋಗಮಾರ್ಗವನ್ನು ತ್ಯಜಿಸಿ, ಲಘುವಾಗಿ, ಸುಲಭವಾಗಿ, ಸರ್ವಾಧಿಕಾರವುಳ್ಳದ್ದಾಗಿ, ವಿಳಂಬವಿಲ್ಲದೆ ಒಡನೆಯಾಗಲಿ ಅಥವಾ ದೇಹಾವಸಾನಂತರವೇಯಾಗಲಿ ಫಲಪ್ರದವಾಗಿ, ಸಕೃತ್ಕರ್ತವ್ಯವಾದ ಭರನ್ಯಾದ ಮಾರ್ಗವೇ ಸರ್ವೋತ್ಕೃಷ್ಟವಾದ ಮಾರ್ಗವೆಂದು ನಮ್ಮ ದೇಶಿಕರುಗಳೆಲ್ಲಾ ಅವಲಂಬಿಸಿದರೆಂಬ ತಾತ್ಪರ್ಯವು. **ಇನ್ ಪುಲನವೇಂಡುವಾರ್**– ಈ ಅಲ್ಪಸಾರಗಳಾದ ಐಹಿಕಗಳಾದ ಉಪಭೋಗಗಳನ್ನು ಬಿಡತಕ್ಕದ್ದು ಎಂದು ಇಷ್ಟು ಮಾತ್ರ ಉಪದೇಶವು ಅತಿ ಸುಲಭವು. ನಮ್ಮ ಆಚಾರ್ಯ ಪುಂಗ್ರವಗಳಾದರೋ ತಾವು ಉಪದೇಶಿಸುವುದು ಮಾತ್ರವೇ ಅಲ್ಲದೆ, ತಾವು ಹಾಗೆಯೇ ಆಚರಿಸಿ, ನಮಗೆ ಮೇಲ್ಪಂಙ್ತಿಯನ್ನು ಹಾಕಿಕೊಟ್ಟವರೆಂದು ಅವರುಗಳೂ ಅವನ್ನೆಲ್ಲಾ ಪರಿತ್ಯಾಗ ಮಾಡಿದರು ಎಂಬ ಭಾವವು, **ವೇರಿಡುವಾರ್** ಎಂಬುದರಿಂದ ತೋರಿಬರುತ್ತದೆ, **ಆಚಿನೋತಿ ಚಶಾಸ್ತ್ರಾರ್ಥಾನ್ ಆಚಾರೇಸ್ಥಾಪಯಿಷ್ಯತಿ । ಸ್ವಯಮಾಚರತೇಯಸ್ಮಾದಾಚಾರ್ಯ ಇತಿ ತಂವಿದುಃ** ಎಂದು ಹೇಳಿರುವ ಹಾಗೆ ತಾವು ಆಚರಿಸುವದರಿಂದ ಆಚಾರ್ಯರೆಂದು ಹೇಳಿಸಿಕೊಳ್ಳಲು ಅರ್ಹರೆಂಬ ಭಾವವು. ಇನ್ನೊಂದು ಕಡೆಯಲ್ಲಿ ಶ್ರೀ ದೇಶಿಕರೇ ಸ್ವರ್ಗಾದಿ ಭೋಗಗಳನ್ನೂ, ಐಹಿಕ ಭೋಗಗಳನ್ನೂ ತೃಣವೆಂದು "**ತೃಣ ಮನ್ಯದನ್ಯದಪಿವಾ**" ಎಂಬಲ್ಲಿ ತಿಳಿಸಿರುತ್ತಾರೆ. ಶ್ರೀ ಪರಾಶರರು "**ಧರ್ಮಾರ್ಥಕಾಮ್ಯೈರಲಮಲ್ಪಕಾಸ್ತೇ**" ಎಂದು ಅವುಗಳನ್ನು ಅಲ್ಪವಾದವೆಂದು ಹೇಳಿರುತ್ತಾರೆ. "**ನನಾಕಪೃಷ್ಠಮ್ ನಚ ಸಾರ್ವಭೌಮಂ ನಪಾರ ಮೇಷ್ಠ್ಯಂ ನರಸಾಧಿಪತ್ಯಮ್ । ನಯೋಗಸಿದ್ಧೀರಪು ನರ್ಭವಂವಾ ವಾಂಛಸ್ತಿಯತ್ಪಾದರಜಃ ಪ್ರಪನ್ನಾಃ**" ಸರ್ವೇಶ್ವರನ ಪಾದಧೂಳಿಯನ್ನಾಶ್ರಯಿಸಿದ ಪ್ರಪನ್ನರು ಇಂದ್ರಲೋಕಭೋಗವನ್ನಾಗಲಿ, ಇಲ್ಲಿನ ಸಾರ್ವಭೌಮ ಪದವಿಯನ್ನಾಗಲಿ, ಬ್ರಹ್ಮಲೋಕ ವಾಸವನ್ನಾಗಲಿ, ವರುಣಲೋಕ ಪ್ರಾಪ್ತಿಯನ್ನಾಗಲಿ, ಕುಬೇರಲೋಕದ ಅಷ್ಟೈಶ್ವರ್ಯ ಪ್ರಾಪ್ತಿಯನ್ನಾಗಲಿ, ಕೈವಲ್ಯವನ್ನಾಗಲಿ ಅಪೇಕ್ಷಿಸದೆ ಇರುವದು ಏತಕ್ಕೆಂದರೆ ಇವೆಲ್ಲಕ್ಕಿಂತಲೂ ನಿರತಿಶಯವಾದ ಪರಿಪೂರ್ಣ ಬ್ರಹ್ಮಾನುಭವವು ತಮಗೆ ಉಂಟಾಗುವದು ಸಿದ್ಧವಾದುದರಿಂದ ಎಂಬ ಭಾವವು. (ಭಾಗ ೧೦, ೧೬, ೩೭)

**ಇದುವಳಿಯಾ ಮುಲವೆನ್ರರಿವಾರ್ :**— ಮುಕ್ತಿಯನ್ನು ಹೊಂದುವದಕ್ಕೆ ಈ ಪ್ರಪದನ ಮಾರ್ಗವೇ ಸಾಕಾದ ಉಪಾಯವೆಂದು ಉಪದೇಶಿಸಿದರು. ತಮ್ಮ ಮನ ಬಂದಂತೆ ಉಪದೇಶಿಸಲಿಲ್ಲವು. ಶಾಸ್ತ್ರ ಪ್ರಮಾಣಗಳ ಪ್ರಕಾರ ನಿರ್ಧರಿಸಿ ತಾವೂ ಅನುಷ್ಠಿಸಿ ನಮಗೂ ಉಪದೇಶಿಸಿದರು. "**ಓ ಮಿತ್ಯಾತ್ಮಾನಂ ಯುಂಜೀತ**" ಎಂಬ ಶ್ರುತಿವಾಕ್ಯ, **ಶರಣಂವ್ರಜ** ಎಂಬ ಸ್ಮೃತಿವಾಕ್ಯ, **ತ್ವಮೇವೋ**

**ಪಾಯ ಭೂತೋಮೇ** ಎಂಬ ಸಂಹಿತಾ ವಾಕ್ಯ, "**ಸಕೃದೇವ ಪ್ರಪನ್ನಾಯ**" ಮತ್ತು **ಮಾಮೇಕಮೇವಶರಣ ಮಾತ್ಮಾನಂ ಸರ್ವದೇಹಿನಾಮ್। ಯಾಹಿ ಸರ್ವಾತ್ಮ ಭಾವೇನ** (ಭಾಗ ೧೧, ೧೨, ೧೫) ಎಂಬ ಪುರಾಣ, ಇತ್ಯಾದ್ಯನೇಕ ಪ್ರಮಾಣಗಳಿಂದ ಇದೇ ಮಾರ್ಗವೇ ಮುಕ್ತಿ ಪ್ರಾಪ್ತಿಗೆ ಸಾಕಾದುದೆಂದು ನಿರ್ಧರಿಸಿದರು ಎಂಬ ಭಾವವು ತೋರಿಬರುತ್ತದೆ.

**ಇದುವಳಿಯೆಯ್ ದುಗವೆನ್ರುಗಪ್ಪಾಲೇ ಎನ್ ಪಿಳ್ಳೈಪ್ರೊರುಪ್ಪಾರ್**- ಇದೇ ಸುಲಭ ಮಾರ್ಗವೆಂದು ತಾವೂ ಅವಲಂಬಿಸಿ ನಮಗೂ ಉಪದೇಶಿಸಿದರು. ಹೇಗೆ ಉಪದೇಶಿಸಿದರು? ಎಂದರೆ ಉಗಪ್ಪಾಲ್ ಸಂತೋಷಚಿತ್ತರಾಗಿ "**ದೇಶಿಕೋ ಮೇ ದಯಾಳುಃ**" ಎಂದು ಹೇಳಿರುವಹಾಗೆ ನಮ್ಮ ಹೀನಸ್ಥಿತಿಯನ್ನೂ ಶತಾಪರಾಧಗಳನ್ನೂ ಪರಿಗಣಿಸಿದರೆ, ಈಗಲಾದರೂ, ಒಳ್ಳೇ ಬುದ್ಧಿ ಬಂದು ನಮ್ಮನ್ನು ಆಶ್ರಯಿಸಲು ಬಂದನೇ ಎಂದು ಸಂತೋಷಚಿತ್ತರಾಗಿಯೇ ಉಪದೇಶಿಸಿದರು. **ಪಕ್ಷೀಚ ಶಾಖಾನಿಲಯಂ ಪ್ರವಿಷ್ಟಃ ಪುನಃ ಪುನಶ್ಚೋತ್ತಮ ಸಾಂತ್ವವಾದೀ। ಸುಸ್ವಾಗತಾಂವಾಚ ಮುದೀರಯಾನಃ ಪುನಃ ಪುನಶ್ಚೋದಯತೀವ ಹೃಷ್ಟಃ** (ರಾ. ಸುಂ. ೨೭, ೫೧) ಎಂಬಲ್ಲಿ ಮಹರ್ಷಿಯು ಬಹು ಸ್ವಾರಸ್ಯವಾಗಿ ಉಪಪಾದಿಸಿರುತ್ತಾರೆ. ಇಲ್ಲಿ **ಪಕ್ಷೀ** ಶಬ್ದದಿಂದ ಚೇತನನು ಹೇಳಲ್ಪಟ್ಟನು; ಏಕೆಂದರೆ "**ಉಭಾಭ್ಯಾಮೇವ ಪಕ್ಷಾಭ್ಯಾಂ ಯಥಾ ಖೇಪಕ್ಷಿಣಾಂಗತಿಃ। ತಥಾ ಜ್ಞಾನಕರ್ಮಾಭ್ಯಾಂ ಚ ನಿಯತಾಪರಮಾಗತಿಃ**" ಎಂಬಲ್ಲಿ ಹೇಳಿರುವಹಾಗೆ ಪಕ್ಷಿಗಳಿಗೆ ಎರಡುರೆಕ್ಕೆಗಳಿಂದ ಗಮನವು ಹೇಗೆ ಸಾಧ್ಯವೋ ಹಾಗೆಯೇ ಮುಮುಕ್ಷುವಿಗೂ ಜ್ಞಾನಕರ್ಮಗಳೆಂಬ ಎರಡು ರೆಕ್ಕೆಗಳಿಂದಲೇ ದಿವ್ಯವೈಕುಂಠವನ್ನು ಕುರಿತು ಗಮನವು ಎಂದು ಹೇಳಿರುವದರಿಂದ ಪಕ್ಷೀ ಶಬ್ದದಿಂದ ಪರಮ ಭಾಗವತೋತ್ತಮನು ಹೇಳಲ್ಪಟ್ಟನು. ಶ್ರುತಿಯಲ್ಲೂ ಹಾಗೆಯೇ ಜೀವಾತ್ಮನು **ಸುಪರ್ಣ** ಶಬ್ದದಿಂದ **ದ್ವಾಸುಪರ್ಣಾ** ಎಂಬಲ್ಲಿ ಹೇಳಲ್ಪಟ್ಟಿರುತ್ತಾನೆ. ಇಂತಹ ಆಚಾರ್ಯಸ್ಥಾನೀಯ ಜೀವಾತ್ಮನು, **ಶಾಖಾನಿಲಯಂ ಪ್ರವಿಷ್ಟಃ**-ನಿರ್ಜನ ಪ್ರದೇಶದಲ್ಲಿ ಪರ್ಣಶಾಲೆಯನ್ನು ರಚಿಸಿಕೊಂಡು ಅದನ್ನು ಪ್ರವೇಶಿಸಿರುವವನಾಗಿ ಅಥವಾ ವೇದಶಾಖೆಗಳನ್ನು ಉಪನಿಷತ್ತುಗಳನ್ನು ಅವಲಂಬಿಸಿದವನಾಗಿ, ಒಳ್ಳೇ ಜ್ಞಾನ ನಿಷ್ಠೆಯನ್ನು ಹೊಂದಿದವನಾಗಿ, **ಉತ್ತಮ ಸಾಂತ್ವವಾದೀ-ಉತ್ತಮಃ ಪುರುಷಸ್ತ್ವನ್ಯಃ** ಎಂಬಲ್ಲಿ ಹೇಳಿರುವ ಹಾಗೆ ಸರ್ವೋತ್ತಮನಾದ ಪರಮ ಪುರುಷನಲ್ಲೇ ಮನಸ್ಸನ್ನಿಡತಕ್ಕದೆಂದು ಶಿಷ್ಯರುಗಳಿಗೆ ಉಪದೇಶಿಸುವನಾಗಿ, **ಸುಸ್ವಾಗತಾಂ ವಾಚಮುದೀರಯಾನಃ**- ಮೋಕ್ಷೇಚ್ಛೆಯು ಉಂಟಾದುದು ಪರಮ ಸುಕೃತ ವಿಷಯವು, ಅದನ್ನು ಹೊಂದುವ ರೀತಿಯನ್ನು ತಿಳಿಯಬೇಕೆಂದು ಬಂದಿರುವಿರಿ; ತುಂಬಾ ಸಂತೋಷವು; ಬನ್ನಿ ಎಂದು ಬರಮಾಡಿಕೊಂಡು ಹೀಗೆ ಒಳ್ಳೇ ಮಾತನ್ನು ಆಡುವವರಾಗಿ, ಅಥವಾ, ತಮ್ಮ

ಆಚಾರ್ಯರುಗಳಿಂದ ಸಂಪ್ರದಾಯ ರೀತ್ಯಾ ಚೆನ್ನಾಗಿ ಬಂದ ರಹಸ್ಯತ್ರಯಗಳ ಉಪದೇಶವನ್ನು ಬೋಧಿಸುವವರಾಗಿ, **ಪುನಃಪುನಶ್ಶ್ಲೋದಯುತೀವಹೃಷ್ಟಃ** ತಾವು ಒಂದು ಸಲ ಉಪದೇಶಿಸಿದುದು ಮನಸ್ಸಿಗೆ ಹಿಡಿಯದೇ ಇದ್ದರೂ, ಅದಕ್ಕಾಗಿ ಕೋಪಿಸದೆ ತುಂಬಾ ಹೃಷ್ಟಚಿತ್ತರಾಗಿ ಪುನಃ ಪುನಃ ಮನಸ್ಸು ಗ್ರಹಿಸುವ ಹಾಗೆ ಹೇಳುವರು. ಎಂಬುದು ಶ್ಲೋಕಾರ್ಥವು. ಇದೇ ಇಲ್ಲಿ ಬೇಕಾದ ವ್ಯಂಗ್ಯಾರ್ಥವು. ಇತರ ಸಾಧಾರಣಾರ್ಥಗಳಿಗೆ ಗೋವಿಂದರಾಜೀಯ ವ್ಯಾಖ್ಯಾನವನ್ನು ಪರಾಂಬರಿಸಿ. ಗ್ರಹಿಸುವದರಲ್ಲಿ ಶಿಷ್ಯನಲ್ಲಿ ನ್ಯೂನತೆ, ಅಥವಾ ಇತರ ದೋಷಗಳಿದ್ದರೂ, ಅವೆಲ್ಲವನ್ನು ಕ್ಷಮಿಸಿ ಬೋಧಿಸುವರೆಂದು **ಇದುವಳಿಯೆಯ್ಪ್ಪುಗ ವೆಸ್ರುಗಪ್ಪಾಲ್ ಎನ್ ಪಿಳ್ಳೈ ಪೊರುಪ್ಪಾರ್** ಎಂಬ ಪ್ರಯೋಗವು.

ಹೀಗೆ ನಮ್ಮ "**ಮರೈಯೋರ್**"–ವೈದಿಕರು, ಬ್ರಹ್ಮವಿತ್ತುಗಳಾದ ಪರಮ ಭಾಗವತರಾದ ನಮ್ಮ ಗುರುಗಳು ಸಿಸ್ಕರ್ಷಿಸಿ, ಈ ಪ್ರಪದನ ಮಾರ್ಗವೇ ಪರಮೋತ್ಕೃಷ್ಟವಾದ ಮಾರ್ಗವೆಂದು, ತುಂಬಾ ಕೃಪೆಯಿಂದ ಉಪದೇಶಿಸಿದುದರಿಂದ ಅದನ್ನೇ ನಾವೂ ಆ ಉಪಾಯವನ್ನೇ ಶಿರಸಾವಹಿಸಿ ಅವಲಂಬಿಸಿದೆವು ಎಂದು **ಇಶೈನ್ದನಮೋ** ಎಂಬ ಪ್ರಯೋಗವು. ಆಚಾರ್ಯರ **ಅರುಳ್** ಪರಮಮಹತ್ತಾದುದು. ಅಂತಹ "**ಅರುಳ್ ಕಂಡೀರಿವ್ವುಲಗನಿಲ್ ಮಿಕ್ಕದೇ**" ಎಂಬಲ್ಲಿ ಹೇಳಿರುವ ಹಾಗೆ ಶಿಷ್ಯನಿಗೆ ಪರಮ ನಿಶ್ಶ್ರೇಯಸ್ಸಿಗೆ ಸಾಧನವು, **ಇದುವಳಿಯಾಮ್** ಎಂಬುದರಿಂದ ಈ ಪ್ರಪತ್ತಿಯೇ ರಾಜಮಾರ್ಗವು, ಮಿಕ್ಕವೆಲ್ಲಾ ಸಂದು ಗೊಂದುಗಳಲ್ಲಿ ದೂರೋಣವು. ಇದೇ ದಿವ್ಯ ವೈಕುಂಠ ಪ್ರಾಪ್ತಿಯು ಲಭಿಸುವ ಹಾಗೆ ಮಾಡುವ ಮಾರ್ಗಗಳೆಂಬ ಭಾವವು.

**ಅವತಾರಿಕೆಯು**-ಭರನ್ಯಾಸವೇ ಸುಲಭೋಪಾಯವೆಂದು ತಮ್ಮ ಆಚಾರ್ಯರುಗಳು ಪರಮ ಕೃಪೆಯಾ ಉಪದೇಶಿಸಿದರು. ಅದೇ ಸರ್ವೋತ್ಕೃಷ್ಟಸಾಧನವೆಂದು ನಾವು ಅಂಗೀಕರಿಸಿದೆವು ಎಂದು ಈ ಅಮೋಘ ರಹಸ್ಯತ್ರಯದಲ್ಲಿ ಉಪದೇಶಿಸಿದರಲ್ಲಾ, ಇದು ಹೇಗೆ ತಮಗೆ ಲಭಿಸಿತು? ಎಂಬ ಸಂದರ್ಭದಲ್ಲಿ ಹೇಳುತ್ತಾರೇನೆಂದರೆ? ಎಲ್ಲವೂ ಸಿದ್ಧೋಪಾಯನಾದ ಲೀಲಾಸಾರಥಿಯಾಗಿ ಅವತರಿಸಿದ ಶ್ರೀ ಕೃಷ್ಣಭಗವಾನರವರ ಪರಮ ಕೃಪೆಯೇ ಎಂದು ಹೇಳುವವರಾಗಿ ರಹಸ್ಯತ್ರಯಗಳ ಜ್ಞಾನವೇ ಇಲ್ಲದೆ ಅಜ್ಞರಾದ ತಮಗೆ ಸದಾಚಾರ್ಯ ಕಟಾಕ್ಷವನ್ನು ಒದಗಿಸಿಕೊಟ್ಟು, ಅವುಗಳ ಸದುಪದೇಶವನ್ನು ಗ್ರಹಿಸುವ ಜ್ಞಾನವನ್ನುಂಟುಮಾಡಿ, ಉಪಾಯಾನುಷ್ಠಾನವನ್ನು ಮಾಡಿಸಿ, ಪಾಪಸಮೂಹಗಳನ್ನೆಲ್ಲಾ ಹೋಗಲಾಡಿಸಿ, ದಿವ್ಯವೈಕುಂಠ ಪ್ರಾಪ್ತಿಯಿಲ್ಲ ಎಂಬ ಭಯವೂ ಶೋಕವೂ ನಿನಗೆ ಬೇಡ ಎಂದು ಶ್ರೀಯಃಪತಿಯು ಲೀಲಾ ಸಾರಥಿಯಾಗಿ ಸಿದ್ಧೋಪಾಯನಾಗಿ ಹೇಳಿರುವದರಿಂದ, ನಿರ್ಭಯನಾಗಿ ನಿರ್ಭರನಾಗಿ ಹೃಷ್ಟಮನಸ್ಕನಾಗಿ, ಸ್ಥಿರಪ್ರತಿಷ್ಠಿತ ಜ್ಞಾನವಾನ್ ಆಗಿ ನಿಸ್ಸಂಶಯನಾಗಿದ್ದೇನೆಂದು

**ಭರನ್ಯಾಸ ಏವ ಸಾಕ್ಷಾತ್ಫಲಭೋಪಾಯಃ ಇತಿ ಆಚಾರ್ಯೋಪದಿಷ್ಟ ರಹಸ್ಯತ್ರಯಜ್ಞಾನಂ ಲೀಲಾಸಾರಥೇಃ ಕೃಪಯಾ.ಲಬ್ಧಮಿತಿ ನಿಗಮಯತಿ**

**ಎಟ್ಟುಮಿರಣ್ಡು ಮರಿಯಾದ ನೆಮ್ಮೈಯಿನೇ ಯರಿವಿತ್ |**
**ತೇಟ್ಟುವೊಣ್ಣಾದ ವಿಡಮ್ ತರುಮೆಙ್ಗಳ್ಮಾದವನಾರ್ |**

---

ನಿಗಮನ ಮಾಡುತ್ತಾರೆ. ರಹಸ್ಯತ್ರಯವು ಸಾರತಮ ಗ್ರಂಥವಾದುದರಿಂದ ಆ ಮೂರನ್ನು ಈ ನಿಗಮನದಲ್ಲೂ ಶ್ಲಾಘಿಸಿ ಹೇಳಬೇಕೆಂಬ ಸಙ್ಕಲ್ಪದಿಂದ ಈ ಮುಂದಿನ ಪಾಶುರವನ್ನು ಅನುಗ್ರಹಿಸಿರುತ್ತಾರೆ. ಹಿಂದೆ **ಶಾಖಾನಾಮುಪರಿಸ್ಥಿತೇನ ಮನುನಾ ಮೂಲೇನಲಬ್ಧಾತ್ಮಕಃ** ಎಂದು ಆದಿಯಲ್ಲಿ ಶ್ಲಾಘಿಸಿದಹಾಗೆ ನಿಗಮನದಲ್ಲೂ ಶ್ಲಾಘಿಸುತ್ತಾರೆ.

**ಅರ್ಥವು-ಎಟ್ಟುಮಿರಂಡು ಮರಿಯಾದ**-ಎಂಟು ಎರಡು ಹತ್ತು ಎಂದು ಕೂಡಹೇಳಲು ತಿಳಿಯದ ಅಜ್ಞಾನಿಗಳಾದ, ಪ್ರಕೃತಾರ್ಥವೇನೆಂದರೆ, **ಎಟ್ಟು**-ಅಷ್ಟಾಕ್ಷರಿ ಎಂದು **ಹೇಳಿಸಿಕೊಳ್ಳುವ** ಮೂಲಮನ್ತ್ರವನ್ನೂ, **ಇರಂಡುಮ್**-ದ್ವಯವೆನಿಸುವ ಕರಣಮನ್ತ್ರವನ್ನು, **ಅರಿಯಾದ** ಅವುಗಳ ವಿಷಯದಲ್ಲಿ ಏನೊಂದನ್ನೂ ತಿಳಿಯದ, **ನೆಮ್ಮೈ**-ನಮ್ಮನ್ನು, **ಇವೈ**-ಬಹುರಹಸ್ಯಾರ್ಥಗರ್ಭಿತಗಳಾದ ಈ ಮನ್ತ್ರಗಳನ್ನು, ಹೀಗೆ ಇವೆರಡನ್ನು ಹೇಳಿದುದು ಚರಮಶ್ಲೋಕಕ್ಕೂ ಉಪಲಕ್ಷಣವೆಂದು ಭಾವಿಸಬಹುದು ; ಅಥವಾ ಮುಂದೆ ಚರಮಶ್ಲೋಕಾರ್ಥದ ಉಪಪಾದನೆಯಿರುವದರಿಂದ ಇಲ್ಲಿ ಎರಡು ಮನ್ತ್ರಗಳು ಮಾತ್ರ ಹೇಳಲ್ಪಟ್ಟವೆಂದೂ ಭಾವಿಸಬಹುದು. **ಅರಿವಿತ್ತು**-ನಮ್ಮ ಆಚಾರ್ಯರುಗಳ ಮೂಲಕ ಉಪದೇಶವನ್ನು ಹೊಂದುವ ಹಾಗೆ ಮಾಡಿ, **ಎಟ್ಟವೊಣ್ಣಾದ ಇಡಮ್**-ಹಾಗೆ ಆಚಾರ್ಯರುಗಳ ಮೂಲಕ ಭರನ್ಯಾಸಮಾಡದ ಅಪ್ರಪನ್ನರಿಗೆ ಅಸಾಧ್ಯವಾದ ತಿರುವಯೋಧ್ಯೆ ಎಂದು ಹೇಳಲ್ಪಡುವ ಪರಮಪದವನ್ನು, **ತರುಮ್**-ಕೃಪಯಾ ಅನುಗ್ರಹಿಸುವ, **ಎಙ್ಗಳ್ ಮಾಧವನಾರ್**-ನಮಗೆಲ್ಲಾ ಶೇಷಿಯಾದ ಶ್ರೀಯಃಪತಿಯು, ಶ್ರೀಕೃಷ್ಣನಾಗಿ ಅವತರಿತ್ತು ಲೀಲಾಸಾರಥಿಯಾಗಿ ಅಮೋಘ ಚರಮಶ್ಲೋಕವನ್ನುಪದೇಶಿಸಿದವನು, **ಮುಟ್ಟವಿನೈತ್ತಿರಳ್**-ಸಂಪೂರ್ಣವಾಗಿ ಪಾಪಸಮೂಹವೆಲ್ಲಾ, **ಮಾಳ**-ನಾಶವಾಗುವ ಹಾಗೆ, **ಮುಯನ್ರಿಡುಮ್**—ಅಭಿನಿವೇಶವನ್ನು ಮಾಡಿ ಎಂದರೆ ಸಂಕಲ್ಪಿಸಿ, **ಅಂಜಲ್**-ನೀನು ನಿರ್ಭಯನಾಗಿ ಎಂದರೆ ನೀನು ಶೋಕಿಸಬೇಡ, **ಎನ್ರರ್**-ಎಂದು ಹೇಳುವ ಕರುಣಾಕರನ, **ಕಟ್ಟೆಳಿಲ್**-ಸರ್ವತಃ ಪ್ರಕಾಶಿಸುತ್ತಿರುವ, **ವಾಚಕತ್ತಾಲ್**-ದಿವ್ಯಸೂಕ್ತಿಯಾದ ಚರಮಶ್ಲೋಕದಿಂದ, **ಕಲಙ್ಗಾನಿಲೈ** ಕ್ಲೇಶ, ಶೋಕ ಮೊದಲಾದವುಗಳಿಲ್ಲದ ಸ್ಥಿರವಾದ ಶಾಂತಿಯುಳ್ಳ ಅವಸ್ಥೆಯನ್ನು ಎಂದರೆ ಕೃತಕೃತ್ಯತೆಯನ್ನೂ ಕೃತಾರ್ಥಭಾವವನ್ನೂ, **ಪೆತ್ತನಮೇ**-ಹೊಂದಿದೆ

**ಮಂಟ್ಟೆನಿನ್ನೈತ್ತಿರಲ್ ಮಾಳಮುಯನ್ ರಿಡು ಮಙ್ಗಲೆನ್ನಾರ್ ।**
**ಕಟ್ಟೆಳಿಲ್ ವಾಚಕತ್ತಾರ್ ಕಲಙ್ಗ ಕಾನಿಲ್ಲೈಪೆತ್ತನಮೇ ॥ ೫೪ ॥**

---

ವಲ್ಲವೇ, ತಾವು ಅಂತಹ ಲೀಲಾಸಾರಥಿಯ, ನಂಬಲು ಅರ್ಹವಾದ ದಿವ್ಯಸೂಕ್ತಿಯಿಂದ ಭಯ ಶೋಕ ಮೋಹಾದಿಗಳಿಂದ ಪೀಡಿತ ದುಸ್ಥಿತಿಯನ್ನು ಕಳೆದುಕೊಂಡು ಮನಶ್ಶಾಂತತೆಯನ್ನು ಹೊಂದಿದೆವಲ್ಲವೇ. ಏನಾಶ್ಚರ್ಯವು? ಆತನು ಎಂತಹ ಮಹಿಮೆಯುಳ್ಳ ಕೃಪಾಳುವೋ? ಎಂಬ ಭಾವವು.

**ತಾತ್ಪರ್ಯವು**— ಹೀಗೆ ತಮಗೆ ಪರಮಾಚಾರ್ಯರು ಲಭಿಸಿ ಇಂತಹ ಅಮೋಘೋಪದೇಶಗಳೆಲ್ಲಾ ತಮಗೆ ದೊರೆತು, ಅದನ್ನು ಎಲ್ಲರಿಗೂ ಉಪದೇಶಿಸತಕ್ಕದ್ದು ತಮ್ಮ ಕರ್ತವ್ಯವೆಂದು ಭಾವಿಸಿ ಹೀಗೆ ಗ್ರಂಥನಿರ್ಮಾಣ ಮಾಡಿದುದಕ್ಕೆಲ್ಲಾ ಮುಖ್ಯ ಕಾರಣವನ್ನು ತಿಳಿಸುತ್ತಾರೆ. ಇವೆಲ್ಲಾ ಸಿದ್ಧೋಪಾಯನಾದ ಶ್ರೀಕೃಷ್ಣ ಭಗವಾನರವರ ಕೃಪಾಪರೀವಾಹವೆಂದು ತಿಳಿಸಲು ಪ್ರಾರಂಭಿಸಿ ಅತ್ಯಂತ ಅಜ್ಞರಾದ ತಮಗೆ ಸರ್ವೋತ್ಕೃಷ್ಟರಾದ ಆಚಾರ್ಯರನ್ನು ಒದಗಿಸಿಕೊಟ್ಟು ಶಾಸ್ತ್ರಗಳಲ್ಲೆಲ್ಲಾ ಸಾರತಮವಾದ ಈ ಮೂರು ರಹಸ್ಯಗಳನ್ನು ವಿಶದವಾಗಿ ವಿಸ್ತಾರವಾಗಿ ಸಾರವತ್ತಾಗಿ ಉಪದೇಶಿಸುವ ಹಾಗೆ ಮಾಡಿ, ಕೊನೆಯಲ್ಲಿ ಪರಮಹಿತವನ್ನು ಬೋಧಿಸಿ, ಉಪಾಯಾನುಷ್ಠಾನವನ್ನು ಮಾಡಿಸಿ, 'ನಿನ್ನ ಸರ್ವಾಪರಾಧಗಳೂ ಸುಕೃತದುಷ್ಕೃತಗಳೆಲ್ಲವೂ ತೊಲಗುವುವು, ನೀನು ಪ್ರಾಪ್ಯವನ್ನು ಹೊಂದುವಿ, ನಿನಗೆ ಯಾವ ವಿಧವಾದ ಭೀತಿ ಶೋಕ ಅಪನಂಬಿಕೆ ಬೇಡ'ವೆಂದು ಹೇಳಿದ ಲೀಲಾಸಾರಥಿಯ ದಿವ್ಯಸೂಕ್ತಿಯಿಂದ ನಾವು ಮನಸ್ಥೈರ್ಯವನ್ನು ಹೊಂದಿದೆವೆಂದು ಹೇಳಿ ತಮ್ಮ ಧನ್ಯತೆಯನ್ನು ಪ್ರದರ್ಶಿಸುತ್ತಾರೆ.

**ಎಟ್ಟುಮಿರುಣ್ಡು ಮರಿಯಾದವೆಮ್ಮೈ** ಎಂಬುದರಿಂದ ತಮಗೆ ಆಚಾರ್ಯ ಪ್ರಾಪ್ತಿಯು ಸ್ವಾಮಿಯ ದಿವ್ಯಕಟಾಕ್ಷದಿಂದ ಉಂಟಾಗುವುದಕ್ಕಿಂತ ಮುಂಚೆ ತಾವು ಮಹಾ ಅಜ್ಞರಾಗಿದ್ದೆನೆಂಬುದನ್ನು ಸ್ವಾರಸ್ಯವಾಗಿ ಎಟ್ಟು ಇರಂಡು-ಪತ್ತು, ಎಂಟೂ ಎರಡೂ ಹತ್ತು ಎಂದು ಹೇಳಲು ಕೂಡ ತಿಳಿಯದವನ್ನು ಅಜ್ಞಾನವೆಂದು ತಿಳಿಯಪಡಿಸಿದರು. ಎಂಟೂ ಎರಡೂ ತಿಳಿದರೇನೇ ನಿತ್ಯವೈಕುಂಠವನ್ನು ಪತ್ತುವ ಭಾಗ್ಯವುಂಟಾಗುತ್ತದೆಂಬ ಧ್ವನ್ಯರ್ಥವು ತೋರಿಬರುತ್ತದೆ. ಆದುದರಿಂದ ಪ್ರಪನ್ನನು ಮುಖ್ಯವಾಗಿ ಮೂಲಮಂತ್ರ ದ್ವಯಮಂತ್ರಗಳ ಸ್ವಾರಸ್ಯಾರ್ಥಗಳ ಜ್ಞಾನವನ್ನು ಆಚಾರ್ಯಮುಖೇನ ಹೊಂದುವದು ಆವಶ್ಯಕವೆಂದು ಉಪದೇಶಿಸಲ್ಪಟ್ಟಿತು. "ಶಾಸ್ತ್ರದಿಷು ಸುದೃಷ್ಟಾಪಿ ಸಾಙ್ಗಾ ಸಹ ಫಲೋದಯಾ । ನ ಪ್ರಸೀದತಿ ವೈವಿದ್ಯಾವಿನಾ ಸದುಪದೇಶಿತಃ ॥" ಸರ್ವೇಶ್ವರನನ್ನು ಹೊಂದುವ ಉಪಾಯಗಳು ವೇದಮಂತ್ರ ಅದರ ಉಪಬೃಹ್ಮಣಗಳಲ್ಲಿ ಸಾಙ್ಗವಾಗಿ ಫಲಗಳೊಂದಿಗೆ ಹೇಳಲ್ಪಟ್ಟಿದ್ದರೂ ಸದಾ

ಚಾರ್ಯಕಟಾಕ್ಷ ಉಪದೇಶಗಳಿಲ್ಲದೆ ಅದು ಕಾರ್ಯಕಾರಿಯಾಗುವದಿಲ್ಲವೆಂದು ಹೇಳಲ್ಪಟ್ಟಿರುತ್ತದೆ. ಮೂಲಮಂತ್ರದ ಮತ್ತು ದ್ವಯದ ಮಾಹಾತ್ಮ್ಯಗಳು ಹಿಂದೆಯೇ ಉಪಪಾದಿತವು. **"ಐಹಲೌಕಿಕಮೈಶ್ವರ್ಯಂ ಸ್ವರ್ಗಾದ್ಯಾಃ ಪಾರಲೌಕಿಕಮ್ । ಕೈವಲ್ಯಂ ಭಗವನ್ತಂಚ ಮನ್ತ್ರೋಽಯಂ ಸಾಧಯಿಷ್ಯತಿ ॥"**

**"ಯತ್ರಾಷ್ಟಾಕ್ಷರಸಂಸಿದ್ಧಾ ಮಹಾಭಾಗಾಮಹೀಯತೇ ।**

**ನ ತತ್ರಸಂಚರಿಷ್ಯಂತಿ ವ್ಯಾಧಿದುರ್ಭಿಕ್ಷತಸ್ಕರಾಃ ॥"**

**ಪ್ರತ್ಯಾಷತಾಂ ಭಜತಿ ಸಂಸೃತಿಕಾಳರಾತ್ರೇಃ ।** ಇತ್ಯಾದಿಗಳು ಇಲ್ಲಿ ಅನುಸಂಧೇಯಗಳು. ಇವ್ವೈ **ಅರಿಯುವಿತ್ತು** ಎಂಬುದರಿಂದ **"ಕೃಷ್ಣಂ ಧರ್ಮಂ ಸನಾತನಮ್"** ಎಂಬಲ್ಲಿ ಹೇಳಿರುವ ಹಾಗೆ ಆತನೇ ಸಿದ್ಧೋಪಾಯನಾಗಿ ನಮಗೆ ಸದಾಚಾರ್ಯರ ಮೂಲಕ ಒದಗಿಸಿಕೊಡುವನೆಂದು ಹೇಳಲ್ಪಟ್ಟಿತು; **"ದದಾಮಿ ಬುದ್ಧಿಯೋಗಂ ತಂ ಯೇನ ಮಾ ಮುಪಯಾನ್ತಿ ತೇ"** ಎಂದು (ಗೀ. ೧೦.೧೦) ತಾನೇ ಹೇಳಿರುತ್ತಾನೆಂಬುದನ್ನು ಈ ಪ್ರಯೋಗವು ಸ್ಮರಿಸುತ್ತದೆ. ಈ ಆಚಾರ್ಯರು ಸ್ವಾಮಿಯಿಂದ ಭೂಲೋಕಕ್ಕೆ ಕಳುಹಿಸಲ್ಪಟ್ಟು ತನ್ನಲ್ಲಿ ಮನಸ್ಸನ್ನಿಟ್ಟವರ ಉಜ್ಜೀವನಕ್ಕಾಗಿ ಅವತರಿಸಿ, ತಮ್ಮನ್ನು ಆಶ್ರಯಿಸಿದವರ ಅಜ್ಞಾನಾಂಧಕಾರವನ್ನು ಹೋಗಲಾಡಿಸುವದಕ್ಕಾಗಿ ಜ್ಞಾನದೀಪ್ತಿಯಿಂದ ಬೆಳಗುವ ಮಹಾನುಭಾವರೆಂದು ಭಾವಿಸತಕ್ಕದ್ದು. ಪ್ರಾಕೃತ ಮನುಷ್ಯರೆಂದು ಭಾವನೆಯು ಕೂಡದೆಂದು ಸೂಚಿಸಲ್ಪಟ್ಟಿತು.

ಈ ಸಿದ್ಧೋಪಾಯನ ಮಹತ್ತಾದ ಕೃಪೆಯು ಎಂಥಾದ್ದೆಂದರೆ, **ಎಟ್ಟವೊಣ್ಣಾದ ಇಡಮ್ ತರುಮ್.** ಅದನ್ನು ಒದಗಿಸಿಕೊಡಲು ಇನ್ನು ಯಾರಿಗೂ ಬ್ರಹ್ಮರುದ್ರೇಂದ್ರಾದಿಗಳಿಗೆ ಯಾರಿಗೂ ಶಕ್ತಿ ಇಲ್ಲವಾದುದರಿಂದಲಾಗಲಿ **ಎಟ್ಟವೊಣ್ಣಾದು;** ಅಥವಾ ಈತನ ದುಸ್ತರ ಪಾಪಸಂಚಯಗಳಿಂದಾಗಲಿ ದುಸ್ತರವು; ಆದ್ದುದರಿಂದ **"ಸಂಸಾರಸಿಂಧು"**ವು **"ಅತಿದುಸ್ತರ ಮುತ್ತಿತೋಷೋರ್ಮಿಃ"** ಎಂದು ಹೇಳಲ್ಪಟ್ಟಿರುತ್ತದೆ. (ಭಾಗ ೧೨ನೆಯ ಸ್ಕಂದ) ಹೀಗೆ ಅತಿದುಸ್ತರವಾಗಿದ್ದರೂ ಆಶ್ರಿತನಿಗೆ ಸ್ವಾಮಿ ಸಜ್ಕಲ್ಪದಿಂದಲೇ ಅತಿ ಸುಲಭನು. **"ಸಕೃದೇವ ಪ್ರಪನ್ನಾಯ"** ಎಂಬ ಶ್ಲೋಕವೂ ಗೀತಾಚರಮ ಶ್ಲೋಕವೂ ಅಂತಹ ಸೌಲಭ್ಯವನ್ನು ಪ್ರತಿಪಾದಿಸುತ್ತವೆ. **"ತಸ್ಯಾಹಂ ಸುಲಭಃಪಾರ್ಥ ನಿತ್ಯಯುಕ್ತಸ್ಯ ಯೋಗಿನಃ"** ಭರನ್ಯಾಸನಿಷ್ಠನೂ ನಿತ್ಯಯುಕ್ತನಾದ ಯೋಗಿಯೆಂದು ತಿಳಿಯತಕ್ಕದ್ದು; ಭರನ್ಯಾಸವು ಒಂದು ಯೋಗವೆಂದೇ **"ಯೋಗೋಹ್ಯಯಮಪೇಕ್ಷತೇ"** ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ಹಾಗೆಯೇ **"ಏತತ್ ಜ್ಞಾನಂ ಚ ಯೋಗಂ ಚ ಶೇಷೋನ್ಯದ್ಗ್ರಂಥವಿಸ್ತರಃ'** ಎಂಬುದೂ ಅನುಸಂಧೇಯವು. ಸಂಸಾರಸಿಂಧುವೇನೋ ಅಪಾರವು; ತನ್ನನ್ನು ಆಶ್ರಯಿಸಿದವನಿಗಾದರೋ **"ಕರ್ಣಧಾರ ಇವಾಪಾರೇ**

**ಭಗವಾನ್ ಪಾರದರ್ಶಿನಃ"** ಎಂದು (ಭಾಗ ೧, ೧೩, ೪೦) ಹೇಳಿರುವ ಹಾಗೆ ಅದನ್ನು ದಾಟಿಸುವ ನಾವಿಕನು ಆತನೊಬ್ಬನೇ ಇನ್ನು ಯಾರೂ ಇಲ್ಲವು. ಆದುದರಿಂದ **"ಮೋಕ್ಷಮಿಚ್ಛೇಜ್ಜನಾರ್ದನಾತ್" "ಮೋಕ್ಷದೋ ಭಗವಾನ್ ವಿಷ್ಣುಃ" "ಶ್ರೀಮನ್ನಾರಾಯಣೋನಃ ಪತಿರಖಿಲತನುರ್ಮುಕ್ತಿದೋ ಮುಕ್ತಭೋಗ್ಯಃ"** ಎಂದು ಹೀಗೆಲ್ಲಾ ಹೇಳಲ್ಪಟ್ಟಿರುವವನು ಆತನೊಬ್ಬನೇ ಎಂಬ ಭಾವವು.

**ಎಙ್ಗಳ್ ಮಾಧವನಾರ್** ಎಂಬ ಎಙ್ಗಳ್ ಶಬ್ದ ನಮಗೆ ಶೇಷಿಯಾಗಿ, ನಾಥನಾಗಿ, ನಿಯಾಮಕನಾಗಿ, ಸತ್ತಾದಾಯಿಕನಾಗಿ, ಆಶ್ರಯಿಸಿದವರನ್ನು ಕೈಬಿಡದವನಾಗಿರುವ ಭಾವವು ಸೂಚಿತವು. **ಮಾಧವನಾರ್** ಎಂಬ ಪ್ರಯೋಗವು ಅನುಗ್ರಹಮಯಳಾಗಿ ಕರುಣಾಶಾಲಿಯಾಗಿರುವ ಲಕ್ಷ್ಮೀ ಪತಿತ್ವವೇ ಸ್ವರೂಪ ನಿರೂಪಕವೆಂದು **"ಅಪ್ರಮೇಯಂ ಹಿ ತತ್ತೇಜಃ ಯಸ್ಯಸಾ ಜನಕಾತ್ಮಜಾ"** ಎಂಬಲ್ಲಿ ಹೇಳಲ್ಪಟ್ಟ ಭಾವವು ಸೂಚಿತವು. ಲಕ್ಷ್ಮೀನಾರಾಯಣರಿಬ್ಬರೂ ಸೇರಿಯೇ ನಮಗೆ ಪರತತ್ವವೆಂದೂ, ಲಕ್ಷ್ಮಿಯು ಯಾವಾಗಲೂ ಅಪೃಥಕ್ಸಿದ್ಧ ವಿಶೇಷಣವಾದುದರಿಂದ ಒಟ್ಟಿಗೆ ತನ್ನ ಪತಿಯೊಂದಿಗೆ ಸೇರಿ ಉಪಾಯತ್ವ ಉಪೇಯತ್ವ ಜಗತ್ಕಾರಣತ್ವ ಮೋಕ್ಷಪ್ರದತ್ವ ಮೊದಲಾದ ಸರ್ವವ್ಯಾಪಾರಗಳಲ್ಲೂ ಅನ್ವಯ ಹೊಂದಿದವಳೆಂಬುದು ಸೂಚಿತವು. **"ಲಕ್ಷ್ಮ್ಯಾಸಹ ಹೃಷೀಕೇಶೋ ದೇವ್ಯಾ ಕಾರುಣ್ಯರೂಪಯಾ ರಕ್ಷಕಃ"** ಎಂಬ ಲಕ್ಷ್ಮೀತಂತ್ರಾನುಸಾರ ಲಕ್ಷ್ಮಿಗೇನೇ ಹೆಚ್ಚು ಆಧಿಕ್ಯವನ್ನು ಹೇಳಿರುವದರಿಂದ ಅವಳನ್ನು ಸೇರಿಸಿ ಶ್ರೀ ಪರಾಶರ ಭಟ್ಟರೂ **"ಜಾಮಾತಾ ದಯಿತ ಸ್ತವೇತಿ ಭವತಿ ಸಂಬಂಧದೃಷ್ಟ್ಯಾ ಹರಿಃ"** ಎಂದು ಶ್ರೀಗುಣ ರತ್ನಕೋಶದಲ್ಲಿ ಉಪಪಾದಿಸಿರುವದರಿಂದಲೂ **ಮಾಧವನಾರ್** ಎಂಬ ಪ್ರಯೋಗವು.

**ಮುಟ್ಟವಿನ್ನೈತ್ತಿರಳ್ಮಾಣ**—ಎಂಬುದು ಶ್ರೀ ಲೀಲಾಸಾರಥಿಯು ಅರ್ಜುನ ಶೋಕವನ್ನು ಹೋಗಲಾಡಿಸುವುದಕ್ಕಾಗಿ ಹೇಳಿದ ದಿವ್ಯಸೂಕ್ತಿಯ ಕರುಣಾರಸ ಪರೀವಾಹವನ್ನು ಸೂಚಿಸುತ್ತದೆ. ಅರ್ಜುನನು ಮೊದಲಿನಿಂದಲೂ ಸ್ವಾಮಿಯಲ್ಲಿ ಮನಸ್ಸನ್ನು ಇಟ್ಟು, ಕರ್ಮಯೋಗ ಭಕ್ತಿಯೋಗಗಳನ್ನು ಅನುಷ್ಠಿಸುವದಕ್ಕೆ ಕಷ್ಟವನ್ನು ಪ್ರದರ್ಶಿಸಿ **"ಚಂಚಲಂ ಹಿ ಮನಃ ಕೃಷ್ಣ"** ಎಂದು ತನ್ನ ಅಶಕ್ತತೆಯನ್ನು ತೋರಿಸಿಕೊಂಡಿರುತ್ತಾನೆ. ಆದರೂ 9ನೆಯ ಅಧ್ಯಾಯಾಂತ್ಯದಲ್ಲಿ ಭಕ್ತಿಯೋಗಾನುಷ್ಠಾನದಿಂದ **"ಮನ್ಮನಾಭವ"** (ಗೀ. ೯.೩೪) ಎಂದು ಹೇಳಿ ಮುಗಿಸಿದರು. ಆದರೂ ಇದು ಕಷ್ಟತರವಾದ ಮಾರ್ಗವೇ ಎಂದು ಅರ್ಜುನನು ನಿರಾಶೆಯಿಂದಿರುವಾಗ. ಆತನಿಗೆ ಪ್ರತಿಹೇಳಲು ಸ್ಥಳ ಕೊಡದೆ ತಾವೇ ಪುನಃ ಉಪಾಸನೆಯಲ್ಲಿ ಆತನಿಗೆ ಅಭಿರುಚಿಯ ಎಂಟಾಗುವದಕ್ಕಾಗಿ ತಮ್ಮ ಮಾಹಾತ್ಮ್ಯೆಯನ್ನು ತಿಳಿಸಲಾಗಿ, ಆಗ ಅರ್ಜುನನು ಅವರ ಕಲ್ಯಾಣಗುಣಗಳ ಮತ್ತು ವಿಭೂತಿಗಳ ಮಾಹಾತ್ಮ್ಯೆಯನ್ನು

ಪ್ರಶ್ನಿಸಿ, ತಿಳಿದು, **"ತೇರೂಪಂ ಐಶ್ವರಂ ದ್ರಷ್ಟುಮಿಚ್ಛಾಮಿ"** ಎಂದು ಪ್ರಾರ್ಥಿಸುತ್ತಾನೆ. ಕರುಣಾಕರನು ಅದನ್ನು ಪ್ರದರ್ಶಿಸಿದನಂತರ ನಿನ್ನ ಪ್ರಾಪ್ಯರೂಪವಾದ ಪರವಾಸುದೇವ ರೂಪವನ್ನು ತೋರಿಸೆಂದು ಪ್ರಾರ್ಥಿಸುತ್ತಾನೆ. ಸ್ವಾಮಿಯು ಒಡನೆ ಪರಮವಾತ್ಸಲ್ಯವನ್ನು ಪ್ರದರ್ಶಿಸಿ ಅದನ್ನು ತೋರಿಸಿ, ಪುನಃ ಇನ್ನೊಂದು ಸಲ ನನ್ನನ್ನೇ ಅನನ್ಯ ಭಕ್ತಿಯಿಂದ ಅಂದರೆ ಪರಮೈಕಾಂತ್ಯದಿಂದ ಉಪಾಸಿಸಿದ ಹೊರತು ತಾನು ವಶ್ಯನಲ್ಲವೆಂದು ಹೇಳಿ ಮುಗಿಸಿದರು. ಆಗಲೂ ಅರ್ಜುನನೇ ಸ್ವಾಮಿಯಲ್ಲಿ ಐಕಾಂತ್ಯ ಮನಸ್ಸನ್ನಿಡುವದು ಕಷ್ಟವಾಗಿ, ಹಾಗೆ ಅಂತಹ ಮನಸ್ಸು ಬೇಕಿಲ್ಲದ ಇನ್ನೊಂದು ವಿಧವಾದ ಜಿಜ್ಞಾಸುವಿನ ಉಪಾಸನೆಯನ್ನು ಮಾಡಲೇ ಎಂದು ಕೇಳುತ್ತಾನೆ. ಆಗಲೂ ಶ್ರೀ ಕೃಷ್ಣನು ಅದು ಕ್ಲೇಶವು ಬೇಡ ಎಂದು ಹೇಳಿ, ಜ್ಞಾನಿಯಾಗಿ ಐಕಾಂತ್ಯದಿಂದ ನನ್ನ ದಿವ್ಯಮಙ್ಗಳ ವಿಗ್ರಹವನ್ನೇ ಉಪಾಸಿಸು; ಹಾಗೆ ನನ್ನಲ್ಲಿ ಮನಸ್ಸನ್ನಿಡುವದು ಕಷ್ಟವಾದರೆ ಸಾಧನಗಳನ್ನು ತಿಳಿಸುವೆನು ಎಂದು ಮೂರು ವಿಧ ಸಾಧನಗಳನ್ನು ಉಪದೇಶಿಸಿದನು. ಇದರಿಂದಲೂ ತೃಪ್ತನಾಗದೆ ಹಿಂದೆ ಹೇಳಿದುದನ್ನೇ ಇನ್ನೊಂದುಸಲ ಸವಿಸ್ತಾರವಾಗಿಯೂ ಇನ್ನೂ ವಿಶೇಷ ವಿಷಯಗಳನ್ನೂ ತಿಳಿಸಿ, ಮೂರನೆಯ ಸಲ ನಿನ್ನ ವಿಹಿತಕರ್ಮಗಳೊಂದಿಗೆ ನನ್ನನ್ನೇ ಉಪಾಸನತಕ್ಕದ್ದು ನ್ಯಾಯವಾದುದರಿಂದ ನನ್ನ ಈ ಎಲ್ಲಾ ಉಪದೇಶವನ್ನು ಚನ್ನಾಗಿ ವಿಮರ್ಶಿಸಿ, ತಿಳಿದು ಅನಿಷ್ಟನಿವೃತ್ತಿ ಇಷ್ಟಪ್ರಾಪ್ತಿಯನ್ನೂ ಬೋಧಿಸುವನೇನೆಂದರೆ **"ಮನ್ಮನಾಭವ"** ಎಂದು ಹೇಳಿದರು. ಆಗ ಅರ್ಜುನನು ಆಗಲೂ ಅಂತಹ ಐಕಾಂತ್ಯದಲ್ಲಿ ಮನಸ್ಸನ್ನು ಇಡಲು ಅಸಾಧ್ಯವೇ, ನೀನು ಉಪದೇಶಿಸಿದ ಉಪಾಸನವು ಕಷ್ಟತರವೇ, ತನಗಿರುವ ಪಾಪಗಳು ಅಸಂಖ್ಯೇಯಗಳೇ; ಪ್ರಾಯಶ್ಚಿತ್ತಗಳ ಮೂಲಕ ಪಾಪಗಳನ್ನೆಲ್ಲಾ ಕಳೆದುಕೊಳ್ಳೋಣವೆಂದರೆ, ಎಷ್ಟು ಪ್ರಾಯಶ್ಚಿತ್ತಗಳನ್ನು ಒಂದು ಜೀವಮಾನದಲ್ಲಿ ಅನುಷ್ಠಿಸಲು ಸಾಧ್ಯವು ? ಆದುದರಿಂದ ತನಗೆ ಎಂದಿಗಾದರೂ ಸದ್ಗತಿ ಉಂಟೇ ? ಎಂದು ಭಯಶೋಕ ಆಕಿಂಚನ್ಯಗಳಿಂದ ತಪ್ತನಾಗಿ ಅಳುತ್ತಾನೆ. ಆಗ ಕರುಣಾಪಿಯೂಷಜಲಸಿಧಿಯು ಮರುಗಿದವನಾಗಿ ಓ ಅರ್ಜುನನೇ ಅಳಬೇಡ, ನನ್ನನ್ನು ಶರಣಹೊಂದು, ನಿನ್ನ ಎಲ್ಲಾ ಪಾಪಗಳನ್ನೂ ಸಮಗ್ರವಾಗಿ ಹೋಗಲಾಡಿಸುವೆನು, ನೀನು ಇನ್ನೇನನ್ನೂ ನನ್ನನ್ನು ಹೊಂದುವದಕ್ಕಾಗಿಯಾಗಲಿ ಅಥವಾ ಪ್ರಾಯಶ್ಚಿತ್ತರೂಪವಲ್ಲಾಗಲಿ ಮಾಡತಕ್ಕದ್ದಿಲ್ಲವು ಎಂದು **ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ । ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ** ಎಂದು ಸಮಾಧಾನವನ್ನು ಮಾಡಿರುತ್ತಾರೆ. ಇದನ್ನು ಸ್ಮರಿಸುವದಕ್ಕಾಗಿ **ಮುಟ್ಟೈವಿನೈತಿರಳ್ ಮಾಳ** ಎಂಬ ಪ್ರಯೋಗವು. **ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ** ಎಂಬುದರ ಉಪಪಾದನೆಯು. ಹೀಗೀಗ ಲೀಲಾಸಾರಥಿಯ ಸಙ್ಕಲ್ಪವೂ ವ್ರತವೂ, ಆದುದರಿಂದ **ಮುಯನ್ರಿಡುಮ್**

**ನಾನುಳಮುರನ್ದವರ್ಕ್ಕುಮ್ ವರನ್ದವರು ಮಿನ್ನಿಲೈಗಲ್ ।**
**ತಾನುಳನಾಯುಗಕ್ಕುಂ ತೆರಮಿಜ್ಙ ನಮುಕ್ಕುಳದೇ ।**

---

ಎಂದು ಹೇಳಲ್ಪಟ್ಟಿತು. ಶ್ರೀರಾಮಾವತಾರಿಯಾಗಿಯೂ **ಏತದ್ವ್ರತಂ** ಎಂದೂ ಹೇಳಲ್ಪಟ್ಟಿತು.

ಆದುದರಿಂದ ನೀನು ಶೋಕಿಸುವದಕ್ಕೆ ಕಾರಣವಿಲ್ಲವು. ಗುರೂಪಾಯವು ನಿನ್ನಿಂದ ಆಗದಿದ್ದರೆ ಈ ಲಘೂಪಾಯವನ್ನು ಅವಲಂಬಿಸು ಎಂದು **ಅಙ್ಙೆನ್ನಾರ್** ನೀನು ಭಯದಿಂದ ಶೋಕಿಸಲು ಕಾರಣವಿಲ್ಲವೆಂದು **ಮಾಶುಚಃ** ಎಂಬ ಪದದ ಅರ್ಥವನ್ನು ಹೇಳಿದರೆಂಬ. **ಕಳ್ಳೆಳಲ್**–ಸ್ವತಃ ಶೋಭಾಯಮಾನವಾದ ಎಂದರೆ ಭೋಗ್ಯತಮವಾದ, ಶಾಬ್ದವಾಗಿಯೂ ಅರ್ಥವಾಗಿಯೂ ಇರುವ ಮಹತ್ತಾದ ಅರ್ಥಗಳಿಂದ ತಲೆತೂಗುವ ಹಾಗೆ ಇರುವ ಎಂಬ ಭಾವವು. **ವಾಶಕತ್ತಾಲ್**– ದಿವ್ಯವಚನವಾದ ಚರಮಶ್ಲೋಕದಿಂದ, ಸ್ವಾಮಿಯೇ ಸ್ವತಃ ಪ್ರತಿಜ್ಞಾಪೂರ್ವಕವಾಗಿ ಹೇಳಿದ ಪ್ರಮಾಣದಿಂದ, **ಕಲಙ್ಗನಿಲೈ**–ವ್ಯಾಕುಲತೆ ಇಲ್ಲದಿರುವ ಸ್ಥಿಮಿತವಾದ ಮನಸ್ಸಿನ ಸ್ಥಿತಿಯನ್ನು ಎಂದರೆ ಮೋಹ ಭಯ ಶೋಕಗಳಿಂದ ಮನಸ್ಸಿನ ಚಾಂಚಲ್ಯವನ್ನು ಕಳೆದುಕೊಂಡು ನಿರ್ಭರತ್ವ, ನಿರ್ಭಯತ್ವ, ಸಂಶಯತ್ವಗಳಿಂದ ಕೂಡಿದ ಸ್ಥಿರವಾದ ನೆಲೆಯನ್ನು **ಪೆತ್ತನಮೇ**–ಹೊಂದಿದೆವಲ್ಲವೇ. ಅವಧಾರಣ ದಿಂದ ತಾವು ಆ ಕಾರಣದಿಂದ ತುಂಬಾ ಸುಕೃತಶಾಲಿಗಳು, ಧನ್ಯರು ಎಂಬ ಭಾವವು.

**ಅವತಾರಿಕೆಯು**—ರಹಸ್ಯತ್ರಯಗಳೇನೋ ಅಮೋಘ ಮನ್ತ್ರಗಳೆಂಬುವನ್ನು ಎಲ್ಲರೂ ಒಪ್ಪತಕ್ಕ ವಿಷಯವೇ. ಆದರೂ ನೀವು ಅವುಗಳನ್ನು ಉಪಪಾದಿಸಿರು ವದಕ್ಕೆ ವ್ಯತ್ಯಸ್ತವಾಗಿ ಇತರರು ಅರ್ಥಮಾಡಿದುದರಿಂದ ಅವರು ನಿಮ್ಮ ಗ್ರಂಥವನ್ನು ತುಚ್ಛವಾಗಿ ಭಾವಿಸಬಹುದಲ್ಲಾ ಎಂದರೆ ಮುಂದಿನ ಎರಡು ಪಾಶುರಗಳಿಂದ ಸಮಾ ಧಾನವನ್ನು ಹೇಳುತ್ತಾರೆ. ಅಸೂಯಾಪರರು ಇದನ್ನು ದೂಷಿಸುವದರಿಂದ ನನಗೇನೂ ಕುಂದುಕವಿಲ್ಲ. ಸ್ವಾಮಿಯ ಅನುಗ್ರಹದಿಂದಲೇ ಆತನಿಗೆ ತುಂಬಾ ಪ್ರಿಯವಾದ ಕೈಂಕರ್ಯವಾದ ಈ ಗ್ರಂಥನಿರ್ಮಾಣ ಮಾಡಿದುದರಿಂದ ಆತನು ಪ್ರೀತನಾಗಿ ಸ್ವೀಕರಿಸು ತ್ತಾನೆಂಬ ನಂಬಿಕೆ ಉಂಟೆಂದು ಈ ಪಾಶುರದಲ್ಲಿ ಹೇಳಿ, ಮುಂದಿನ ಪಾಶುರದಲ್ಲಿ ಪರಮ ಸಾತ್ವಿಕರು ಇದು ಅತ್ಯದ್ಭುತ ಗ್ರಂಥವೆಂದು ವಿಶೇಷವಾಗಿ ಶ್ಲಾಘಿಸಬಹುದು ; ಆಸುರಪ್ರಕೃತಿಗಳಾದ ಅಸೂಯಾಪರರು ಇದೇನು ಗ್ರಂಥವು ಪರಮನಿಸ್ಸಾರಭೂತ ವಾದುದೆಂದು ಹೀಯಾಳಿಸಬಹುದು ; ಸುಕೃತಿಗಳ ಶ್ಲಾಘನೆಯಿಂದಲೂ ದುಷ್ಕೃತಿಗಳ ನಿಂದೆಯಿಂದಲೂ ಸಂತೋಷವಾಗಲಿ, ದುಃಖವಾಗಲಿ ನನಗಿಲ್ಲವು. ಏತಕ್ಕೆಂದರೆ ಶ್ರೀಹಯಗ್ರೀವರು ನನ್ನ ಹೃದಯಗುಹೆಯಲ್ಲಿದ್ದುಕೊಂಡು ಹೇಳಿದುದನ್ನು ನಾನು

**ಕೂನುಳನೆಞ್ಜಗಳಾರ್ ಕುತ್ತಮೊಣ್ಣಿಯಿಗಳನ್ದಿಡಿನುಮ್**
**ತೇನುಳಪಾದಮಲರ್ ತಿರುಮಾಲುಕ್ಕು ತ್ತಿತ್ತಿಕ್ಕುಮೋ || ೫೫ ||**

---

ಸುಮ್ಮನೆ ಬರೆದಿರುತ್ತೇನಾದುದರಿಂದ, ಈ ಗ್ರಂಥವು ನನ್ನದಲ್ಲವು. ಆದುದರಿಂದ ಅವರ ಶ್ಲಾಘನೆಯಾಗಲಿ ನಿಂದೆಯಾಗಲಿ ನನಗೆ ಸೇರಿದುದಲ್ಲವೆನ್ನುತ್ತಾರೆ.

**ವಾನುಳ್**–ದಿವ್ಯವೈಕುಂಠದಲ್ಲಿರುವವರಿಗೆ ಅಥವಾ ಸ್ವರ್ಗಲೋಕದಲ್ಲಿರುವವರಿಗೆ ಎಂದರೆ ಮುಕ್ತರಿಗೂ ಮತ್ತು ಇಂದ್ರಾದಿ ದೇವತೆಗಳಿಗೂ, **ವರುನ್ದುವರುಮ್**–ಅತಿ ಪ್ರಯಾಸದಿಂದ ದೊರೆತ ಅಥವಾ ದೊರೆಯುವ, **ಇನ್ನಿಲೈಗಳ್**–ಈ ಗ್ರಂಥದಲ್ಲಿ ಪ್ರತಿಪಾದಿಸಿರುವ ತತ್ವಹಿತ ಪುರುಷಾರ್ಥಬೋಧಕಗಳನ್ನು, ಧರ್ಮೋಪದೇಶಗಳನ್ನು ಎಂಬ ಭಾವವು, **ತಾನುಳನಾಯ**–ಆಚಾರ್ಯನಿಷ್ಠೆ ಕೃಪೆಯಿಂದ ನಾವು ಹೊಂದಿದರಾಗಿ, **ಉಗಕ್ಕುಮ್ ತರಂ**–ಇಂತಹ ಈ ಪ್ರಬಂಧೋಕ್ತನಿಷ್ಠೆಗಳನ್ನು ಹೊಂದಿದವರನ್ನು ಕಂಡು ಸಂತೋಷಿಸುವ ಸ್ವಭಾವವು ಅಥವಾ ಹಾಗೆ ಆಚಾರ್ಯಕೃಪೆಯಿಂದ ಲಬ್ಧವಾದುದನ್ನು ಕಂಡು ಆನಂದಿಸುವ ಸ್ವಭಾವವು, **ಇಙ್ಗ**–ವಿರೋಧಿವರ್ಗದಿಂದ ತುಂಬಿ ಈ ಹೇಯದೇಹವನ್ನು ಧರಿಸಿ ಸಂಸಾರ ಬಂಧನದಲ್ಲಿರುವ ಈ ಪ್ರಕೃತಿ ಮಂಡಲದಲ್ಲೇ **ನಮಕ್ಕುಳದೇ**–ನಮಗೂ ನಮಗೆ ಸಂಬಂಧಪಟ್ಟವರಿಗೂ ಲಭಿಸಿತಲ್ಲಾ, ನಾವು ಎಂತಹ ಭಾಗ್ಯವಂತರು ಧನ್ಯರು ಎಂಬ ಭಾವವು. ಅವಧಾರಣವು ಹರ್ಷಾಶ್ಚರ್ಯಗಳನ್ನು ಸೂಚಿಸುತ್ತದೆ. **ಕೂನುಳನೆಞ್ಜಗಳಾಲ್**-ಕೌಟಿಲ್ಯಯುಕ್ತ ಹೃದಯವನ್ನು ಹೊಂದಿದವರಿಂದ, **ಕುತ್ತಮೊಣ್ಣಿ**–ಈ ಗ್ರಂಥಾಭಿಪ್ರಾಯಗಳಲ್ಲಿ ದೋಷಗಳನ್ನಾರೋಪಿಸಿ, **ಇಗಳನ್ದಿಡಲುಮ್–ಈ** ಗ್ರಂಥವನ್ನು ಅನಾದರಿಸಿದರೂ, **ತೇನುಳಪಾದಮಲರ್**–ಮಧುಸ್ಯಂದನಿಯಾದ ಪಾದಕಮಲಗಳುಳ್ಳ **ತಿರುಮಾಲುಕ್ಕು**–ಶ್ರಿಯಃಪತಿಗೆ, **ತಿತ್ತಿಕ್ಕುಮ್**–ಅವಶ್ಯ ಆನಂದವುಂಟಾಗುವದು. ಆನಂದ ಉಂಟಾಗುವದರಲ್ಲಿ ನಿಸ್ಸಂದೇಹವೆಂಬ ಭಾವವು.

**ಉಪಪಾದನೆಯು**–ಹಿಂದೆ ಉತ್ತರ ಕೃತ್ಯಾಧಿಕಾರದ ಶ್ಲೋಕದಲ್ಲಿ "**ಸಂತೋಷಾರ್ಥಂ ವಿಮೃಶತಿ ಸಿದ್ಧಿ ರಧ್ಯಾತ್ಮ ವಿದ್ಯಾಂ**" ಎಂದು ಕೃತಕೃತ್ಯ ಪ್ರಪನ್ನನನ್ನು ಕುರಿತು ಹೇಳಿದರು. ಯಾರ **ಸಂತೋಷಾರ್ಥ** ಎಂಬ ವಿಚಾರದಲ್ಲಿ, **ಪರಮಾತ್ಮ ಸಂತೋಷಾರ್ಥಂ**, ಆತನಿಗೆ ಪರಮಭೋಗ್ಯವಾಗಿ ಆನಂದದಾಯಕವೆಂದು ಈ ಪಾಶುರದ ಉತ್ತರಾರ್ಧದಲ್ಲಿ **ತಿತ್ತಿಕ್ಕುಮೋ** ಎಂಬ ಪ್ರಯೋಗದ್ವಾರಾ ಹೇಳಿದರು. **ತಿರುಮಾಲ್, ಶ್ರಿಯಃಪತಿಯು** ಕಣ್ಣಿಗೆ ಕಾಣುವದಿಲ್ಲ, ಮಾತಾಡುವದಿಲ್ಲವು. ಆತನು ಈ ಕೈಙ್ಕರ್ಯದಿಂದ ಸಂತುಷ್ಟನಾದನೆಂದು ಹೇಗೆ ಹೇಳುತ್ತೀರಿ ? ಎಂದರೆ ಪರಮಪುರುಷನು "**ರಸಹ್ಯೇವಾಯಂ ಲಬ್ಧ್ವಾನಂದೀ ಭವತಿ**" ಸ್ವಯಮಾನಂದಮಯನು ಎಂದು ತಿಳಿಸುವದಕ್ಕಾಗಿ "**ತೇನುಳಪಾದಮಲರ್**" ಆತನ ಪಾದ

ಕಮಲವೂ ಮಧುವಿನ ಹಾಗೆ ಆನಂದದಾಯಕವು. ಆತನು **"ರಸಘನ ಏವ"** ದಂಪೂರ್ಣ ಆನಂದ ಸ್ವರೂಪನೆಂದು ತಿಳಿಸಿದರು, ಇದರಿಂದ ಆತನು ಆನಂದಿಸುವ ನೆಂದು ಭಾವಿಸಬಹುದು. ಅಥವಾ ಹಾಗಿಲ್ಲದಿದ್ದರೂ, ತದೀಯರಾದ ಮಹಾನು ಭಾವರು ಸಂತೋಷಿಸಿದರೆ ಭಗವಂತನು ಸಂತುಷ್ಟನಾದನು ಎಂದೂ ನಂಬಬಹುದು. ಈ ಗ್ರಂಥವು ತಮ್ಮ ಆಚಾರ್ಯರು ಕೃಪಾಪುರಸ್ಸರವಾಗಿ ಉಪದೇಶಿಸಿದ ಅರ್ಥಗಳನ್ನೇ ಸ್ವಲ್ಪವೂ ವ್ಯತ್ಯಾಸವಿಲ್ಲದೆ ಒಳಗೊಂಡಿರುವದರಿಂದ ಆಚಾರ್ಯರ ಸಂತೋಷಾರ್ಥ ವಾಗಿಯೂ ಹಾಗೆಯೇ ಅವರ ಈಚಿನ ಆಚಾರ್ಯರಾಗಿರಲು ಯೋಗ್ಯವಾದ ಪರಮ ಭಾಗವತರ ಸಂತೋಷಾರ್ಥವಾಗಿಯೂ ಬರೆಯಲ್ಪಟ್ಟು ಅವರಿಗೆ ಭೋಗ್ಯವಾದುದ ರಿಂದಲೂ ಸ್ವಾಮಿಗೆ ಆನಂದದಾಯಕವೆಂದೂ ನಿಶ್ಚಯಿಸಬಹುದು. ಇದನ್ನು ಪೂರ್ವಾರ್ಥದಲ್ಲಿ **ತಾನುಳನಾಯ್ ಉಗಕ್ಕು ತರುವನ್** ಎಂದು ಹೇಳಿದರು. ದಾಕ್ಷಿಣ್ಯದಿಂದ ಆ ಪರಮಭಾಗವತರು ಆನಂದಿಸಿದ ಹಾಗೆ ತೋರ್ಪಡಿಸಬಹುದು ಎಂದು ಆಕ್ಷೇಪ ತಂದರೆ, ತನ್ನ ಸ್ವಂತ **ಸಂತೋಷಾರ್ಥಂ ವಿವೃಶತಿ** ಎಂದೂ ಅರ್ಥ ಮಾಡಬಹುದು ಎಂಬ ತಾತ್ಪರ್ಯವು ತೋರಿಬಂದು, ಅದನ್ನೇ ಇಲ್ಲಿಯೂ **ಇನ್ನಿಲೈಗಳ್ ತಾನುಳನಾಯ್** ಎಂದು ಹೇಳಿ, ಅನಂತರ **ತರವಿಂಜ್ಞನ ಮುಕ್ಕುಳದೇ** ಎಂದು ತಮ್ಮ ಧನ್ಯತೆಯನ್ನು ಪ್ರಶಂಶಿಸಿದುದರಿಂದ ತಮಗೇ ಈ ಗ್ರಂಥರಚನೆಯಿಂದ ಪರಮಾನಂದ ಉಂಟಾಗಿದೆ ಎಂದು **ಧನ್ಯೋಸ್ಮ್ಯನುಗೃಹಿತೋಸ್ಮಿ ಕೃತಾರ್ಥೋಸ್ಮಿ ಕೃಪಾನಿಧೇ** ಎಂಬುದಾಗಿ ಹೇಳಿಕೊಂಡರು.

**ವಾನುಳ್ ಇತ್ಯಾದಿ**-ಈ ಗ್ರಂಥದಲ್ಲಿ ಉಪಪಾದಿಸಿರುವ ಉಪದೇಶ ವಿಷಯ ಗಳಲ್ಲಿ **ವಾನುಳ್** ದಿವ್ಯವೈಕುಂಠದಲ್ಲಿರುವ ಮುಕ್ತರೂ ಕೂಡ ಶ್ಲಾಘಿಸುವಂತಾದ್ದು ; ಹೇಗೆಂದರೆ ಇಂತಹ ಶ್ರಮದಿಂದ ಲಭ್ಯವಾದ ಪ್ರವೃತ್ತಿಗಳಿಂದಲ್ಲವೇ ನಾವು ಇಲ್ಲಿಗೆ ಬಂದು ಸೇರಿದೆವು ಎಂದು ಅವರಿಗೂ ತುಂಬಾ ಉಪಾದೇಯವಾದುದು. ಅಥವಾ ಸ್ವರ್ಗದಲ್ಲಿರುವ ದೇವತೆಗಳಿಂದ ಇಂದ್ರಾದಿಗಳೂ ಕೂಡ ಅತಿ ಪ್ರಯಾಸದಿಂದ ಹೊಂದಬಹುದಾದ ನಿಷ್ಠೆಗಳೇ ಇಲ್ಲಿ ಉಪಪಾದಿತವು. ದೇವತೆಗಳೂ ನಮ್ಮಹಾಗೆ ಜೀವಾತ್ಮರುಗಳು ; ಅವರೂ ಕೂಡ ನಮ್ಮಹಾಗೆಯೇ ಉಪಾಯಾನುಷ್ಠಾನವನ್ನು ಮಾಡಿ ದಿವ್ಯವೈಕುಂಠವನ್ನು ಸೇರುವದಕ್ಕೆ ಅಧಿಕಾರವನ್ನು ಅರ್ಥಿತ್ವ ಸಾಮರ್ಥ್ಯ ವೆರಡೂ ಇರುವದರಿಂದ ಹೊಂದಿದವರೆಂದು **"ತದುಪರ್ಯಪಿ ಬಾದರಾಯಣಸ್ಸಂಭವಾತ್"** (          ) ಎಂಬ ವ್ಯಾಸಸೂತ್ರದಲ್ಲಿ ಉಪಪಾದಿತವು. ಆ ಅಭಿ ಪ್ರಾಯವು ಇಲ್ಲಿ ಸೂಚಿಸಲ್ಪಟ್ಟಿತು. ಇನ್ನೊಂದು ಉಪಾಯವಾದ ಉಪಾಸನದಲ್ಲೂ ದೇವತೆಗಳಿಗೆ ಅಧಿಕಾರವುಂಟೆಂದು **"ದೇವಾ ಅಪ್ಯಸ್ಯರೂಪಸ್ಯ ನಿತ್ಯಂದರ್ಶನ ಕಾಂಕ್ಷಿಣಃ"** ಎಂಬ (ಗೀ. ೧೧-೫೨) ಶ್ಲೋಕದಲ್ಲಿ ಹೇಳಲ್ಪಟ್ಟಿತು. ಇಲ್ಲಿ **ಅಸ್ಯರೂಪಸ್ಯ** ಎಂದರೆ ವಿಶ್ವರೂಪಸ್ಯ ಎಂದು ತಪ್ಪು ಅರ್ಥ ಮಾಡಿರುತ್ತಾರೆ.

ಇದು ಪರರೂಪವೆಂದೂ, ಅರ್ಜುನನು ವಿಶ್ವರೂಪ ಪ್ರದರ್ಶನಾ ನಂತರ ಆ ಪ್ರಸಿದ್ಧ ದಿವ್ಯವೈಕುಂಠರೂಪವನ್ನು ತೋರಿಸು ಎಂದು ಪ್ರಾರ್ಥಿಸುತ್ತಾನೆ. ಪರಮವಾತ್ಸಲ್ಯ ಯುಕ್ತನಾದ ಭಗವಂತನೂ ಅದನ್ನೇ ತೋರುತ್ತಾನೆ. ನಾನು ಬರೆದಿರುವ ಭಗವದ್ಗೀತೆಯ ಅರ್ಥ ತಾತ್ಪರ್ಯಗಳನ್ನು ಪರಾಂಬರಿಸಿ.

ಇಂತಹ ಉಪದೇಶಗಳನ್ನು ತಮ್ಮ ಆಚಾರ್ಯರ ಮೂಲಕ ಹೊಂದಿದವೇ ಎಂಬುದೊಂದು ಸಂತೋಷ, ಮತ್ತು ಇತರರಲ್ಲೂ ಇಂತಹ ನಿಷ್ಠೆಗಳನ್ನು ಕಂಡು ಸಂತೋಷ, ಇವುಗಳಿಂದ ತಾವು ಪರಮ ಧನ್ಯರೆಂಬ ಭಾವವನ್ನು ವಾನುಳ ಇತ್ಯಾದಿಗಳಿಂದ ತೋರ್ಪಡಿಸಿರುತ್ತಾರೆ. ಪುರುಷಸೂಕ್ತವು ಅಂತಹ ಪರಮೈಕಾಂತ್ಯವನ್ನು "ತಮೇವಂ ವಿದ್ವಾನ್ ಅಮೃತ ಇಹ ಭವತಿ" ಎಂಬಲ್ಲಿ ಶ್ಲಾಘಿಸಿ, ಅಂತಹ ಆನಂದವು ಇಹ ಎಂದು ಹೇಗೆ ಹೇಳಿತೋ ಹಾಗೆಯೇ ಇಲ್ಲೂ ಇಜ್ಗೇ ಎಂದು ಹೇಳಲ್ಪಟ್ಟಿತು. ಬದ್ಧರಾಗಿರುವ ಈ ಸಂಸಾರದೆಶೆಯಲ್ಲಿರುವ ಈ ಭೂಮಂಡಲದಲ್ಲಿ ಅಂತಹ ಆನಂದದೆಶೆಯುಂಟಾಗುವದು ಅತಿ ದುರ್ಲಭವು; ಅಂತಹ ಸುಕೃತವು "ಕ್ವಚಿತ್ಕ್ವಚಿನ್ಮಹಾಭಾಗ"ರಾದ ಕೆಲವರಾದ ನಮ್ಮಂಥಾವರಿಗೆ ಇದು ಲಭಿಸಿದುದು ಸರ್ವೇಶ್ವರನ ಪರಮಕೃಪೆಯೆಂಬ ಭಾವವು. ಇದೀಗ ನಮ್ಮ ಆಚಾರ್ಯಾದಿಗಳ ಮೂಲಕ ಉಂಟಾದ ಪರಮಲಾಭವೆಂದು ಆಶ್ಚರ್ಯವನ್ನೂ ಅವರುಗಳಲ್ಲಿ ಪರಮ ವಿಶ್ವಾಸವನ್ನೂ ಪ್ರದರ್ಶಿಸಿರುತ್ತಾರೆ.

ಆದರೆ ಈ ಆನಂದದ ಮಧ್ಯದಲ್ಲಿ ಒಂದು ಕೊರತೆಯನ್ನೂ ಪ್ರದರ್ಶಿಸುತ್ತಾರೆ; ಏನೆಂದರೆ, ಇತರ ಸಿದ್ಧಾನ್ತಿಗಳು ಈ ಗ್ರಂಥಾಭಿಪ್ರಾಯಗಳನ್ನು ತಮ್ಮ ತಮ್ಮ ಸಿದ್ಧಾನ್ತಕ್ಕೆ ಸರಿಬೀಳದೆ ಹೋದರೆ ಇವುಗಳನ್ನು ನಿರಾಕರಿಸುವದೇನೋ ನ್ಯಾಯವು. ಇದು ನಮಗೆ ಬೇಕಾಗಿಲ್ಲವೆಂದೂ, ಆದರೆ ಶ್ರೀ ಯತಿವರ್ಯರ ಸಿದ್ಧಾನ್ತಕ್ಕೇ ಸೇರಿದ ಕೆಲವರು, ಶಾಸ್ತ್ರ ಸಮುಸ್ತವಲ್ಲದ ಅಭಿಪ್ರಾಯಗಳಿಂದ ಪ್ರೇರಿತರಾಗಿ ನಮ್ಮ ಈ ಅಭಿಪ್ರಾಯಗಳು ಶ್ರೀ ಯತಿವರ್ಯರಿಂದಲೇ ನಡದೂರ್ ಅಮ್ಮಾಳ್, ಕಿಡಾಂಬಿ ಆಚ್ಚಾನ್ ಮೂಲಕ ಬಂದ ಸಂಪ್ರದಾಯ ಮೂಲಕ ಬಂದವುಗಳಾಗಿದ್ದರೂ ಈ ನಮ್ಮ ಗ್ರಂಥಾಭಿಪ್ರಾಯಗಳ ಅಪಲಾಪವು ಸ್ವಲ್ಪ ಶೋಚನೀಯವಾದ ವಿಷಯವು; ಆನಂದದ ಮಧ್ಯದಲ್ಲಿ ಸ್ವಲ್ಪ ಶೋಕವು; ಮಧುವಿಗೆ ಸ್ವಲ್ಪ ಕಹಿಯ ಸಂಬಂಧವು ಈ ಲೋಕದಲ್ಲಿ ತಪ್ಪಿದ್ದಲ್ಲವೆಂಬ ಭಾವವು; ಅಂತವರನ್ನು ಕೂನುಳ ನೆಂಜಗಳ್ ಎಂದು ಹೇಳಿದರು. ಇರುವದನ್ನು ಯಥಾರ್ಥವಾಗಿ ಗ್ರಹಿಸುವ ಶಕ್ತಿಯಿಲ್ಲದ ಕುಟಿಲಮನಸ್ಕರೆಂದು ಹೇಳಿದರು.

ಹೀಗೆ ಸ್ವಲ್ಪ ಪರಿತಾಪವು ತಪ್ಪಿದ್ದಲ್ಲವಾಗಿ ಇದ್ದರೂ, ಒಂದು ಸಂಪೂರ್ಣ ನಂಬಿಕೆಯುಂಟು; ತನ್ಮೂಲಕ ಆ ಪರಿತಾಪವನ್ನು ಕಳೆದುಕೊಂಡಿರುತ್ತೇನೆಂಬ ಭಾವದಿಂದ ಹೇಳುತ್ತಾರೇನೆಂದರೆ "ತೇನುಳಪಾದಮಲರ್ ತಿರುವಾಲುಕ್ಕು

**ತಿತ್ತಿಕ್ಕುನೋ**–ಸ್ವಾಮಿ ಶ್ರಿಯಃಪತಿಯ ಚರಣಕಮಲಗಳು ಮಧುಸ್ಯಂದಿನಿಗಳು ; ಅಂತಹ ಪಾದಗಳನ್ನು ಆಶ್ರಯಿಸಿದ ಮಾಹಾತ್ಮ್ಯೆಯಿಂದ ಬೇವಿನ ಕಾಯಿಯ ಕಹಿಯು ಹೇಗೆ ಮಧುಸೇವನೆಯಿಂದ ತೊಲಗುತ್ತದೋ, ಹಾಗೆ ಅವರುಗಳಿಂದುಂಟಾದ ಕುತ್ತವು ನ್ಯೂನತೆಯು ಸ್ವಾಮಿಯ ಪಾದಕಮಲರಜಸ್ಸಿನಿಂದ ಕೂಡಿದ ಈ ಮಧುವಿಂದ ತೊಲಗಿದೆ ಎಂಬ ಭಾವವನ್ನು ಸೂಚಿಸಿರುತ್ತಾನೆ. ಆತನ ಪಾದ ಕಮಲಗಳ ಆಶ್ರಯವು ಭೋಗ್ಯತಮವಾಗಿ ಆ ಮಧುವಿಗೆ ಸಮಾನವಾದುದು ರುಚಿಕರವಾದುದು, ಬೇರೆ ಯಾವುದೂ ಇಲ್ಲವೆಂಬ ಭಾವವು. ಮಧುವಾಗಿರುವ ಎಷ್ಟು ಪದಾರ್ಥಗಳು ನಮಗೆ ವೇದ್ಯವೋ ಅವೆಲ್ಲಕ್ಕಿಂತಲೂ ಮಧುರವಾದುದು. **ತೇನುಳ್** ಎಂಬ ಪದದಿಂದ ತೋರುವದೇನೆಂದರೆ ಈ ಅಮೃತಸ್ಯಂದಿಸಿಯಾದ ಪಾದಕಮಲವನ್ನು ಆಶ್ರಯಿಸುವವರಿಗೆ ಐಹಿಕೈಶ್ವರ್ಯ ಸ್ವರ್ಗಲೋಕಾದ್ಯೈಶ್ವರ್ಯಗಳ ಉಪಭೋಗಕ್ಕಿಂತ ನಿರಿತಿಶಯ ಮಧುರವಾದ ಪರಿಪೂರ್ಣ ಬ್ರಹ್ಮಾನುಭವರೂಪ ಭೋಗವನ್ನುಂಟುಮಾಡುತ್ತದೆಂಬ ಭಾವವು ಸೂಚಿತವು.

**ತೇನುಳ ಪಾದಮಲರ್** ಎಂಬ ಪ್ರಯೋಗವು "**ತದಸ್ಯಪ್ರಿಯಮಭಿ ಪಾಥೋ ಅಸ್ಯಾಮ್ । ನರೋಯತ್ರ ದೇವಯವೋ ಮದನ್ತಿ । ಉರು ಕ್ರಮಸ್ಯ ಸಹ ಬಂಧುರಿತ್ಥಾ । ವಿಷ್ಣೋಃ ಪರಮೇಪದೇ ಮಧ್ವ ಉತ್ಸಃ**" (              ) ಎಂಬುದನ್ನು ಸ್ಮರಿಸುತ್ತದೆ. ಅಭಿಪ್ರಾಯವೇನೆಂದರೆ ಈ ವಿಷ್ಣುವಿನ ಪಾದೋದಕವಾದ ಗಂಗಾತೀರ್ಥವನ್ನೇ ಪ್ರಾಶನ ಮಾಡೋಣ. ಈ ತೀರ್ಥದ ವಿಷಯದಲ್ಲಿ ದೇವತ್ವವನ್ನು ಅಪೇಕ್ಷಿಸುವವನು ಯಾವನೋ ಅವನು ಪ್ರಾಶನ ಮಾಡುವನು, ಹೀಗೆ ಸರ್ವೋತ್ಕೃಷ್ಟಗಳಾದ ವಿಷ್ಣುವಿನ ಪಾದಗಳು ಮಧುವಿನ ಪ್ರವಾಹವು ಎಂಬ ಭಾವವು ; ಅಥವಾ **ತೇನ್** ಎಂದರೆ ಜೇನು ತುಪ್ಪದ ಹಾಗೆ ಮಧುರವಾದ ಜಲವುಳ್ಳ ಗಂಗೆಯನ್ನು ಪ್ರವಹಿಸುವ ಹಾಗೆ ಮಾಡಿದುದರಿಂದ **ತೇನುಳ ಪಾದಮಲರ್**–ಅತಿ ಮಧುರವಾದ ಗಂಗಾಜಲ ವನ್ನುಂಟುಮಾಡಿದ ಪಾದದಿಂದುಂಟಾದ ಪ್ರವಾಹವನ್ನುಳ್ಳ ಶ್ರಿಯಃಪತಿಗೆ, ಅವನು ಎಂತವನೆಂದರೆ ಹೇಗಾದರೂ ಮಾಡಿ ಯಥಾರ್ಥವಾದ ತತ್ವಹಿತ ಪುರು ಷಾರ್ಥಗಳನ್ನು ಸದಾಚಾರ್ಯರುಗಳ ಮೂಲಕ ಹರಡಬೇಕೆಂಬ ಕುತೂಹಲ ವುಳ್ಳವನು, ಅಂತಹ ಶ್ರಿಯಃಪತಿಗೆ **ತಿತ್ತಿಕ್ಕುನೋ**-ಇನ್ನು ಹೆಚ್ಚಾಗಿ ಸ್ವಾದುತಮ ವಾಗಿ ಆನಂದವನ್ನುಂಟುಮಾಡುತ್ತದೆ. ಈ ಸಂದರ್ಭದಲ್ಲಿ "**ಜನಸ್ಯ ಕೃಷ್ಣಾ ದ್ವಿಮುಖಸ್ಯ ದೈವಾದಧರ್ಮಶೀಲಸ್ಯ ಸುದುಃಖಿತಸ್ಯ । ಅನುಗ್ರಹಾಯೈವ ಚರನ್ತಿನೂನಂಭೂತಾನಿ ಭವ್ಯಾನಿ ಜನಾರ್ದನಸ್ಯ** ।" ಎಂಬ ಭಾಗವತ ಶ್ಲೋಕವು ಅನುಸಂಧೇಯವು. ಅದು ಹೇಗೆ ? ಎಂದರೆ ಪಾದವೇ ಸ್ವಾದುವಾದ ಮಧುರ ರಸದ ಹಾಗೆ ಭೋಗ್ಯತಮವು. ಅಂತಹ ಪಾದದಲ್ಲಿ ಮಾಡುವ ಶರಣಾಗತಿ

**ವೆಳ್ಳೈ ಪ್ಪರಿಮುಕರ್ ದೇಶಿಕರಾಯ್ ವಿರಕಾಲಡಿಯೋಮ್**
**ಉಳ್ಳತ್ತೆಳುದಿಯತೋಲೈಯಿಲಿಟ್ಟನಮ್ ಯಾ ಮಿದರ್ಕೇನ್**

---

ಮಾಹಾತ್ಮ್ಯೆಯನ್ನು ಬೋಧಿಸುವ ಈ ಗ್ರಂಥವು ತತ್ಸಂಬಂಧದಿಂದ ಸ್ವಾದುತಮವಾಗಿ ಆತನಿಗೆ ಸಂತೋಷವನ್ನುಂಟುಮಾಡುತ್ತದೆಂಬುದು ನಿಸ್ಸಂದೇಹವೆಂಬ ಭಾವವು. ಯಾಮುನ ಮುನಿಗಳು ಹಾಗೆಯೇ "**ತವಾಮೃತಸ್ಯಂದಿನಿ ಪಾದಪಂಕಜೇ ನಿವೇಶಿತಾತ್ಮಾ**" ಎಂದು ಪ್ರಯೋಗಿಸಿರುತ್ತಾರೆ. ಆ ಕಾರಣದಿಂದ **ಕೂನುಳ ನೆಂಜುಗಳಾಲ್ ಕುತ್ತಮೆಣ್ಣುಗೈ** ನಮಗೆ ಅತ್ಯಲ್ಪ ವಿಷಯವಾಗಿ ಗಮನಾರ್ಹವೇ ಅಲ್ಲವೆಂಬ ಭಾವವು. ಅದರಿಂದ ತಮಗೆ ಏನೊಂದೂ ಖೇದವಿಲ್ಲವೆಂದು ಹೇಳಿದರು. ಇದನ್ನೇ ಮುಂದಿನ ಶ್ಲೋಕದಲ್ಲೂ ಹೇಳಿ ತಮಗೆ ಇದರಿಂದ ಈ ಪದವಿ ಚಿತ್ತವಿಕಾರವುಂಟಾಗಲು ಕಾರಣವೇ ಇಲ್ಲವೆನ್ನುತ್ತಾರೆ.

**ಅವತಾರಿಕೆಯು**-ಎಲ್ಲಾ ಸಂಘಗಲ್ಲೂ ಸಾತ್ವಿಕರೂ ಅಸುರಸ್ವಭಾವದವರೂ ಉಂಟು. ಇದೂ ಅಲ್ಲದೆ ಸಂಪ್ರದಾಯಾನ್ತರಸ್ಥರೂ ಮತಾಂತರಸ್ಥರೂ ಇರುತ್ತಾರೆ. ಇವರೆಲ್ಲರೂ ಈ ಗ್ರಂಥವನ್ನು ಆದರಿಸುವದು ಎಂಬುದು ಸಾಧ್ಯವಿಲ್ಲವು. ಯುಕ್ತಾಯುಕ್ತಗ್ರಾಹಿಗಳಾದರೆ ಆಗೀಗ ವಿಮರ್ಶಿಸಿ, ಇದು ಉಪಾದೇಯವು, ಇದು ಅನುಪಾದೇಯವೆಂದು ತಿಳಿದು ಈ ಗ್ರಂಥವನ್ನು ಉಪಾದೇಯವೆಂದೇ ಪರಿಗ್ರಹಿಸುವರೆಂದು ಸೂಕ್ಷ್ಮವಾದ ವಿಚಾರಪರರಾದ ಕುಶಲಬುದ್ಧಿಗಳನ್ನು ಕುರಿತು ಕೊನೆಯ ಮಾತನ್ನು ಹೇಳುತ್ತಾರೇನೆಂದರೆ-ಕೆಲವು ಪ್ರಾಜ್ಞರು ಈ ಗ್ರಂಥವು ಬಹು ಶ್ಲಾಘ್ಯವಾಗಿದೆ, ಪರಮೋಪಾದೇಯವೆಂದು ಹೇಳಬಹುದು; ಇನ್ನು ಕೆಲವರು ಈ ಗ್ರಂಥದಲ್ಲಿ ಏನಿದೆ ? ಪರಮನಿಸ್ಸಾರವಾದುದೆಂದು ದೂಷಿಸಬಹುದು. ಇವುಗಳಿಂದ ನನ್ನ, ಈಶ್ವರ ಕೃಪೆಯಿಂದ ಪರಿಶುದ್ಧತೆಯನ್ನು ಹೊಂದಿದ ಮನಸ್ಸು, ವಿಕಾರವನ್ನು ಹೊಂದುವದಿಲ್ಲವು. ಶ್ಲಾಘನೆಯಿಂದ ಗರ್ವ ಸಂತೋಷಗಳೂ ನಿರಾಕರಣೆಯಿಂದ ದುಃಖ ಕೋಪಗಳು ಉಂಟಾಗುವದಿಲ್ಲವು. ಆದುದರಿಂದ ಸಂತೋಷ ನಿರಾಕರಣೆಗಳು ಬರೆಸಿದವನಾದ ಶ್ರೀಹಯಗ್ರೀವನನ್ನು ಹೋಗಿ ಸೇರುತ್ತವೆಂಬ ಶಾಸ್ತ್ರಾರ್ಥವನ್ನು ಉಪಪಾದಿಸಿ ನಿಗಮನ ಮಾಡುತ್ತಾರೆ.

**ಅರ್ಥವು**-ಓ **ಕೂರ್ಮದಿಯೂರ್**-ಓ ಸೂಕ್ಷ್ಮಬುದ್ಧಿಗಳನ್ನು ಹೊಂದಿದ ಜ್ಞಾನಾಗ್ರೇಸರರೇ ! ಮುಸಲಾಗ್ರ ಬುದ್ಧಿಗಳಲ್ಲವೆಂಬ ಭಾವವು, **ವೆಳ್ಳೈ**-ಬಿಳುಪಾಗಿರುವ, **ಪರಿಮುಕರ್**-ಕುದುರೆ ಮುಖವುಳ್ಳವರು ಎಂದರೆ ವಿದ್ಯಾಭಿಮಾನವುಳ್ಳ ಹಯಗ್ರೀವರು, ಇದೂ ವಿಷ್ಣುವಿನ ಅವತಾರವು, **ದೇಶಿಕರಾಯ್**-ಅವರೇ ನನಗೆ ಉಪದೇಶಕರು, ಆಚಾರ್ಯರಾಗಿ, ಅಥವಾ ನನಗೆ ಆಚಾರ್ಯರೂಪದಲ್ಲಿ ಶ್ರೀವಾದಿ

**ಕೊಳ್ಳತ್ತುಣಿಯುವುಮ್ ಕೋದೆನ್ರಿಕಳಿವುಮ್ ಕೂರ್ ಮತಿಯೀರ್ ।**
**ಎಳ್ಳತ್ತನೈಯುಂ ಕವಾದಿಕಳಾದೆನೆಳಿನ್ ಮತಿಯೇ ॥**

---

ಹಂಸಾಂಬುದ ಅಥವಾ ಕಿಡಾಂಬಿ ಅಪ್ಪುಳ್ಳಾರೆಂಬ ಅಂಶಾವತಾರರೂಪದಲ್ಲ ಉಪ ದೇಶಿಕರಾಯ್, **ವಿರಕಾಲ್**–ಆ ಅಪ್ಪುಳ್ಳಾರ್ರವರು ಉಪದೇಶಿಸಿದ ಉಪಾಯ ದಿಂದ, ಪರಕು ಎಂದರೆ ಉಪಾಯ, ಬರೆಯುವುದಕ್ಕೆ ಪೇನಾದ ಹಾಗೆ ಒಂದು ಸಾಧನವೆಂಬ ಭಾವವು, ಅಥವಾ ಸ್ವಾಮಿಯು ತಮ್ಮ ಆಚಾರ್ಯರಿಗೆ ಹೇಳುವದು, ಅದನ್ನು ತಾವು ಬರೆಯುವದು, ಹೀಗೆ ಆಚಾರ್ಯರು ಸಾಧನವು, **ಅಡಿಯೋಂ**– ದಾಸನಾಗಿ ಅವರು ಹೇಳಿದುದನ್ನು ಬರೆಯುವ ಗುಮಾಸ್ತನಾದ ನನ್ನ **ಉಳ್ಳತ್ತೆಳಿ ತಿಯದು**–ಮನಸ್ಸಿನಲ್ಲಿ ಅವರು ಮೊದಲು ಬರೆದುದನ್ನು ನಾನು **ಓಲೆಯಿಲಿಟ ನುವುಮ್**–ಪುಸ್ತಕದಲ್ಲಿ ಬರೆದೆನು ; **ಯಾಮಿದರ್ಕೇನ್**–ಇಷ್ಟೇ ನನ್ನ ಕೆಲಸವಾಗಿರು ವಾಗ ನನ್ನ ಮೂಲಕ ದೋಷ ಉಂಟಾಗುವದಕ್ಕೆ ಕಾರಣವೇನಿದೆ. ಈ ಗ್ರಂಥದಲ್ಲಿ ಬರೆಯುವದಕ್ಕೆ ನಾನೂ ಒಂದು ಲೇಖಣಿಯು ಎಂಬ ಭಾವವು. **ಕೊಳ್ಳತ್ತುಣಿ ಯನುವುಮ್**–ಕೆಲವರು ಇದು ಉಪಾದೇಯವಾದುದು, ಅಂಗೀಕರಿಸಬಹುದು ಎಂದು ವಿಶ್ವಾಸವನ್ನು ತೋರಿಸಿದರೂ, ಇನ್ನು ಕೆಲವರು, **ಕೋದು**–ಅಸಾರವಾದುದು ಈ ಗ್ರಂಥವೆಂದು, **ಇಗಳಿನುವುಂ**–ಅನಾದರವನ್ನು ತೋರಿದರೂ, **ಎನ್ ಎಳಿನ್ ಮತಿಯು**-ನನ್ನ ದೃಢವಾದ ಅಧ್ಯವಸಾಯವುಳ್ಳ ಮನಸ್ಸು, **ಎಳ್ಳತ್ತನೆಯುಂವುಮ್**- ಎಳ್ಳಷ್ಟಾದರೂ, **ಉಗವಾದು**–ಆದರಿಸಿದರೆಂದು ಸಂತೋಷದಿಂದ ಹಿಗ್ಗುವದಿಲ್ಲವು, **ಇಗಳಾದು**–ನಿಸ್ಸಾರವೆಂದು ದೂಷಿಸಿದರೆಂದು ದುಃಖಿಸುವದಿಲ್ಲವಷ್ಟೇ.

**ತಾತ್ಪರ್ಯ—**ಈ ಗ್ರಂಥರಚನೆಯಲ್ಲಿ ನನ್ನ ಕರ್ತೃತ್ವವು ಎಷ್ಟರಮಟ್ಟಿಗೆ ಎಂದರೆ ಒಬ್ಬರು ಯಥಾರ್ಥವಾದ ವಿಷಯಗಳನ್ನು ಬೋಧಿಸುವುದಕ್ಕಾಗಿ ಶ್ರೀ ಹಯಗ್ರೀವ ರಿಂದ ಏರ್ಪಡಿಸಲ್ಪಟ್ಟ ಸರ್ವಶ್ರೇಷ್ಠದೇಶಿಕರು ಹೇಳಿದುದನ್ನು ತಾವು ಬರೆಯುವದು. ಹೀಗೆ ಪರಾಧೀನ ಕರ್ತೃತ್ವವೆಂದು ಹೇಳಿಕೊಳ್ಳುತ್ತಾರೆ. ಶಾಸ್ತ್ರದಲ್ಲಿ ಜೀವಾತ್ಮನಿ ಗೇನು ಕರ್ತೃತ್ವ ಉಂಟೇ ಇಲ್ಲವೇ ಎಂಬ ಸಂದರ್ಭದಲ್ಲಿ, ಶಾಸ್ತ್ರದ ವಿಧಿನಿಷೇಧ ವಾಕ್ಯಗಳಿಗೆ ವೈಯರ್ಥ್ಯ ಉಂಟಾಗದ ಹಾಗೆ ಕರ್ತೃತ್ವ ಉಂಟೆಂದೇ ಒಪ್ಪತಕ್ಕದಾ- ಗಿರುತ್ತದೆ. ಇದು “ **ಕರ್ತಾ ಶಾಸ್ತ್ರಾರ್ಥವತ್ವಾತ್** ” (ಸೂತ್ರ ೨, ೩, ೩೩) ಎಂಬ ಸೂತ್ರದಲ್ಲಿ ಉಪಪಾದಿತವು. ಆ ಸಂದರ್ಭದಲ್ಲಿ ಜೀವನೇನು ಸರ್ವಸ್ವತಂತ್ರ ನಾದ ಕರ್ತೃವೇ ಎಂಬ ಸಂದೇಹದಲ್ಲಿ ಪರಮಾತ್ಮನಿಗೆ ಅಧೀನವಾದ ಕರ್ತೃತ್ವವೆಂದು "**ಪರಾತ್ತು ತಚ್ಛ್ರುತೇಃ**" (೨, ೩, ೪೦) ಎಂಬ ಸೂತ್ರದಲ್ಲಿ ಹೇಳಲ್ಪಟ್ಟಿತು. ಹಾಗಾದರೆ ಪರಮಪುರುಷನಿಗೇ ವಿಧಿನಿಷೇಧವಶ್ಯತ್ವವೂ ಶಾಸ್ತ್ರವಶ್ಯತ್ವವೂ ಏರ್ಪಡುತ್ತ ದೆಂಬ ಪೂರ್ವಪಕ್ಷವು ಒದಗುವುದರಿಂದ, ಇದಕ್ಕೆ ಸಮಾಧಾನವಾಗಿ, “ **ಕೃತ**

**ಪ್ರಯತ್ನಾಪೇಕ್ಷಸ್ತು ವಿಹಿತ ಪ್ರತಿಷಿದ್ಧಾ ವೈಯರ್ಥ್ಯಾದಿಭ್ಯಃ"** (೨, ೩, ೪೧) ಎಂಬ ಮುಂದಿನ ಸೂತ್ರವು ಹೇಳಲ್ಪಟ್ಟಿತು. ತನ್ನ ವಿವೇಕಬಲದಿಂದ ಸರಿಯಾದ ಕರ್ತವ್ಯವು ಯಾವುದೆಂದು ತಿಳಿದು, ಅದನ್ನು ಮಾಡುವೆನು ಎಂದು ಸಙ್ಕಲ್ಪಿಸಿ ಪ್ರಯತ್ನಿಸತಕ್ಕದ್ದು. ಈ ವಿಷಯದಲ್ಲಿ ಮಾತ್ರ ಜೀವನಿಗೆ ಸ್ವಾತಂತ್ರ್ಯವು ; ಮುಂದಕ್ಕೆ ಪರಮಾತ್ಮನು ಪ್ರೇರಿಸಿ ನಡೆಸುವದರಿಂದ ಪರಾಯತ್ತವಾದುದು ; ಅಸ್ವತಂತ್ರ ವಾದುದು. ಇದರಿಂದ ಜೀವನಿಗೇ ಕರ್ತೃತ್ವಭೋಕ್ತೃತ್ವವೇ ವಿನಾ ಪರಮಾತ್ಮನಿ ಗಲ್ಲವು. ಇದರಿಂದ ಸಾಮಂಜಸ್ಯವು ಉಂಟಾಯಿತು. ಈ ವಿಷಯವನ್ನು ಚನ್ನಾಗಿ ವಿಮರ್ಶಿಸಿ ತಿಳಿಯದೆ, ಸ್ವಾಮಿಯು ಒಬ್ಬನನ್ನು ರಾಜನನ್ನಾಗಿಯೂ ಇನ್ನೊಬ್ಬನನ್ನು ಭಿಕ್ಷುಕನನ್ನಾಗಿಯೂ, ಒಬ್ಬನನ್ನು ಸುಖಿಯನ್ನಾಗಿಯೂ ಇನ್ನೊಬ್ಬನನ್ನು ದುಃಖಿ ಯನ್ನಾಗಿಯೂ ಮಾಡಿರುವುದು ನ್ಯಾಯವೇ ? ಎಂದು ಆಕ್ಷೇಪಿಸುವರು. ಪ್ರಥಮ ಸಙ್ಕಲ್ಪದಲ್ಲಿ ಮಾತ್ರ ಜೀವಾತ್ಮನಿಗೆ ಸ್ವಾತಂತ್ರ್ಯವು, ಅನಂತರ ಅಸ್ವಾತಂತ್ರ್ಯವು, ಪರಮಪುರುಷಾಧೀನವು. ಇದನ್ನೇ ಈ ಪಾಶುರದಲ್ಲಿ ಉಪಪಾದಿಸಿರುತ್ತಾರೆ. ತಮ್ಮ ಸ್ವಾತಂತ್ರ್ಯಪ್ರಯತ್ನ ಎಷ್ಟರಮಟ್ಟಿಗೆ ಎಂದರೆ ಶ್ರೀಹಯಗ್ರೀವರು ಶಾಸ್ತ್ರಪ್ರಕ್ರಿಯೆ ಗಳನ್ನೆಲ್ಲಾ ಚನ್ನಾಗಿ ಬೋಧಿಸುವದಕ್ಕಾಗಿ ತಮ್ಮ ಕೃಪೆಯಿಂದ ತಮ್ಮ ಆಚಾರ್ಯ ರಾದ ಕಿಡಾಂಬಿ ಅಪ್ಪುಳ್ಳಾರೆಂಬ ನಾಮಧೇಯದಿಂದ ಒಂದು ಅಂಶಾವತಾರವನ್ನು ಮಾಡಿದ್ದಾರೆಂದೂ ಅವರ ಅಭಿಪ್ರಾಯಗಳು ಸರ್ವಸಾಮಂಜಸ್ಯ ಉಳ್ಳವೆಂದೂ ಭಾವಿಸಿ, ಅವರು ಹೇಳಿದ ಅಭಿಪ್ರಾಯಗಳನ್ನು ಹೇಗೆ ಸುಮ್ಮನೆ ಬರೆಯತಕ್ಕದ್ದೋ ಅಷ್ಟು ಮಾತ್ರವೇ. ತಮ್ಮದುಮಿಕ್ಕಿದುದನ್ನೆಲ್ಲಾ ನಡೆಸಿಕೊಟ್ಟವರು ಶ್ರೀಹಯಗ್ರೀವರು. ಹೀಗೆ ತಮ್ಮದು ಪರಾಯತ್ತ ಕರ್ತೃತ್ವವೆಂದು ಹೇಳಿಕೊಂಡರು. ಕೆಲವರು ತಮ್ಮ ಗ್ರಂಥವನ್ನು ಪರಮೋಪಾದೇಯವೆಂದು ಭಾವಿಸಿ ಸ್ವೀಕರಿಸಬಹುದು. ಇನ್ನು ಕೆಲವರು ಅದನ್ನು ನಿಸ್ಸಾರವೆಂಬ ಭಾವನೆಯಿಂದ ನಿರಾಕರಿಸಬಹುದು. ಈ ಶ್ಲಾಘನೆಯಿಂದ ತಮಗೆ ಹರ್ಷವೂ, ಈ ನಿರಾಕರಣೆಯಿಂದ ದುಃಖವೂ ಇಲ್ಲವೆಂದು ಹೇಳುತ್ತಾರೆ ; ಏಕೆಂದರೆ ತಮಗೆ ಅದರ ಅಭಿಪ್ರಾಯಗಳಲ್ಲಿ ಯಾವ ವಿಧವಾದ ಸ್ವಾತಂತ್ರ್ಯವೂ ಇಲ್ಲವೆಂದು ಹೇಳುವದಕ್ಕೆ ಹೊರಟು, ಮಧ್ಯಸ್ಥಕ್ಕೆ ಆ ಎರಡು ವಿಧದವರನ್ನು ತ್ಯಜಿಸಿ, ನಿಷ್ಪಕ್ಷವಾದ ಅಭಿಪ್ರಾಯಗಳನ್ನುಳ್ಳ **ಕೂರ್ಮತಿಯ** ರನ್ನು ಸಂಬೋಧಿಸಿ ಹೇಳುತ್ತಾರೆ. **ಕೂರ್ಮದಿಯಾರ್**–ಸೂಕ್ಷ್ಮ ಬುದ್ಧಿ ಗಳುಳ್ಳ ಪ್ರಾಜ್ಞರುಗಳಿರಾ, ಎಂದು ಸಂಬೋಧನೆಯು ; ಏಕೆಂದರೆ ಸ್ವಪಕ್ಷದವನು ತಮಗೆ ಅನುಕೂಲವಾದ ಸಾಕ್ಷ್ಯವನ್ನೂ, ಪರಪಕ್ಷದವನು ಪ್ರತಿಕೂಲವಾದ ಸಾಕ್ಷ್ಯ ವನ್ನೂ ಕೊಡುವರು. ಆದುದರಿಂದ ನಿಷ್ಪಕ್ಷಪಾತಿಗಳ ಸಾಕ್ಷ್ಯವು ಪರಮೋಪಾದೇಯ ವಾದುದರಿಂದ ಹಾಗೆ ಸಂಬೋಧನೆಯು.

**ವೆಳ್ಳೈಪ್ಪರಿಮುಕರ್**-ಎಂಬುದರಿಂದ ಶ್ರೀ ಭಗವಾನ್ ಹಯಗ್ರೀವರು ಹೇಳಲ್ಪಟ್ಟರು. ಶ್ರೀದೇಶಿಕರಿಗೆ ಶ್ರೀಹಯಗ್ರೀವರೇ ಆರಾಧ್ಯದೇವತೆಯು. ಏಕೆಂದರೆ ಒಂದನೆಯದು, ಇವರ ಮಾತುಲರೂ ಗುರುವೂ ಆದ ಅಪ್ಪಿಳ್ಳಾರ್ರವರು, ಶ್ರೀದೇಶಿಕರವರೇ ಸತ್ಪಾತ್ರವೆಂದರಿತು ಶ್ರೀ ವೈನತೇಯಮನ್ತ್ರವನ್ನು ಶ್ರೀರಾಮಾನುಜ ಸಿದ್ಧಾನ್ತ ಸ್ಥಾಪನೆಯು ಇವರಿಂದುಂಟಾಗುತ್ತದೆಂದು ಉಪದೇಶಿಸಿಕೊಟ್ಟರು. ಇವರು ಈ ಮನ್ತ್ರದ ಪುನಶ್ಚರಣೆಯನ್ನು ಮಾಡುತ್ತಾ ತಿರುವಹೀನ್ದ್ರಪುರದಲ್ಲಿ ಕೆಲವು ಕಾಲವಿದ್ದು ಔಷಧಾದ್ರಿಶಿಖರದಲ್ಲಿರುವ ಅಳಗಿಯಶಿಂಗರ ಸನ್ನಿಧಿಯಲ್ಲಿ ಒಂದು ಅಶ್ವತ್ಥ ವೃಕ್ಷದ ಕೆಳಗೆ ನಿತ್ಯಕರ್ಮಾನುಷ್ಠಾನಗಳನ್ನು ನಡೆಸಿ ನಿಯತರಾಗಿ ವೈನತೇಯ ಮನ್ತ್ರವನ್ನು ಆವೃತ್ತಿ ಮಾಡಿಕೊಂಡಿದ್ದರು. ಆಗ ವೈನತೇಯರು ಅವರಿಗೆ ಪ್ರತ್ಯಕ್ಷರಾದರು. **"ನಮಃ ಪನ್ನಗನದ್ಧಾಯ ವೈಕುಂಠವಶವರ್ತಿನೇ, | ಶ್ರುತಿಸಿಂಧುಸುಧೋತ್ಪಾದ ಮಂದರಾಯ ಗರುತ್ಮತೇ"** ಎಂದು ವೈನತೇಯರನ್ನು ಸ್ತುತಿಸಿ ಅವರಿಂದ, ಶ್ರೀಭಗವದ್ರಾಮಾನುಜ ಸಿದ್ಧಾನ್ತ ಸಮೃದ್ಧ್ಯರ್ಥವಾಗಿ ಶ್ರೀ ಹಯಗ್ರೀವ ಮಂತ್ರವನ್ನು ಉಪದೇಶಿಸಿದರು. ಆಗ ಶ್ರೀದೇಶಿಕರು **"ವ್ಯಾಖ್ಯಾಂ ಮುದ್ರಾಂ ಕರಸರಸಿಜೈಃ ಪುಸ್ತಕಂ ಶಂಖಚಕ್ರೇ ಬಿಭ್ರದ್ಭಿನ್ನ ಸ್ಫಟಿಕ ರುಚಿರೇ ಪುಂಡರೀಕೇ ನಿಷಣ್ಣಃ | ಅಮ್ಲಾನ ಶ್ರೀ ರಮೃತ ವಿಶದೈರಂಶುಭಿಃ ಪ್ಲಾವಯನ್ಮಾಮಾವಿರ್ಭೂಯಾದನಘ ಮಹಿಮಾ ಮಾನಸೇ ವಾಗಧೀಶಃ"** ಎಂದು ಶ್ರೀ ಹಯಗ್ರೀವ ಧ್ಯಾನವನ್ನೂ ಮನ್ತ್ರೋಚ್ಚಾರಣ ಮೂಲಕ ಮಾಡಿಕೊಂಡಿದ್ದರು. ಇದೊಂದು ಕಾರಣವು. ಇಲ್ಲಿ **ಸ್ಫಟಿಕರುಚಿರೇ** ಎಂದು ಹೇಳಿರುವ ಹಾಗೆ **ವೆಳ್ಳೈಪರಿಮುಖ**ರೆಂಬ ಪ್ರಯೋಗವು. ಈ ಕಾರಣನಿಂದ **ಹಯಗ್ರೀವ ಸ್ತೋತ್ರವನ್ನು** ಪ್ರಥಮತಃ ರಚಿಸಿದರು. ಅಲ್ಲಿಯೂ, **"ಜ್ಞಾನಾನಂದಮಯಂ ದೇವಂ ನಿರ್ಮಲ ಸ್ಫಟಿಕಾಕೃತಿಮ್"** ಎಂಬ ಪ್ರಯೋಗವಿರುತ್ತದೆ. ಈ ಅದ್ಭುತ ಸ್ತೋತ್ರವನ್ನು ಸುಜ್ಞಾನಪ್ರಾಪ್ತಿಗಾಗಿ ಅನೇಕರು ಈಗಲೂ ಪಠಿಸುವ ಸಂಪ್ರದಾಯವಿರುತ್ತದೆ. ಇದಾದ ನಂತರ ಈ ಗ್ರಂಥಕರ್ತರು ಈ ಹಯಗ್ರೀವ ಮನ್ತ್ರೋಪದೇಶಕರಾದ ವೈನತೇಯರನ್ನು ಶ್ರೀ ಗರುಡಪಂಚಾಶತ್ ಎಂಬ ಸ್ತೋತ್ರ ಮೂಲಕ ಕೊಂಡಾಡಿರುತ್ತಾರೆ.

ಎರಡನೆಯ ಕಾರಣವೇನೆಂದರೆ—ಶ್ರೀ ಭಾಷ್ಯಕಾರರು ತಮ್ಮ ಪ್ರಿಯಶಿಷ್ಯರಾದ ಆಳ್ವಾನ್ ಎಂಬುವರಿಗೆ ಒಂದು ಶ್ರೀ ಹಯಗ್ರೀವ ಮೂರ್ತಿಯನ್ನು ಆರಾಧನೆಗಾಗಿ ಅನುಗ್ರಹಿಸಿದರು. ಅದು ಕಿಡಾಂಬಿ ಅಪ್ಪಿಳ್ಳಾರ್ರವರ ಅಳಿಯಂದಿರಾದ ಮತ್ತು ಅಲ್ಲಿನ ರಾಜನಾದ, ಕೃಷ್ಣರಾಯನಿಗೆ ಗುರುವಾದ ಪುಂಡರೀಕಾಕ್ಷರು ಆರಾಧಿಸುತ್ತಿದ್ದರು ಇವರಿಗೆ ಶ್ರೀನಿವಾಸನೆಂಬ ಪುತ್ರನು ಜನಿಸಲು ಅವರಿಗೆ ಶ್ರೀ ದೇಶಿಕರವರೇ ನಾಮಕರಣಾದಿಗಳನ್ನು ಮಾಡಿದುದರ ಫಲವಾಗಿ, ಶ್ರೀ ಪುಂಡರೀಕಾಕ್ಷರಿಗೆ

ನನ್ನನ್ನು ಶ್ರೀ ದೇಶಿಕರಿಗೆ ಆರಾಧನೆಗಾಗಿ ಸಮರ್ಪಿಸಿ ಎಂದು ಸ್ವಪ್ನವಾಗುತ್ತದೆ. ಆಗ ಅವರು ತಮ್ಮ ಶಿಷ್ಯನಾದ ರಾಜನಿಗೆ ಅದನ್ನು ತಿಳಿಸಲು ; ಆತನು ಹಾಗೆಯೇ ಸಕಲ ಬಿರುದುಗಳೊಂದಿಗೆ ಈ ಹಯಗ್ರೀವ ಮೂರ್ತಿಯನ್ನು ಉತ್ಸವಪೂರ್ವಕ ಕರೆದುಕೊಂಡು ಹೋಗುವ ಹಾಗೆ ತಮ್ಮ ಆಚಾರ್ಯರಿಗೆ ಹೇಳಲು ; ಅವರು ಕಾಂಚೀ ಪುರವನ್ನು ಸೇರಿ, ಆಗ ಶ್ರೀ ದೇಶಿಕರಿಗೂ ಸ್ವಪ್ನವಾಗಿ ಶ್ರೀ ಹಯಗ್ರೀವರನ್ನು ಎದುರುಗೊಂಡು ಬರಲು, ಆಗ ಪುಂಡರೀಕಾಕ್ಷರು ಅವರನ್ನು ಕಂಡು ಶ್ರೀ ದೇಶಿಕರ ಪಾದಗಳಿಗೆರಗಿ ಆ ದಿವ್ಯಮಂಗಳ ಮೂರ್ತಿಯನ್ನು ತುಂಬಾ ಹರ್ಷಚಿತ್ತದಿಂದ ಸಮರ್ಪಿಸಿದರೆಂದೂ, ಅದನ್ನು ಶ್ರೀ ದೇಶಿಕರು ನಿತ್ಯವೂ ಆರಾಧಿಸುತ್ತಿದ್ದರೆಂದೂ ಇತಿಹಾಸ ಉಂಟು. ಈ ಮೂರ್ತಿಯು ಈಗ ಮೈಸೂರು ರಾಜಗುರುವಾದ ಪರಿವ್ರಾಜಕ ಶಿಖಾಮಣಿಗಳಾದ ಶ್ರೀ ಪರಕಾಲ ಸ್ವಾಮಿಗಳವರ ಆಶ್ರಮದಲ್ಲಿದೆ ಎಂದು ಮಹನೀಯರು ಹೇಳುತ್ತಾರೆ.

ಈ ಎರಡು ಕಾರಣಗಳಿಂದ **ವೆಳ್ಳೈ ಪರಿಮುಖರೇ** ಇವರಿಗೆ ದೇಶಿಕರು. ಸಾಕ್ಷಾತ್ತಾಗಿಯೂ ದೇಶಿಕರು; ಮತ್ತು ಶ್ರೀ ಅಪ್ಪಿಳ್ಳಾರ್ರವರೇ ಒಂದು ಅಂಶಾವತಾರ ವಾಗಿ ಪ್ರಥಮತಃ ವೈನತೇಯ ಮನ್ತ್ರವೂ, ವೈನತೇಯ ಪ್ರಸಾದದಿಂದ ಅನಂತರ ಹಯಗ್ರೀವ ಮನ್ತ್ರವೂ, ಆ ಹಯಗ್ರೀವ ಧ್ಯಾನದಿಂದ ಅರ್ಚಾ ವಿಗ್ರಹ ಪ್ರಾಪ್ತಿಯೂ ಉಂಟಾದುದರಿಂದ, ಅಪ್ಪಿಳ್ಳಾರ್ರವರೇ ಹಯಗ್ರೀವಾಂಶಾವತಾರ ಭಾವನೆ ಯಿಂದಲೂ, **ವೆಳ್ಳೈ ಪರಿಮುಕರ್ ದೇಶಿಕರಾಯ್** ಎಂಬ ಪ್ರಯೋಗವು. ಶ್ರೀ ಹಯಗ್ರೀವರೇ ಆರಾಧ್ಯದೇವತೆಯಾದುದರಿಂದ ಇತರ ಕಡೆಗಳಲ್ಲೂ ಹಯಗ್ರೀವ ರನ್ನೇ ಕೊಂಡಾಡಿರುತ್ತಾರೆ. ಇದಕ್ಕೆ ನಿದರ್ಶನವಾಗಿ "**ಹೃದ್ಯಾಹೃತ್ಪದ್ಮ ಸಿಂಹಾಸನ ರಸಿಕ ಹಯಗ್ರೀವ ಹೇಷೋರ್ಮಿಘೋಷಕ್ಷಿಪ್ತ ಪ್ರತ್ಯರ್ಥಿ ದೃಪ್ತಿರ್ಜಯತಿ ಬಹುಗುಣಾಪಙ್ಕ್ತಿರಸ್ಮದ್ಗುರೂಣಾಮ್**" ಎಂಬ ಗುರು ಪರಂಪರಾಶ್ಲೋಕವನ್ನು ಜ್ಞಾಪಕಕ್ಕೆ ತರುವೆವು. **ಹಯಗ್ರೀವರೇ** ಸ್ವತಃ ಎದುರಿಗೆ ನಿಂತು ಹೇಳಿದರೆ, ಅರ್ಜುನನು ಹೇಗೆ ವಿಶ್ವರೂಪ ದರ್ಶನದಿಂದ ಭಯ ಚಕಿತನಾದನೋ, ಹಾಗೆ ಮಾಡದೆ ಅಪ್ಪುಳ್ಳಾರ್ರವಗೆ ಅಂತರ್ಯಾಮಿಯಾಗಿ ಉಪದೇಶಿಸಿದನೆಂಬ ಭಾವವು ಸಹ ಸೂಚಿತವು. ಭಗವದನುಗ್ರಹಮೂಲಕವಾಗಿಯೂ ಭಾಗವತ ಮುಖಾರವಿಂದಲೂ ಬಂದುದರಿಂದ ಎರಡು ವಿಧವಾದ ಮಹಿಮೆಯು ತಮ್ಮ ಗ್ರಂಥಕ್ಕೆ ಎಂಬ ಭಾವವು. ಆದುದರಿಂದ ಯಾವ ವಿಧನ್ಯೂನತೆ ಮತ್ತೂ ದೋಷಗಳಿಗೆ ಕಾರಣವಿಲ್ಲವು. ತಮ್ಮ ಆಚಾರ್ಯರವರೇ ಶ್ರೀ ಹಯಗ್ರೀವರವರಿಗೆ ಸಾಧನವಾಗಿ ನನ್ನ ಮನಸ್ಸಿನಲ್ಲಿ ಬರೆದಿಟ್ಟರು. ಅದನ್ನೀಗ ನಾನು ನೋಡಿ ಕಾಪಿ ಮಾಡಿರುತ್ತೇನೆ. ಆದುದರಿಂದ ತನಗೆ ಇಷ್ಟು ಮಾತ್ರವೇ ಕರ್ತೃತ್ವವು. ಇಂತಹ ಪರಾಧೀನ ಕರ್ತೃತ್ವದಿಂದಲೇ ಎಲ್ಲಾ ಮಹತ್ತಾದ ಕೃತ್ಯಗಳನ್ನು ನಡೆಸಿ

**ರಹಸ್ಯತ್ರಯ ಸಾರೋಽಯಂ ವೇಙ್ಕಟೇಶ ವಿಪಶ್ಚಿತಾ ।**

ಶ್ರೀಕೃಷ್ಣಾರ್ಪಣಮಸ್ತು ಎಂದು ಹೇಳತಕ್ಕದೆಂಬುದನ್ನು **ಉಳ್ಳತ್ತೆಳಿಯದು ಒಲ್ಲೈಯನಿಟ್ಟೆನರ್** ಎಂಬ ಪ್ರಯೋಗದಿಂದ ಉಪದೇಶಿಸಿರುತ್ತಾರೆ. "**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿದದಾಸಿಯತ್ । ಯತ್ತಪಸ್ಯಸಿ ಕೌನ್ತೇಯ ತತ್ಕುರುಷ್ವಮದರ್ಪಣಮ್**" (ಗೀ. ) ಅನುಸಂಧೇಯವು. ಇಂತಹ ಪಾರತಂತ್ರ್ಯ ಕರ್ತೃತ್ವವನ್ನು ಅನೇಕ ಕಡೆ ಪ್ರದರ್ಶಿಸಿರತ್ತಾರೆ. ದಯಾಶತಕವನ್ನು ಬರೆದು ಗ್ರಂಥಾಂತ್ಯದಲ್ಲಿ "**ವೇದಾನ್ತದೇಶಿಕ ಪದೇ ವಿನಿವೇಶ್ಯ ಬಾಲಂ ದೇವೋ ದಯಾಶತಕಮೇತದ ವಾದಯನ್ಮಾಮ್। ವೈಹಾರಿಕೇಣ ವಿಧಿನಾ ಸಮಯೇ ಗೃಹೀತಂ ವೀಣಾವಿಶೇಷಮಿವ ವೇಙ್ಕಟ ಶೈಲನಾಥಃ**" (೧೦೪) ಎಂದು ತಮ್ಮನ್ನು ಯದ್ಯಪಿ ಒಂದು ಶ್ರೇಷ್ಠವಾದ ಪಾತ್ರವಾಗಿ ಭಾವಿಸಿ ತಮ್ಮ ಮೂಲಕ ಹೊರಪಡಿಸಿದ್ದರೂ ತಾವು ಒಂದು ವೀಣಾವಿಶೇಷದ ಹಾಗೆ ಸ್ವಯಂ ಅಸಮರ್ಥರೆಂದೂ, ಅನಂತರ ಅದು ಮನೋಹರ ಗಾನವನ್ನು ಕೊಡುವ ಹಾಗೆ ಮಾಡಿದವನು ವೇಙ್ಕಟ ಶೈಲನಾಥನೆಂದೂ ಹೇಳಿಕೊಂಡಿರುತ್ತಾರೆ. ಇಂತಹ ಮನೋಭಾವವೇ ಎಲ್ಲಾ ಸಾತ್ವಿಕ ವ್ಯಾಪಾರದಲ್ಲೂ ಇರಬೇಕೆಂಬುದು ಉಪದಿಷ್ಟವು. ನಾನು ಮಾಡಿದನೆಂಬ ಅಹಂಕಾರವು ಸುತರಾಂ ಕೂಡದು.

ಈ ಸಂದರ್ಭದಲ್ಲಿ ತಮ್ಮ ಸ್ವಾತಂತ್ರ್ಯವ್ಯಾವದೂ ಇಲ್ಲದುದರಿಂದ **ಯಾಮಿದರ್ಕೇನ್** ಎಂದು ಹೇಳಿರುತ್ತಾರೆ. ಸರ್ವೇಶ್ವರನಾದ ಹಯಗ್ರೀವರು ಮಾಡಿದುದರ ಮೇಲೆ ಆಕ್ಷೇಪಣೆಯೇ. ಮನುಷ್ಯರಾದ ತಮ್ಮ ಸ್ವಾತಂತ್ರ್ಯವು ಯತ್ಕಿಂಚಿದಿದ್ದರೆ ಆಕ್ಷೇಪಿಸಬಹುದು. ಹಾಗಿಲ್ಲವಲ್ಲಾ ಎಂಬ ತಾತ್ಪರ್ಯವು. ಈ ಪ್ರಬಂಧಕ್ಕೂ ನನಗೂ ಎಷ್ಟು ಸಂಬಂಧವೆಂದರೆ ಮಹನೀಯರು ಬರೆದಿಟ್ಟದನ್ನು ನೋಡಿ ಅದರಂತೆಯೇ ಚ, ತು, ತಪ್ಪದೆ ಬರೆದುದು ; ಇಷ್ಟೇ ಸಂಬಂಧವೇ ವಿನಾ ಇನ್ನು ಯಾವ ಸಂಬಂಧವೂ ನನಗಿಲ್ಲವೆಂಬ ಭಾವವು.

ಅನಸೂಯಾಗಳಾದ "**ಉದಾರಾಸ್ಸರ್ವ ಏವೈತೇ**" ಎಂಬಲ್ಲಿ ಹೇಳಿದ ಉದಾರಮತಿಗಳು, ಈ ಗ್ರಂಥವನ್ನವಲೋಕಿಸಿ, ಸ್ವಾಮಿ ಹೇಳಿ ಬರಿಸಿದುದು ಎಂಬುದನ್ನು ತಿಳಿದು ಈ ಗ್ರಂಥವನ್ನು ಶ್ಲಾಘಿಸಬಹುದು. ಇನ್ನು ಕೆಲವು ಅಸೂಯಾಪರರು, ಈ ಗ್ರಂಥವನ್ನು ನಾನೇ ಬರೆದೆನೆಂದು ಭಾವಿಸಿ ನಿಸ್ಸಾರವಾದ ಗ್ರಂಥವೆಂದು ಭಾವಿಸಬಹುದು; ಇವೆರಡರಿಂದಲೂ ತಮಗೆ ಹರ್ಷಶೋಕಗಳಿಲ್ಲವೆಂದು ಉತ್ತರಾರ್ಧದಿಂದ ಹೇಳುತ್ತಾರೆ. ಅದೇನು ಹಾಗೆ ? ಮನೋವಿಕಾರವುಂಟಾಗುವದಿಲ್ಲವೆಂಬುದನ್ನು ನಂಬುವದು ಹೇಗೆ? ಎಂದರೆ, ಅದನ್ನು ತಾವು ಸ್ವತಂತ್ರಿಸಿ ಬರೆಯಲಿಲ್ಲವು. ಅವುಗಳು ಶ್ಲಾಘನೆಯೂ ನಿಂದೆಯೂ ಸ್ವಾಮಿಯನ್ನೇ ಸೇರಿದು

**ಶರಣ್ಯದಂಪತಿವಿದಾಂ ಸಮ್ಮತಃ ಸಮುಗ್ರಹೃತ || ೮೦ ||**
**ಇತಿ ಕವಿತಾರ್ಕಿಕ ಸಿಂಹಸ್ಯ ಸರ್ವತಂತ್ರ ಸ್ವತಂತ್ರಸ್ಯ**
**ಶ್ರೀಮದ್ವೇಙ್ಕಟನಾಥಸ್ಯ ಶ್ರೀಮದ್ರಹಸ್ಯತ್ರಯಸಾರೇ**
**ನಿಗಮನಾಧಿಕಾರೋ ದ್ವಾತ್ರಿಂಶಃ**
**ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ**

---

ದಾಗಿ ಸ್ವಾಮಿಯ ಅನುಗ್ರಹ ನಿಗ್ರಹಗಳಿಗೆ ಒಳಗಾಗಬಹುದು ಎಂಬ ಭಾವನೆಯನ್ನು ಪ್ರದರ್ಶಿಸಿರುತ್ತಾರೆ. ಮನೋವಿಕಾರವು ಇವುಗಳಿಂದ ಈಷದಪಿ ಇಲ್ಲವೆಂದು ತಿಳಿಸುವದಕ್ಕಾಗಿ ತಮ್ಮ ಮನಸ್ಸು ಎಂತಾದ್ದು ಎಂದರೆ ವಿವೇಕಜ್ಞಾನಕ್ಕೆ ಒಳಗಾಗಿ ಚಾಂಚಲ್ಯವನ್ನು ದೂರೀಕರಿಸಿ, ಭಗವತ್ಕೃಪೆಯಿಂದ ಸ್ಥೈರ್ಯವನ್ನು ಹೊಂದಿರುತ್ತದೆ ಎಂದು "**ಎನ್ ಎಳಿನ್‌ಮತಿ**" ಎಂಬ ಪ್ರಯೋಗವು. ಅಂತಹ ದೃಢಮನಸ್ಕರಲ್ಲೇ ತಮ್ಮ ಅರಿಕೆಯನ್ನು ಮಾಡಿಕೊಳ್ಳುವದು ಯುಕ್ತವೆಂದು "**ಕೂರ್‌ಮದಿಯಾರ್**" ಎಂಬುದಾಗಿ ಸಂಬೋಧನೆಯು. ಕೂರ್‌ಮದಿಯಾರ್ ಅಲ್ಲದವರ ಅಭಿಪ್ರಾಯವು ತಮಗೆ ಬೇಕಾಗಿಯೇ ಇಲ್ಲವು. ಹಾಗಾದರೆ ಕೂರ್‌ಮದಿಯಾರರ ಅಭಿಪ್ರಾಯವು ತಮಗೆ ಏಕೆ? ಅದನ್ನೂ ಗಣನೆಗೆ ತರದೆ ಇರಬಹುದಲ್ಲಾ ಎಂದರೆ; ಹಾಗಲ್ಲವು. ಮಹಾಭಾಗವತೋತ್ತಮರಾಗಿ ಪ್ರಾಜ್ಞರಾದವರ ಪ್ರಸನ್ನತೆಯೇ ಪುರುಷಾರ್ಥಕಾಷ್ಠೆ ಎಂದು ಹಿಂದೆ ಉಪಪಾದಿತವಾಗಿ ಅದು ಆವಶ್ಯಕವಾದುದರಿಂದ, ಅದನ್ನೂ ಪರಿತ್ಯಾಗಮಾಡಲು ಸಾಧ್ಯವಿಲ್ಲವೆಂದು ತೋರಿಸಿರುತ್ತಾರೆ.

**ಅವತಾರಿಕೆಯು**—ಈ ನಿಗಮನ ಶ್ಲೋಕದಲ್ಲಿ ಹಿಂದಿನ ಶ್ಲೋಕದ **ಕೂರ್ ಮದಿಯಾರ್ರು ಶರಣ್ಯದಂಪತಿವಿತ್ತು**ಗಳಾದುದರಿಂದ ಅಂತವರು ಅನಸೂಯರಾಗಿ ಪರಮಭಾಗವತೋತ್ತಮರಾದುದರಿಂದ ಅವರ ಸಮ್ಮತಿಯೇ ಪುರುಷಾರ್ಥ ಪರಾಕಾಷ್ಠೆಯಾದುದರಿಂದ, ಅವರು ವಿಶ್ವಾಸದಿಂದ ಪರಿಗ್ರಹಿಸಲಿ ಎಂದು ಆಶಿಸುತ್ತಾರೆ. ಹಿಂದಿನ ಶ್ಲೋಕಾಭಿಪ್ರಾಯವನ್ನೇ ವಿಶದವಾಗಿ ತಿಳಿಸುತ್ತಾರೆ. ಹೀಗೆ ತಮ್ಮ ಆಶಯವಾದರೆ ಕರ್ತೃತ್ವಾಭಿಮಾನ ಉಂಟಾಗಲಿಲ್ಲವೋ ಎಂದರೆ, ಶ್ಲೇಷೆಯ ಮೂಲಕ ಇಲ್ಲದ ಹಾಗೆ ಪ್ರದರ್ಶಿಸುತ್ತಾರೆ. ವೇದಗಳು ಅಪೌರುಷೇಯವಾದುದರಿಂದ ಅವುಗಳಿಗೆ ಕರ್ತಾ ಯಾರು ಎಂದು ಹೇಳಲ್ಪಡಲಿಲ್ಲವು. ಪೌರುಷೇಯವಾದ ಗ್ರಂಥಗಳಲ್ಲೆಲ್ಲಾ ಯಾರು ಗ್ರಂಥಕರ್ತಾ ಎಂದು ಹೇಳತಕ್ಕದ್ದು ವಿಧಾಯಕವಾದುದರಿಂದ **ವೇಙ್ಕಡೇಶ ವಿಪಶ್ಚಿತಾ** ಎಂದು ಈ ಶ್ಲೋಕದಲ್ಲಿ ಹೇಳಿಕೊಂಡರು. ಶ್ಲೇಷೆಯ ಮೂಲಕ ತನಗೆ ಅಂತರ್ಯಾಮಿಯಾಗಿರುವ ಶ್ರೀನಿವಾಸ ವಿಪಶ್ಚಿತ್ತನಿಂದ ಬರೆಯಲ್ಪಟ್ಟದುದು ಎಂದು ಪಾರತಂತ್ರ್ಯ ಕರ್ತೃತ್ವವನ್ನೇ ಸ್ಥಾಪಿಸಿ, ಆ ಕಾರಣದಿಂದ ಬ್ರಹ್ಮವಿತ್ತುಗಳ ಸಮ್ಮತಿಯು ತಮ್ಮ ಗ್ರಂಥಕ್ಕೆ ಲಭಿಸಬಹುದೆಂದು ಹೇಳುತ್ತಾರೆ.

**ಅರ್ಥವು— ಅಯಂ**-ಈ, **ರಹಸ್ಯತ್ರಯಸಾರಃ**-ಹಿಂದೆ ಉಪೋದ್ಘಾತಾಧಿಕಾರದಲ್ಲೂ "**ಮನಸಿಮಮಯತ್ಪ್ರಸಾದಾತ್ ವಸತಿರಹಸ್ಯತ್ರಯಸಾರೋಯಮ್**" ಹೇಳಿದ ಹಾಗೆ ಇಲ್ಲಿ ನಿಗಮನದಲ್ಲೂ ಹೇಳುತ್ತಾರೆ. ರಹಸ್ಯತ್ರಯ ಸಾರಾಖ್ಯ ಪ್ರಬಂಧವು, **ವೇಙ್ಕಟೇಶ ವಿಪಶ್ಚಿತಾ**-ವೇಙ್ಕಟೇಶ ನಾಮಾಖ್ಯ ಪ್ರಾಜ್ಞರಾದ ವೇದಾಂತದೇಶಿಕರಿಂದ, **ಶರಣ್ಯ ದಂಪತಿವಿದಾಂ**-ಶರಣ ಹೋಗಲು ಯೋಗ್ಯರಾದ ದಂಪತಿಗಳಾದ ಲಕ್ಷ್ಮೀನಾರಾಯಣರ ಸ್ವರೂಪ ಸ್ವಭಾವ ಉಪಾಯೋಪೇಯ ಭಾವವೆಲ್ಲವನ್ನೂ ತಿಳಿದ ಶ್ರೀ ಪರಾಶರ ನಮ್ಮಾಳ್ವಾರ್ ಮೊದಲಾದ ಬ್ರಹ್ಮವಿತ್ತಾಗಳಗೆಲ್ಲಾ, **ಸಂಮತಃ**-ಉಪಾದೇಯವಾಗುವ ಹಾಗೆ, **ಸಮಗೃಹ್ಯತ**-ಸಙ್ಗ್ರಹಿಸಲ್ಪಟ್ಟಿತು.

**ತಾತ್ಪರ್ಯ— ರಹಸ್ಯತ್ರಯ ಸಾರೋಽಯಂ**-ತಮ್ಮ ಗ್ರಂಥಕ್ಕೆ ನಿಗಮನದಲ್ಲೂ ರಹಸ್ಯತ್ರಯಸಾರವೆಂದು ಹೇಳಿದರು. ರಹಸ್ಯತ್ರಯಗಳ ಸಾರವತ್ತಾದ ಅರ್ಥಗಳುಳ್ಳದು ಎಂಬರ್ಥವಾಗಬಹುದು; ಅಥವಾ ರಹಸ್ಯತ್ರಯವೇ ಶಾಸ್ತ್ರದಲ್ಲೆಲ್ಲ ಸಾರಭೂತವಾಗಿ ಸಾರತಮವೆಂದು ಪ್ರತಿಪಾದಿಸುವಂತಾದ್ದು ಎಂದರ್ಥವಾದರೂ ಆಗಬಹುದು. "**ಭಜೇತ್ ಸಾರತಮಂ ಶಾಸ್ತ್ರೇ**" ಎಂದಲ್ಲವೇ ಸಾರನಿಷ್ಕರ್ಷೆಯಲ್ಲಿ ಹೇಳಲ್ಪಟ್ಟದುದು. ವಿಶಿಷ್ಟಾದ್ವೈತಿಗಳೇ ಇವು ಸಾರತಮವೆಂಡು ಭಾವಿಸಿ ಸಾಂಪ್ರದಾಯಿಕವಾಗಿ ಇವರಿಗೆ ಬಂದಿರುವದು. ಇತರ ಸಿದ್ಧಾನ್ತಿಗಳು ಇವುಗಳ ಮಹಿಮೆಯನ್ನು ಅರಿಯರು. ನಮ್ಮಾಳ್ವಾರವರು ಇವುಗಳ ಮಹಿಮೆಯನ್ನು ಅನೇಕ ಕಡೆ ಪ್ರದರ್ಶಿಸಿರುತ್ತಾರೆ.

**ವೇಙ್ಕಟೇಶ ವಿಪಶ್ಚಿತಾ** ಎಂಬ ಪ್ರಯೋಗದಿಂದ ಮೇಲೆ ಮೇಲೆ ತೋರುವದು ವೇದಾಂತ ದೇಶಿಕರೆಂಬ ವಿಪಶ್ಚಿತ ಪ್ರಾಜ್ಞರಿಂದ; **ವಿಪಶ್ಚಿತ್** ಎಂದರೆ ವಿಶೇಷಣ ಪಶ್ಯ ಚೇತಸೇತಿ ವಿಪಶ್ಚಿತ್ ಎಂಬ ವುತ್ಪತ್ತಿಯ ಮೂಲಕ ವೈಲಕ್ಷಣ್ಯವನ್ನು ಕಂಡು ಹಿಡಿಯುವ ಜ್ಞಾನವುಳ್ಳವನು; ಶ್ರೀ ಭಾಷ್ಯಕಾರರು ವಿವಿಧಂ ಪಶ್ಯನ್ತಿ ಚಿತ್ತಂಯಸ್ಯೇತಿ ವಿಪಶ್ಚಿತ ಎಂದು ವಿವಿಧವಾಗಿ ನೋಡುವ ಚಿತ್ತವುಳ್ಳವನು ಮಹಾಪ್ರಾಜ್ಞನೆಂದು ಅರ್ಥ ಮಾಡಿರುತ್ತಾರೆ. ತೈತ್ತರೀಯ ಆನಂದ ವಲ್ಲಿಯಲ್ಲಿ "**ಬ್ರಹ್ಮಣಾ ವಿಪಶ್ಚಿತಾ**" ಏಂದು ಪರಮಾತ್ಮನನ್ನು ಕುರಿತೇ ಹೇಳಿರುವದರಿಂದ ಆತನೇ ನಿರುಪಾಧಿಕ ವಿಪಶ್ಚಿತ್ವವುಳ್ಳವನು; ಆದುದರಿಂದ ಈ ಗ್ರಂಥವು ಆ ಶ್ರೀನಿವಾಸನೇ ಇವರಲ್ಲಿ ಅಂತರ್ಯಾಮಿಯಾಗಿ ಬರೆಸಿದನೆಂದೂ ಅರ್ಥಮಾಡಬಹುದು; ಅಥವಾ ತಿರುವೇಙ್ಗಡಮುಡಿಯಾನನೇ ಈ ವೇದಾಂತದೇಶಿಕ ರೂಪದಲ್ಲಿ ಒಂದು ಅಂಶಾವತಾರ ಮಾಡಿ ಆತನೇ ಸ್ವಯಂ ಬರೆದನು ಎಂದೂ ಅರ್ಥ ಹೇಳಬಹುದು; ವೇಙ್ಕಟೇಶಾತ್ಮಕ ವೇದಾಂತ ದೇಶಿಕರಿಂದ ಎಂಬ ಸಾಮಾನ್ಯಾರ್ಥವನ್ನು ಪರಿಗ್ರಹಿಸಬಹುದು. ಅಥವಾ ವೇಙ್ಕಟೇಶ ವಿಪಶ್ಚಿತ್ತಿನ ಸಂಬಂಧವಾದ ಘಂಟಾವತಾರವೆಂಬುದು ಏರ್ಪಟ್ಟಿರುವುದರಿಂದಾಗಲಿ

**ವೇಙ್ಕಟೇಶ ವಿಪಶ್ಚಿತಾ**" ಎಂಬ ಪ್ರಯೋಗವು "**ಸಾಕ್ಷಾನ್ನಾರಯಣೋ ದೇವಃ ಕೃತ್ವಾ ಮರ್ತ್ಯ ಮಯೀಂತನುಮ್ । ಮಗ್ನಾನುದ್ಧರತೇ ಲೋಕಾನ್ ಕಾರುಣ್ಯಾಚ್ಛಾಸ್ತ್ರ ಪಾಣಿನಾ**" ಎಂಬುದು ಅನುಸಂಧೇಯವು.

**ಶರಣ್ಯದಂಪತಿವಿದಾಂ**-ನಮಗೆ ಪರತತ್ತ್ವವೇ "**ಶ್ರೀಮಾನ್ನಾರಯಣೋ ನಃ ಪತಿರಖಿಲ ತನುರ್ಮುಕ್ತಿದೋ ಮುಕ್ತಭೋಗ್ಯಃ**" ಎಂದು ಹೇಳಿರುವದರಿಂದ, ದಂಪತಿಗಳಿಬ್ಬರೂ ಸೇರಿ ಪರತತ್ತ್ವವೆಂಬ ಭಾವವನ್ನು "**ದಂಪತಿ**" ಎಂಬ ಪ್ರಯೋಗ ದಿಂದ ಸೂಚಿಸಿರುತ್ತಾರೆ. ಶರಣರಾಗಿರಲು ಅರ್ಹರು ಯಾರೋ ಅವರು ಶರಣ್ಯರು. ಆದುದರಿಂದ ಉಪಾಯರಾಗಿರಲು ಲಕ್ಷ್ಮಿಯೂ ನಾರಾಯಣರೂ ಇಬ್ಬರೂ ಅರ್ಹರು ಎಂದು ತಿಳಿಸುವುದರ ಮೂಲಕ ಲಕ್ಷ್ಮಿಗೆ ಉಪಾಯ ಕೋಟಿಯಲ್ಲಿ ಅನ್ವಯವಿಲ್ಲವೆಂಬ ವಾದವನ್ನು ನಿರಾಕರಿಸಿರುತ್ತಾರೆ. ಸ್ವಾಮಿ ಯತಿರಾಜರೂ ಶರಣಾಗತಿ ಗದ್ಯದಲ್ಲಿ "**ನಿತ್ಯಾನಪಾಯಿನೀಂ ಶ್ರಿಯಂ ದೇವೀಂ ಅಶರಣ್ಯ ಶರಣ್ಯಾಂ ಶರಣ ಮಹಂ ಪ್ರಪದ್ಯೇ**'' ಎಂದೇ ಪ್ರಯೋಗಿಸಿರುತ್ತಾರೆ. ಶ್ಲೋಕದಲ್ಲಿ **ಕೊರಮುದಿ. ಯಾರ** ಎಂದು ಹೇಳಲ್ಪಟ್ಟಿರುವರು ಯಾರೆಂಬ ವಿಚಾರದಲ್ಲಿ ಇಲ್ಲಿ **ಶರಣ್ಯ ದಂಪತಿ ವಿದಾಂ** ಎಂದು ವಾಖ್ಯಾನಮಾಡಿದರು. ಪರಬ್ರಹ್ಮಸ್ವರೂಪ ರೂಪಾದಿಗಳನ್ನೆಲ್ಲಾ ಚನ್ನಾಗಿ ವಿಮರ್ಶಿಸಿ ತಿಳಿದ ಬ್ರಹ್ಮವಿತ್ತುಗಳು ಎಂಬರ್ಥವು.

ಈ ಗ್ರಂಥವನ್ನು ಹಯಗ್ರೀವರೇ ವಕ್ತಾವಾಗಿ ಅವರು ಹೇಳಿದುದನ್ನು ನೀವು ಬರೆದಿರಲ್ಲಾ, ಅದರಿಂದ ನಿಮಗೆ ಆಗತಕ್ಕ ಪ್ರಯೋಜನವೇನೂ ಇಲ್ಲವೋ ? ಖ್ಯಾತಿ ಲಾಭ ಪೂಜೆಗಳು ಯಾವುವು ಬೇಡವೋ? ಎಂದರೆ ಅದಕ್ಕಾಗಿ ಸ್ವಾಮಿಯನ್ನು ಪ್ರಾರ್ಥಿಸುವದಿಲ್ಲವು. ಆದರೂ ಒಂದು ಮಾತ್ರ ಬೇಕು. ಅದನ್ನು ಹಯಗ್ರೀವರೇ ಉಂಟುಮಾಡುವರು. ಅದು ಯಾವುದೆಂದರೆ **ಶರಣ್ಯದಂಪತಿವಿದಾಂ ಸಮ್ಮತಿ ಯಿಂದ ಪರಿಗ್ರಹಿಸೋಣವು. ಸಮ್ಮತಃ ಸಮಗೃಹ್ಯತ**, ಅವರ ಅನುಮತಿ ದೊರೆತು ಪರಿಗ್ರಹಿಸಲಿ ಎನ್ನುತ್ತಾರೆ. ಇದೇ ಪುರುಷಾರ್ಥಕಾಷ್ಠಾಧಿಕಾರದಲ್ಲಿ "**ಶುದ್ಧಾನಾಂತು ಲಭೇಮಹಿಸ್ಥಿರಧಿಯಾಂ ಶುದ್ಧಾಂತ ಸಿದ್ಧಾನ್ತಿನಾಂ । ಮುಕ್ತೈಶ್ವರ್ಯ ದಿನ ಪ್ರಭಾತ ಸಮಯಾ ಸತ್ತಿಂ ಪ್ರಸತ್ತಿಂ ಮುಹುಃ**" ಎಂದು ಹೇಳಲ್ಪಟ್ಟಿತು. ಬ್ರಹ್ಮವಿತ್ತುಗಳಾದ ಪರಮಭಾಗವತೋತ್ತಮರು ಪ್ರಸನ್ನತೆಯಿಂದ ಪರಿಗ್ರಹಿಸಬೇಕು. ಸಾಧಾರಣ ಜನವು ಪರಿಗ್ರಹಿಸಿದರೆ ಪರಿಗ್ರಹಿಸಲಿ, ಇಲ್ಲವಾದರೆ ಹೋಗಲಿ, ಪರಮೈಕಾನ್ತಿಗಳು ಮಾತ್ರ ಪರಿಗ್ರಹಿಸಲಿ ಎಂದು ಆಶಿಸುತ್ತಾರೆ. ಯಾವ ಅಧ್ಯಾತ್ಮ ಗ್ರಂಥಕ್ಕಾಗಲಿ ಭಾಗವತ ಪರಿಗ್ರಹವಿಲ್ಲವಾದರೆ ಅದು ನಿರರ್ಥಕ ವೆಂಬ ಭಾವವು.

ಮತಾಂತರಸ್ಥರ ಸಂಪ್ರದಾಯಾಂತರ ಸಂಮತಿಯು ಹೇಗೆ ದೊರತೀತು ? ಎಂದರೆ ಅಂತಹವರ ಸಮ್ಮತಿಯು ತಮಗೆ ಬೇಕೇ ಇಲ್ಲವು. ಸ್ವಾಮಿಯು ಮೆಚ್ಚಬೇಕು.

ಆತನ ಸಂಪ್ರೀಣನವು ದೊರೆಯಬೇಕು. ಆತನು ಕಣ್ಣಿಗೆ ಕಾಣುವದಿಲ್ಲವು. ಆತನ ಪ್ರಸನ್ನತೆಯು, ಶ್ರೀ ಕೃಷ್ಣಾರ್ಪಣಮಸ್ತು ಎಂದು ಹೇಳುವದರಿಂದ ಅಗತ್ಯ ಬೇಕು. ಆತನ ಅನುಗ್ರಹವು ದೊರೆಯಿತು ಎಂದು ಕಂಡುಹಿಡಿಯುವ ಬಗೆ ಹೇಗೆ? ಎಂದರೆ **ತದೀಯರ** ಪ್ರಸನ್ನತೆಯು ಉಂಟಾದರೆ ಆತನೂ ಸಂತುಷ್ಟನಾದನು ಎಂದು ಭಾವಿಸಬಹುದಾದುದರಿಂದ ಅದನ್ನು ಆಶಿಸುತ್ತಾರೆ.

ಶ್ರೀಮದ್ರಹಸ್ಯತ್ರಯದ ಸಾರಭೂತ ಅರ್ಥಗಳನ್ನೆಲ್ಲಾ ಈ ಪ್ರಬಂಧವು ವಿಶದೀಕರಣ ಮಾಡುವದರಿಂದ ಈ ಪ್ರಬಂಧವು ನಾರರತ್ನವಾಗಿ ಪರಮೋಪಾದೇಯ ವೆಂಬುವದರಲ್ಲಿ ನಿಸ್ಸಂದೇಹವಾದ ವಿಷಯವು.

ಇಂತಹ ಅಪೋಘ ಗ್ರಂಥವು ತಮಿಳ್ ಸಂಸ್ಕೃತವೂ ಸೇರಿದುದಾಗಿ ಎರಡೂ ತಿಳಿಯದ ಜನಗಳಿಗೆ ತಿಳಿಯುವ ಹಾಗೆ ಮಾಡುವದು ದಾಸನ ಇತಿಕರ್ತವ್ಯತೆಯೆಂದು ಭಾವಿಸಿ ಸರ್ವೇಶ್ವರನ ಮುಖೋಲ್ಲಾಸಕ್ಕಾಗಿ ಪರಮ ಭಾಗವತೋತ್ತಮರುಗಳ ಸಮ್ಮತಿಯೊಂದಿಗೆ ಪ್ರಪನ್ನರಿಗೆ ಉಪಯೋಗವಾಗಲೆಂಬ ಆಶಯದಿಂದ **ಶ್ರೀ ಶ್ರೀನಿವಾಸನ ಪಾದಕಮಲದಲ್ಲಿ** ಭಕ್ತಿ ವಿಶ್ವಾಸಗಳಿಂದ **ಸಮರ್ಪಿಸಿ,** ದಾಸನಿಗೆ ಉಪದೇಶಕರಾಗಿ ಅಸದೃಶೋಪಕಾರವನ್ನೆಸಗಿ ಆತ್ಮೋಜ್ಜೀವನವನ್ನುಂಟು ಮಾಡಿದ ಶ್ರೀಮದ್ವೇದಮಾರ್ಗ ಪ್ರತಿಷ್ಠಾಪನಾಚಾರ್ಯರಾಗಿ, ಪರಮಹಂಸ ಪರಿವ್ರಾಜಕಾಚಾರ್ಯರಾಗಿ, ಸರ್ವತಂತ್ರ ಸ್ವತಂತ್ರೋಭಯವೇದಾಂತಾಚಾರ್ಯರಾಗಿ, ಶ್ರೀಮನ್ನಾಥಮುನಿ ಶ್ರೀಮದ್ಯಾಮುನಮುನಿ ಶ್ರೀಮದ್ರಾಮಾನುಜ ಮುನಿ ಮುನಿತ್ರಯ ರೂಪಸಿದ್ಧಾನ್ತ ಸ್ಥಾಪನಾಚಾರ್ಯರಾದ **ಶ್ರೀ ಶ್ರೀನಿವಾಸ ಮಹಾದೇಶಿಕರವರಲ್ಲೂ** ಸಮರ್ಪಿಸಿರುತ್ತೇನೆ.

**ಶ್ರೀ ಕೃಷ್ಣಾರ್ಪಣಮಸ್ತು.**

**ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಕೃತಾರ್ಥೋಽಸ್ಮಿ ಕೃಪಾನಿಧೇ ।**
**“ಅದ್ಯಮೇ ಸಫಲಂ ಜನ್ಮ ಜೀವಿತಂ ಚ ಸುಜೀವಿತಮ್”**

ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯ ನಮಃ ಎಂಬಲ್ಲಿಗೆ ಶ್ರೀ ನಿಗಮಾನ್ತ ದೇಶಿಕರ ಶ್ರೀಮದ್ರಹಸ್ಯತ್ರಯಸಾರಕ್ಕೆ ಆಚಾರ್ಯ **ಹೃದಯಾನ್ವೇಷಿಣೀ** ಎಂಬ ಅರ್ಥ ತಾತ್ಪರ್ಯಗಳು ಸಂಪೂರ್ಣವು.

ಶ್ರೀನಿವಾಸ ಮಹಾದೇಶಿಕಾಯನಮಃ

# ನಮ್ಮಲ್ಲಿ ದೊರೆಯುವ ಗ್ರಂಥಗಳು

---

## ಆಚಾರ್ಯ ಹೃದಯಾನ್ವೇಷಿಣಿ ಎಂಬ ಕನ್ನಡ ಪ್ರತಿಪದಾರ್ಥ ತಾತ್ಪರ್ಯಗಳೊಂದಿಗೆ ಶ್ರೀಮನ್ನಿಗಮಾಂತ ದೇಶಿಕರವರ

೧. ಶ್ರೀಮದ್ರಹಸ್ಯತ್ರಯ ಸಾರವು ೯ ಪುಸ್ತಕಗಳು . . . . [illegible] [illegible] ೦

೨. ಶ್ರೀಮದ್ಭಗವದ್ಗೀತೆಯ ಮೂಲಕ್ಕೂ ಶ್ರೀಭಾಷ್ಯಕ್ಕೂ ಪ್ರತಿಪದಾರ್ಥ ತಾತ್ಪರ್ಯಗಳೂ ತಾತ್ಪರ್ಯ ಚಂದ್ರಿಕಾರ್ಥಗಳೂ, ಯಾಮುನ ಮುನಿಗಳ ಗೀತಾರ್ಥ ಸಂಗ್ರಹಾರ್ಥ ತಾತ್ಪರ್ಯಗಳೂ 2660 ಪುಟಗಳು. 4 ಸಂಪುಟಗಳು ೩, ೭, ೪, ೪ ರೂಪಾಯಿಗಳು ೧೮ ೦ ೦

೩. ಯಮುನ ಮುನಿಗಳ ಚತುಶ್ಲೋಕೀ . . . . . . . ೦ ೪ ೦

೪. ಯಾಮುನ ಮುನಿಗಳ ಸ್ತೋತ್ರ ರತ್ನ ಪ್ರಿಂಟಾಗುತ್ತಲಿದೆ

೫. ಶ್ರೀ ವಿಷ್ಣು ಸಹಸ್ರನಾಮಕ್ಕೆ ಶ್ರೀ ಪರಾಶರಭಟ್ಟರವರ ಭಾಷ್ಯವನ್ನನುಸರಿಸಿ ಅರ್ಥವು . . . . . . . . . ೦ ೧೪ ೦

೬. ಶ್ರೀ ಸೂಕ್ತಕ್ಕೆ ನಂಜೀಯರವರ ಭಾಷ್ಯವನ್ನನುಸರಿಸಿ ಪ್ರತಿಪದಾರ್ಥ ತಾತ್ಪರ್ಯಗಳು . . . . . . . . . . ೧ ೧೦ ೦

೭. ಶ್ರೀ ಪರಾಶರಭಟ್ಟರವರ ಅಷ್ಟ ಶ್ಲೋಕೀಯು ಪ್ರಿಂಟಾಗುತ್ತಲಿದೆ

ಸಿ. ಎಂ. ವಿಜಯರಾಘವಾಚಾರ್

ರಿಟೈರ್ಡ್ ಸರ್ಕಲ್ ಇನ್ಸ್‌ಪೆಕ್ಟರು, ಬಸವನಗುಡಿ, ಬೆಂಗಳೂರು 4

ಮಹಾತ್ಮ [illegible], 52, ಗಾಂಧೀ ಬಜಾರ್, ಬೆಂಗಳೂರು 4